# ಕಸ್ತೂರಿ

ಜನೆವರಿ, ೧೯೫೮



ಬೆಲೆ: ೧೨ ಆಣೆ
( ೭೫ ನಯೇ ಪೈಸೆ )

ಜ್ಞಾನ ಮತ್ತು ಮನೋರಂಜನ

# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ನೆ ದಿನಾಂಕ ಪ್ರಕಟವಾಗುವದು.

---

ಮುಖ್ಯ ಸಂಪಾದಕರು :

ಮೊಹರೆ ಹನುಮಂತರಾಯರು

---

ಪ್ರಕಾಶಕರು :

ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

---

ಕಚೇರಿ :

ಸಂಯುಕ್ತ ಕರ್ನಾಟಕ ಕಾರ್ಯಾಲಯ

ಹುಬ್ಬಳ್ಳಿ

---

ಮುದ್ರಕರು :

ಸಂಯುಕ್ತ ಕರ್ನಾಟಕ ಮುದ್ರಣಾಲಯ

ಹುಬ್ಬಳ್ಳಿ

---

ಮುಖಪುಟ ಚಿತ್ರ :

ತುಂಗಭದ್ರ ಜಲಾಶಯದ ಬಳಿ

ವೈಕುಂಠ ದಿಬ್ಬದ ಮೇಲಿನ

ದೀಪಸ್ತಂಭ

[ಕೃಷ್ಣ ಪೋತದಾರ]

---

ಚಂದಾ ದರ :

| | | |
|---|---|---|
| ವಾರ್ಷಿಕ (ಅಂಚೆಸೇರಿ) | | ರೂ. ೮.೦೦ |
| ಅರ್ಧ ವರ್ಷ | — | ರೂ. ೪.೫೦ |
| ಬಿಡಿ ಸಂಚಿಕೆ | — | ರೂ. ೦.೭೫ |


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು.. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು; ಆದರೂ ಸಾಮಾನ್ಯವಾಗಿ ಸ್ವೀಕೃತ ಲೇಖಗಳ ಸ್ವೀಕಾರದ ಸುದ್ದಿಯನ್ನು ಲೇಖ ತಲುಪಿದ ನಾಲ್ಕು ವಾರದೊಳಗಾಗಿ ಲೇಖಕರಿಗೆ ತಿಳಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನುಕಾಯ್ದಿಟ್ಟುಕೊಳ್ಳುವದೊಳಿತು.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ




ವರ್ಷ ೨ ಜನೆವರಿ ೧೯೫೮ ಸಂಚಿಕೆ ೫

# ಭಕ್ತಿ ಕೊಡುವ ಕಾಣ್ಕೆ

## ರವೀಂದ್ರರ ವಿಚಾರದ ಮನನ

ಕಾಕಾ ಕಾಲೇಲಕರರಿಂದ



ಚರ್ಮ ಚಕ್ಷುಸ್ಸು ವಿಶ್ವವನ್ನೆಲ್ಲ ಜಗತ್-ರೂಪದಲ್ಲೇ ಕಾಣುತ್ತದೆ. ಆದರೆ ಭಕ್ತನ ದೃಷ್ಟಿಯಲ್ಲಿ ಈ ವಿಶ್ವವು ಜಗನ್ಮಾತೆಯ ಪ್ರೇಮದ ಮುದ್ರೆಯಾಗಿದೆ. ಚರ್ಮಚಕ್ಷುಸ್ಸು ಹೇಳುತ್ತದೆ: ನನಗೆ ಮರ ಕಾಣುತ್ತದೆ. ಎಲೆಗಳು ಕಾಣುತ್ತವೆ, ಹಣ್ಣು-ಹೂಗಳು ಕಾಣುತ್ತವೆ; ಆಕಾಶದಲ್ಲಿ ಹಾರುವ ಹಕ್ಕಿಗಳೂ ಅದಕ್ಕೂ ಮೇಲೆ ತೇಲುವ ಮೋಡಗಳೂ ಕಾಣಿಸುತ್ತವೆ.

ಸರಿ, ಆದರೆ ಇದರಿಂದ ನಮಗೇನು ? ಒಂದು ಕ್ಷಣ ನೋಡಿದ್ದಾಯಿತು, ಅವುಗಳನ್ನು ಹೊಗಳಿದ್ದಾಯಿತು ; ಮತ್ತೆ ನಮ್ಮ ಕೆಲಸ ನಮಗೆ. ಕಣ್ಣುಗಳಿದ್ದೂ ಪೂರ್ಣವಾಗಿ ಕಾಣುವುದಿಲ್ಲ, ಬುದ್ಧಿಯಿದ್ದೂ ಪೂರ್ಣವಾಗಿ ತಿಳಿಯುವುದಿಲ್ಲ, ಹೃದಯವಿದ್ದೂ ಪೂರ್ಣವಾಗಿ ಪ್ರತೀತಿಯಾಗುವುದಿಲ್ಲ—ಏಕೆಂದರೆ ಪ್ರೇಮದ ಪರುಷಶಿಲೆಯ ಸ್ಪರ್ಶ ಅವಕ್ಕೆ ದೊರೆತಿಲ್ಲ.

ಆದರೆ ಹೃದಯದಲ್ಲಿ ಯಾವ ಕ್ಷಣ ಭಕ್ತಿಯ ಉದಯವಾಯಿತೋ ಆ ಕ್ಷಣ ಪ್ರೇಮ ರಸಾಯನದ ಸವಿ ಹತ್ತುತ್ತದೆ, ಆ ಕ್ಷಣ ದಿವ್ಯದೃಷ್ಟಿ ತಾನಾಗಿ ಲಭಿಸದಿರುವುದಿಲ್ಲ. ವಿಶ್ವದೃಷ್ಟಿಯೆಂದರೇನೇ ಪ್ರೇಮದೃಷ್ಟಿ.

ಅಕ್ಷರಗಳ ಗುರುತಿಲ್ಲದಾಗ ಪತ್ರಗಳೆಲ್ಲ ಬರಿ ಅಂಕುಡೊಂಕು ಗೆರೆಗಳ ಮುದ್ದೆಯೇ. ಆದರೆ ಅಕ್ಷರ ಜ್ಞಾನವಾದೊಡನೆ ಆ ಗೆರೆಗಳೇ ವಾಕ್ಯಗಳಾಗಿ ವಾಕ್ಯವಾಕ್ಯದಿಂದಲೂ ಅರ್ಥಸ್ಫುರಣವಾಗಲಾರಂಭಿಸುತ್ತದೆ. ಆ ಮೇಲೆ ಮನುಷ್ಯ,

‘ಮಂಗಲ ಪ್ರಭಾತ’ ದಿಂದ ರೂಪಾಂತರ

ಇದೇನು ಬರಿ ಗೆರೆಗಳ ಮುದ್ದೆ, ಚೆಂದವಿದ್ದರೇನಾಯಿತು ?—ಎಂದು ಕೇಳಲಾರ. ಪತ್ರದ ಭಾವ ಅರ್ಥವಾಗುತ್ತಲೇ ಅವನ ಹೃದಯ ತುಂಬಿ ಬಂದು, "ಎಲಾ! ಇವು ಬರಿ ಗೆರೆಗಳಲ್ಲ. ಅವುಗಳ ದುಂಡಾದ ಆಕಾರಕ್ಕೆ ಅಷ್ಟೇನೂ ಮಹತ್ವವಿಲ್ಲ. ಈ ಗೆರೆಗಳ ಮೂಲಕ ಉಕ್ಕಿಬರುವ

> "ಯಾರು ಮಾಡುವರೆನ್ನ ಕೆಲಸವ?"
> ಸಂಜೆ ಸೂರ್ಯನು ಕೇಳಿದ :
> ಉತ್ತರವ ಕೊಡಲಿಲ್ಲ ಯಾರೂ ;
> ಕೊನೆಗೆ ಮಣ್ಣಿನ ಹಣತೆಯೊಂದು
> "ಸಾಧ್ಯವಾದರೆ ನಾನು ಮಾಡುವೆ"
> ಎಂದು ಮೆಲ್ಲನೆ ಹೇಳಿತು.
>
> —ರವೀಂದ್ರ

ಹೃದಯ ಮಾತಾಡುತ್ತಿದೆ. ಬರಿ ಮಾತಾಡುವುದೇನು, ತೋಳುಗಳ ನೆರವಿಲ್ಲದೆ ಹೃದಯ ಹೃದಯಕ್ಕೆ ತೆಕ್ಕೆ ಬೀಳುತ್ತಿದೆ." ಚರ್ಮಚಕ್ಷುಸ್ಸಿಗೆ ಯಾವುದು ಬರಿ ಕಾಗದವಾಗಿತ್ತೋ ಅದು ಪ್ರೇಮಚಕ್ಷುಸ್ಸಿಗೆ ಹೃದಯರಸಾಯನವಾಗಿದೆ. ಅದರ ವಿಸ್ತಾರ ಎಲ್ಲೆಡೆಗೂ ಇದೆ, ಎಲ್ಲಡೆಗೂ ಅದರ ವಾಣಿಯೇ ಕೇಳಿಸುತ್ತದೆ, ಎಲ್ಲೆಡೆಗೂ ಅದರ ಸೋಂಕಿನ ಅರಿವಾಗುತ್ತದೆ. ಈಗ ಬೇರೆ ಎಂಬ ಅನುಭವ ಲೇಶವೂ ಉಳಿದಿಲ್ಲ:

ಅಹಾ ! ಇದೇ ನಿನ್ನ ಪ್ರೇಮ
ಮನವ ಸೆಳೆವುದು—
ಬಂಗಾರದ ಬಿಸಿಲು ಎಲೆಯ
ಮೇಲೆ ಕುಣಿವುದು.

ಅಲಸ ಮಧುರ ಭಾವದಿಂದ
ಮೋಡ ಬಾನನೀಸುವಂದ ;
ಗಾಳಿ ಮೈಯ ಸೋಂಕಿಸೋಂಕಿ
ಅಮೃತವೆರೆವುದು—
ಅಹಾ ! ಇದೂ ನಿನ್ನ ಪ್ರೇಮ
ಮನವ ಸೆಳೆವುದು.

ಎಳೆಬಿಸಿಲಿನ ಧಾರೆಯಲ್ಲಿ
ತೇಲ್ಬುದೆನ್ನ ನಯನ,
ಅದೂ ನನ್ನ ಪ್ರಾಣದೊಡನೆ
ನಿನ್ನ ಸಂಭಾಷಣ:
ನಿನ್ನ ಮೊಗವೆ ಇಣಿಕುತಿದೆ,
ನನ್ನ ಕಣ್ಣ ಹಿಡಿಯುತಿದೆ,
ನನ್ನ ಹೃದಯ ನಿನ್ನ ಪದವ
ಮುಟ್ಟಿ ನಲಿವುದು.

—ರವೀಂದ್ರರು

ಈ ಬಿಸಿಲು, ಈ ಬಾನು, ಈ ಮೋಡ, ಈ ಗಾಳಿ ಇದೆಲ್ಲ ನಿನ್ನ ಪ್ರೇಮವೇ. ಅದರಿಂದ ನನ್ನ ಮನ ಆನಂದತುಂದಿಲವಾದಾಗ ನಿನ್ನ ಪಾದ ತಲವನ್ನೇ ನನ್ನ ಪ್ರಾಣ ಸೋಂಕಿ ಧನ್ಯವಾದಂತೆ.



ಸ್ವರ್ಗ ಮೇಲಕಿದ್ದರೇನು, ಭೂಮಿ ತಾನು ಕೀಳೆ?
ಮೇಲೆ ತಲೆಯು ಇದ್ದರೂನು ಹೃದಯವೇನು ಕೀಳೆ?

—ದಿನಕರ



# ಗೋಕಾಕರೊಡನೆ ಅರ್ಧ ತಾಸು

**೪೦ ನೇ ಕನ್ನಡ ಸಾಹಿತ್ಯ ಸಮ್ಮೇಲನದ
ನಿಯೋಜಿತ ಅಧ್ಯಕ್ಷರ ಸಂದರ್ಶನ**

**ಕುಲಮರ್ವ ಬಾಲಕೃಷ್ಣ**

ಆಕ್ಸ್‌ಫರ್ಡಿನಿಂದ ನಾನು ಹಿಂದಿರುಗಿದ ಮೇಲೆ ಒಮ್ಮೆ ಶಿವರಾಮ ಕಾರಂತರು ನನ್ನನ್ನು ಜೋಗದ ಜಲಪಾತಕ್ಕೆ ಕರೆದೊಯ್ದರು. ಶರಾವತಿಯ ಆ ಜಲಪಾತವನ್ನು ನೋಡಿದಾಗ ನನ್ನ ಜೀವನವೂ ಈ ನದಿಯ ಜೀವನವನ್ನು ಹೋಲುವಂತಿದೆ ಎನಿಸಿತು. ಘಟ್ಟದ ಮೇಲುಗಡೆ ಶರಾವತಿ ನದಿ ವೇಗವಾಗಿ ಹರಿದುಬರುತ್ತದೆ. ಆದರೆ ಪ್ರಪಾತದಲ್ಲಿ ಅದು ಧುಮುಕಿದಾಗ ಅಲ್ಲಿ ನದಿಯಿಲ್ಲ. ಬರಿಯ ತುಂತುರ ತುಷಾರಗಳು ಮಾತ್ರ ಗಾಳಿಯ ಹೆಗಲೇರಿ ಹೊರಟುದನ್ನು ಕಾಣುತ್ತೇವೆ. ಪ್ರಪಾತದ ಕೆಳಗಿನ ಹೊಂಡದ ತಳದ ವರೆಗೆ ಅವು ಹಾಗೆಯೇ ಸಾಗುತ್ತವೆ—ಛಿನ್ನವಿಚ್ಛಿನ್ನವಾಗಿ, ಚೂರುಚಾರಾಗಿ. ಮತ್ತೆ ಅವು ಒಂದುಗೂಡಿ ನದಿಯಾಗುತ್ತವೆ. ಈಗ ಹೊಸ ಅವತಾರ ತಳೆದ ಶರಾವತಿಯ ವೇಗ ಮೊದಲಿಗಿಂತ ಮಿಗಿಲು. ಅದರ ಆತ್ಮವಿಶ್ವಾಸವೂ-ಇಮ್ಮಡಿ.

" ನಾನು ಸಮುದ್ರಯಾನ ಮಾಡುವ ವರೆಗಿನ ನನ್ನ ಸ್ಥಿತಿ ಘಟ್ಟದ ಮೇಲೆ ಹರಿವ ಶರಾವತಿಯಂತೆಯೆ ಇತ್ತು. ಇಂಗ್ಲೆಂಡಿನಲ್ಲಿ ನಾನಿದ್ದ ದಿನಗಳಲ್ಲಿ ನನ್ನ ಮನೋಭೂಮಿಕೆಯೆಲ್ಲ ಚೂರುಪಾರಾಯಿತು. ಅಲ್ಲಿಂದ ಮರಳಿ ಊರಿಗೆ ಹೊರಟಾಗ ನನ್ನ ಆತ್ಮವಿಶ್ವಾಸ, ಸಾಗರವನ್ನು ನಿರಾತಂಕವಾಗಿ ಸೇರಬಲ್ಲೆನೆಂಬ ಶರಾವತಿಯ ವಿಶ್ವಾಸಕ್ಕಿಂತ ಕಡಮೆಯದಿರಲಿಲ್ಲ. ಇಂಗ್ಲೆಂಡಿಗೆ ಹೊರಡುವ ತನಕ ಕನಸಿನ ರೋಮಾಂಚಕ ರಾಜ್ಯದಲ್ಲಿ ನಾನು ವಿಹರಿಸುತ್ತಿದ್ದೆ. ಕಡಲ ಯಾನದೊಂದಿಗೆ ಪಡುವಲ ಗಾಳಿಯ ಸೋಂಕು ನನಗೆ ದೊರೆಯಿತು. ನಾನು ಅವಾಕ್ಕಾದೆ. ಸ್ವಲ್ಪ ಹೊತ್ತು ನಿಬ್ಬೆರಗಾಗಿ ಜೋಗದ ಜಲಪಾತದ ತುಂತುರುಗಳಂತೆಯೇ ಆ ಗಾಳಿ ಒಯ್ದತ್ತ ಹೋಗಿ ಪಶ್ಚಿಮ ಸಂಸ್ಕೃತಿಯ ಆಳದಲ್ಲಿ ಮುಳುಗಿ ಮಿಂದೆ. ಮೇಲಕ್ಕೆದ್ದಾಗ ನಾನು ಕನಸಿನ ಪ್ರಪಂಚವನ್ನು ತೊರೆದು ವಾಸ್ತವಿಕ ಜಗತ್ತಿನಲ್ಲಿ ಕಾಲಿರಿಸಿದ್ದೆ. ನನ್ನ ಆ ಕಾಲದ ಕವನ ಸಂಗ್ರಹಗಳಲ್ಲಿಯೂ ಈಗ ತಾನೇ ಮುಕ್ತಾಯಗೊಂಡ ಕಾದಂಬರಿಯಲ್ಲಿಯೂ ಈ ಮನೋಧರ್ಮಗಳು ಸೂಚ್ಯವಾಗಿವೆ."

ನಾಡಿದು ಬಳ್ಳಾರಿಯಲ್ಲಿ ನಡೆಯಲಿರುವ ೪೦ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ನಿಯೋಜಿತ ಅಧ್ಯಕ್ಷ ಪ್ರಿನ್ಸಿಪಾಲ ವಿನಾಯಕ ಕೃಷ್ಣ ಗೋಕಾಕರು ತಮ್ಮ ಜೀವನ ಸಾಹಿತ್ಯದ ವಿಷಯವಾಗಿ ಹೇಳುವ ಮಾತುಗಳಿವು. ಗೋಕಾಕರದು ಸಾಹಿತ್ಯ ಜೀವನವಲ್ಲ-ಜೀವನಸಾಹಿತ್ಯ. ಇನ್ನೊಂದು ಬಗೆಯಲ್ಲಿ ಹೇಳುವುದಾದರೆ ಸಾಹಿತ್ಯವನಿತೆ ಅವರು ಸಂಪ್ರದಾಯದಂತೆ ಮದುವೆಯಾದ ಮಡದಿಯಲ್ಲ; ಆಕೆಯ ಮೇಲಿನ ಪ್ರೀತಿ ಅವರನ್ನು ಒಂದುಗೂಡಿಸಿದೆ. ಆಕೆಯನ್ನು ತಮಗಾಗಿ ದುಡಿಸಿಕೊಂಡವರಲ್ಲ ಅವರು.

ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಶ್ರೀ ಗೋಕಾಕರು ಆಯ್ಕೆಯಾಗಿರುವರೆಂದ ಕೂಡಲೇ ಈ ವಿಶೇಷ ಸಂದರ್ಭದಲ್ಲಿ ಅವರ ಸಂದರ್ಶನ ತೆಗೆದುಕೊಳ್ಳಬೇಕಾಯಿತು. ಮಧ್ಯಾಹ್ನ ಎರಡು ಗಂಟೆ, ಸೋಮವಾರ ಅಂದು. ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರ ಕೋಣೆಯ ಬಾಗಿಲಲ್ಲಿ ನಿಂತ ಜವಾನ ಕೂಡಲೇ ನನ್ನನ್ನು ಒಳಗೆ ಬಿಟ್ಟ. ಒಳಗಡೆ ಗೋಕಾಕರು ಯಾವುದೋ ಟೈಪು ಮಾಡಿದ ಕಾಗದವನ್ನು ಓದುತ್ತ ಕುಳಿತಿದ್ದರು. ತೆರೆದ ಪೆನ್ನು ಅವರ ಬಲಕೈಯ್ಯಲ್ಲಿತ್ತು. ನನ್ನನ್ನು ನೋಡಿದೊಡನೆ ಅವರ ಮುಖದಲ್ಲಿ ಸಿಹಿಯಾದ ನಗೆಯೊಂದು ಮೂಡಿತು. "ಬನ್ನಿ" ಎಂದು ಸ್ವಾಗತಿಸಿದರು. ಹೆಚ್ಚು ಗಂಭೀರವಲ್ಲದ, ಆದರೆ ಮಿತಭಾಷಿಯಾದ ಅಚ್ಚುಕಟ್ಟಿನ ವ್ಯಕ್ತಿ ಅವರು ಎಂದು ನನಗೆ ಮೊದಲಿನಿಂದಲೂ ಗೊತ್ತಿತ್ತು. ನಿಷ್ಠುರವಾದ ನಿಯಮ, ಅಚ್ಚುಕಟ್ಟುತನವನ್ನು ಕಾಯ್ದುಕೊಳ್ಳುವ ಅವರು ಜನರೊಡನೆ ನಯವಾಗಿ ವ್ಯವಹರಿಸುವವರು. ಅವರು ಮಾತಿಗೆ ತೊಡಗಿದರೆಂದೊಡನೆಯೇ ಅದರಲ್ಲಿ ಒಂದು ಅಧಿಕೃತ ವಿಶ್ವಾಸದ ಮುದ್ರೆಯಿರುವುದನ್ನು ಕಂಡುಕೊಂಡೆ. ಶಾಂತ ಆದರೆ ಚುರುಕು ಪ್ರಕೃತಿಯಿದ್ದರೂ ತಮ್ಮ ಅಸ್ತಿತ್ವ ಮತ್ತು ಪ್ರಭಾವವನ್ನು ಬೇರೆಯವರ ಲಕ್ಷ್ಯದಿಂದ ಉದ್ದೇಶಪೂರ್ವಕ ಮರೆಸುತ್ತಿದ್ದಾರೇನೋ ಎನಿಸುತ್ತದೆ, ಸಭೆ-ಸಮಾರಂಭಗಳಲ್ಲಿ ಅವರನ್ನು ನೋಡಿದರೆ. ಏಕಾಂತದಲ್ಲಿಯೂ ಅಷ್ಟೇ ಶಾಂತರು, ಉದ್ಯೋಗಶೀಲರು; ಬಿಡುವು ಎಂದರೆ ಏನು ಎನ್ನುವ ಸ್ವಭಾವ.

ಅವರ ಪ್ರಶ್ನಾರ್ಥಕ ನೋಟಕ್ಕೆ ಉತ್ತರ ಕೊಡುತ್ತ ನಾನು ಹೇಳಿದೆ: "ತಮ್ಮ ಸಂದರ್ಶನ ತೆಗೆದುಕೊಳ್ಳಲೆಂದು ಬಂದಿದ್ದೇನೆ" ನನ್ನಿಂದ ಮುಂದಿನ ಮಾತುಗಳು ಬರುವ ಮೊದಲೇ ಅವರು ಕೇಳಿದರು: "ಯಾಕಾಗಿ ?"

"ಕಸ್ತೂರಿಯಲ್ಲಿ ಪ್ರಕಟಣೆಗಾಗಿ."

"ಕಸ್ತೂರಿಯಲ್ಲಿ ಪ್ರಕಟಣೆಗಾಗಿ ?"

ಈ ಪ್ರಶ್ನೆ ಕೇಳುತ್ತಿದ್ದಂತೆಯೇ ಅವರ ಕಣ್ಣುಗಳಲ್ಲಿ ಸಂತೋಷದ ಮಿನುಗು ಮೂಡಿ ಮಾಯವಾಯಿತು. ತತ್ಕ್ಷಣ ಅವರ ನೆನಪು ಅರ್ಧವರ್ಷ ಹಿಂದೆ ಹೋಗಿ ಬಂತು. ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ನಾವು ಮೊದಲಬಾರಿ

ಮಾತನಾಡಿದ ವಿಷಯಗಳನ್ನು ಸ್ಮರಿಸಿಕೊಂಡರು. ಆ ಜನಸಂದಣಿಯ ನಡುವೆ ಇನ್ನೂ ದೀಪ ಬೆಳಗಿರದ ಮುಸ್ಸಂಜೆಯಲ್ಲಿ ನೋಡಿ ಮಾತನಾಡಿದ ವ್ಯಕ್ತಿ ನಾನೇ ಹೌದೋ ಅಲ್ಲವೋ ಎಂಬ ಸಂದೇಹ. ಅದೂ ಅಲ್ಲದೆ ನನ್ನ ದೈಹಿಕ ಬದಲಾವಣೆ ಅವರ ಲಕ್ಷ್ಯಕ್ಕೆ ಬಂದಿತ್ತು. ಗೋಕಾಕರ ನೆನಪು ಅಷ್ಟು ತೀಕ್ಷ್ಣವಾದುದು.

ಯಾವ ಅವಕಾಶವನ್ನೂ ಅಪೇಕ್ಷಿಸದೆ ಅವರು ನನಗೆ ಸಂದರ್ಶನವೀಯಲು ಸಿದ್ಧರಾದರು. ಅಷ್ಟರಲ್ಲಿ ಅವರ ಸಹೋದ್ಯೋಗಿಗಳೊಬ್ಬರು ಬಂದುದರಿಂದ ನನಗೆ ಹದಿನೈದು ನಿಮಿಷ ವಿಶ್ರಾಂತಿ ದೊರೆಯಿತು. ಅವರೊಡನೆ ಮಾತುಕತೆ ಮುಗಿಸಿದವರೇ ನನ್ನ ಕಡೆಗೆ ತಿರುಗಿ "ಬನ್ನಿ" ಎಂದಾಗ ನಾನು "ತಮ್ಮ ಬಾಲ್ಯದ ದಿನಗಳಲ್ಲಿ ಸವಣೂರಿಗೆ ಹೈಸ್ಕೂಲಾಗಿತ್ತೇ ?'' ಎಂದು ಕೇಳಿದೆ.

"ಆಗಿತ್ತಲ್ಲ. ೧೯೨೧ರಲ್ಲಿ. ಅಲ್ಲಿಂದ ಮೊದಲ ತಂಡ ಮೆಟ್ರಿಕ್ಯುಲೇಶನ್ ಪರೀಕ್ಷೆಗೆ ಕುಳಿತಿತು. ನಾನು ೧೯೨೫ರಲ್ಲಿ ಮೆಟ್ರಿಕ್ಯುಲೇಶನ್ ಮಾಡಿದೆ. ಅಲ್ಲಿಂದ ಕರ್ನಾಟಕ ಕಾಲೇಜು ಸೇರಿ ಎಂ. ಎ. ಮಾಡಿದೆ—೧೯೩೧ರಲ್ಲಿ."

ಶ್ರೀ ಗೋಕಾಕರು ೧೯೩೧ ರಿಂದ ೧೯೩೬ ರ ತನಕ ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರೊಫೆಸರ್ ಆಗಿದ್ದರು. ೧೯೩೬ ರಿಂದ ೩೮ ಸಮುದ್ರಯಾನ ಮತ್ತು ಆಕ್ಸಫರ್ಡಿನಲ್ಲಿ ಅಭ್ಯಾಸ. ೧೯೩೮ ರಿಂದ ೪೪ ಸಾಂಗಲಿಯ ವಿಲಿಂಗ್ಡನ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದು ೧೯೪೪ ರಿಂದ ೪೬ ರ ವರೆಗೆ ಉಸ್ಮಾನಿಯಾ ವಿಶ್ವವಿದ್ಯಾಲಯದ ಇಂಗ್ಲೀಷ ಪ್ರೊಫೆಸರರಾದರು. ೧೯೪೬ರಲ್ಲಿ ಬಡೋದೆಯ ವೀಸನಗರದ ಕಾಲೇಜನ್ನು ಆರಂಭಿಸಲು ಪ್ರಿನ್ಸಿಪಾಲರಾಗಿ ಹೋದರು. ೧೯೪೯ರಲ್ಲಿ ಅಲ್ಲಿಂದ ಅವರು ಕೊಲ್ಹಾಪುರದ ರಾಜಾರಾಮ ಕಾಲೇಜಿಗೆ ಬರುವಂತಾಯಿತು. ೧೯೫೨ರ ತನಕ ಕೊಲ್ಹಾಪುರದಲ್ಲಿದ್ದು ಬಳಿಕ ಕರ್ನಾಟಕ ಕಾಲೇಜಿಗೆ ಬಂದರು. "ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಗೆ ರಾಜೀನಾಮೆಯಿತ್ತು (೧೯೪೪ ಜೂನ್) ಆರು ತಿಂಗಳಷ್ಟು ಕಾಲ ನಾನು ಸುಮ್ಮನಿರಬೇಕಾಯಿತು. ಮತ್ತೆಲ್ಲೂ ನನ್ನ ಉದ್ಯೋಗಕ್ಕೆ ತಡೆಬಂದುದಿಲ್ಲ. ವೀಸನಗರದ ಕಾಲೇಜಿಗೆ ನಾನು ಸೇರುವುದು ಕೆಲವೇ ದಿನಗಳು ತಡವಾಗಿದ್ದರೆ ಬಹುಶಃ ನಾನೀಗ ಕನ್ನಡ ನಾಡಿನಲ್ಲಿರುತ್ತಿರಲಿಲ್ಲ. ನಾನು ವೀಸನಗರಕ್ಕೆ ಹೋದೊಡನೆಯೇ ಜೋಧಪುರದಿಂದ ಹೆಚ್ಚಿನ ಸಂಬಳದ ಮೇಲೆ ಬಂದ ಕರೆಯನ್ನು ತಿರಸ್ಕರಿಸಬೇಕಾಯಿತು. ಅಲ್ಲಿಗೆ ನಾನು ಹೋಗಿದ್ದರೆ ರಾಜಸ್ಥಾನದಲ್ಲಿಯೇ ಇಂದಿಗೂ ಇರುತ್ತಿದ್ದೆನೇನೋ !" ಎಂದರು.

ತಮ್ಮ ಸಾಹಿತ್ಯಾಭಿರುಚಿಯ ವಿಕಾಸವನ್ನು ಜೀವನ ದೃಷ್ಟಿಯೊಡನೆ ಹೊಂದಿಸಿಕೊಳ್ಳುತ್ತ ಅವರು ಹೇಳಿದರು: "ಈ ಕನಸಿನ ರಾಜ್ಯದಿಂದ ವಾಸ್ತವಿಕ ಜಗತ್ತಿಗಿಳಿದ ನನ್ನ ಜೀವನದಲ್ಲಿ ಹೊಸ ಬೆಳಕೊಂದು ವೀಸನಗರದಲ್ಲಿದ್ದಾಗ ಕಾಲಿಟ್ಟಿತು. ಅಲ್ಲಿಂದ ನಾನು ಅನುಭಾವಿ ಜೀವನದಲ್ಲಿ ಹೆಜ್ಜೆಯಿಟ್ಟೆ; ಹೊಸ ಊರು, ಹೊಸ ಜನ. ನನ್ನ ದಿನಗಳನ್ನು ನಾನಾಗ ಪುಸ್ತಕಗಳನ್ನು ಓದುವುದರಲ್ಲಿಯೇ ಕಳೆಯಬೇಕಾಗಿತ್ತು. ಶ್ರೀ ಅರವಿಂದರ ಗ್ರಂಥಗಳನ್ನು ಅಭ್ಯಾಸ ಮಾಡಲು ನನಗೆ ಆಗ ಅವಕಾಶವಾಯಿತು. ನನ್ನ 'ದ್ಯಾವಾಪೃಥಿವೀ' ಇದರ ಫಲ."

ಜೀವನವನ್ನು ಕುರಿತು ತಮ್ಮ ದೃಷ್ಟಿಯನ್ನು ಅವರು ಹೀಗೆ ವಿವರಿಸುತ್ತಾರೆ: "ನಾನು ಎಂದಿನಿಂದಲೂ ಜೀವನದ ವಿದ್ಯಾರ್ಥಿ. ನನ್ನ ಪಾಲಿಗೆ ಬಂದ ಎಲ್ಲ ಅವಕಾಶಗಳನ್ನು ಸರಿಯಾಗಿ ಉಪಯೋಗಿಸಿಕೊಂಡಿದ್ದೇನೆ. ಅದರ ಫಲವಾಗಿ ನಾನು ಹೆಚ್ಚಿನ ಹೊಣೆ ಹೊರಬೇಕಾಗಿ ಬಂದಾಗ ಸಂತೋಷದಿಂದ ಆ ಕಾರ್ಯವನ್ನು ನಿರ್ವಹಿಸಿದ್ದೇನೆ. ಶಿಕ್ಷಣವಾಗಲಿ, ಆಡಳಿತೆಯಾಗಲಿ, ಸಾಹಿತ್ಯವಾಗಲಿ, ಯಾವ ಕ್ಷೇತ್ರದಲ್ಲಾದರೂ ಮನಸಾ ದುಡಿಯುವುದು ನನ್ನ ಸ್ವಭಾವ. ಕವಿತೆ ಬರೆದು ನಾನು ಎಷ್ಟು ಸಂತೋಷಪಡೆಯುವೆನೋ ಅದಕ್ಕಿಂತ ಏನೂ ಕಡಿಮೆಯಲ್ಲದ ಸಂತೋಷವನ್ನು ಪರಊರಾದ ವೀಸನಗರಕ್ಕೆ ಹೋಗಿ ಅಲ್ಲಿ ಮೊದಲಿಂದ ಕಾಲೇಜಿನ ಕಟ್ಟಡ ಕಟ್ಟಿಸುವು

ದರಲ್ಲೂ ಹೊಸ ಜವಾನನಿಂದ ತೊಡಗಿ ವಿದ್ಯಾರ್ಥಿಗಳ ವರೆಗೆ ಎಲ್ಲರಿಗೂ ತರಬೇತಿ ನೀಡುವುದರಲ್ಲೂ ನಾನು ಪಡೆದಿದ್ದೇನೆ. ಇಂದಿನ ಎಳೆಯರೊಡನೆ ಸೇರಿಕೊಂಡು ಅವರಿಗೆ ಸಲಹೆ ನೀಡಿ ಅವರ ಬಾಳಿನ ಹೂವನ್ನು ಅರಳಿಸುವುದರಲ್ಲೂ ನನಗೆ ಅಮಿತ ಆನಂದವುಂಟು. ತರುಣರು ತಮ್ಮ ಒಳಗೆ ಏನಿದೆ ಎಂದು ಕಂಡುಕೊಳ್ಳಲು ಸಹಾಯಕವಾಗಬೇಕೆಂದು ನನ್ನಾಸೆ."

ಹೈಸ್ಕೂಲು ಮುಗಿಸಿ ಕಾಲೇಜಿಗೆ ಬರುವಾಗ ಒಂದು ಅಪ್ರಕಟಿತ ಆಂಗ್ಲ ಕವನ ಸಂಕಲನದ ಕವಿಯಾಗಿದ್ದೆನೆಂದು ಅವರು ಹೇಳುತ್ತಾರೆ. ಕನ್ನಡದಲ್ಲಿ ಬರೆಯಲು ಬೇಂದ್ರೆಯವರು ಅವರಿಗೆ ಪ್ರೇರಕರಾದರು. "ಅಂದಿನ ಹೊಸ ಕವಿಗಳೆಲ್ಲ ಬೇಂದ್ರೆಯವರಲ್ಲಿ ತಮ್ಮ ಕವಿತೆಗಳನ್ನು ತಿದ್ದಿಸಿಕೊಳ್ಳುವವರು. ನಾನೂ ಹಾಗೆಯೇ ಅವರ ಪ್ರಭಾವವಲಯದಲ್ಲಿ ಸಿಕ್ಕಿ ಸ್ನೇಹಿತನಾದೆ." ಆದರೆ ಗೋಕಾಕರು ಗದ್ಯ ಲೇಖನಕ್ಕೆ ಕೈಹಾಕಿದುದು ಸ್ವಲ್ಪ ತಡವಾಗಿ; 'ಜಯ ಕರ್ನಾಟಕ' ಬೇಂದ್ರೆಯವರ ಕೈಗೆ ಬಂದಾಗ. ಅದರಲ್ಲಿಯೇ ಅವರು ಮೊದಲು ವಿಮರ್ಶೆ ಬರೆಯಲು ತೊಡಗಿದುದು.

ಅವರ ವೈವಾಹಿಕ ಜೀವನವೂ ಔದ್ಯೋಗಿಕ ಜೀವನದಷ್ಟೇ ಸುಖಾವಹ ಮತ್ತು ಯಥಾಸಂಪ್ರದಾಯವಾದುದು. "ನನ್ನ ಹೆಂಡತಿ ಸ್ಕೂಲ್ ಫೈನಲ್ ಫೇಲು. ಶಾರದಾ ಅವರ ಹೆಸರು. ಬೆಟದೂರಿಂದ ಬಂದು ಧಾರವಾಡದಲ್ಲಿ ಅವರ ಮನೆತನದವರು ಎಂದೋ ನೆಲೆಸಿದ್ದರು. ಆ ಊರು ಧಾರವಾಡಕ್ಕೆ ಎಷ್ಟು ದೂರವೋ ನನಗೆ ಗೊತ್ತಿಲ್ಲ. ಅವರೂ ಬೆಟದೂರನ್ನು ನೋಡಿದವರಲ್ಲ. ಬೆಟದೂರ ಹೆಸರು ಮಾತ್ರ ಅವರಿಗೆ ಇದೆ. ನನ್ನ ಮದುವೆಯಲ್ಲಿ ಅಂಥ ವಿಶಿಷ್ಟತೆಯೇನೂ ಇದ್ದಿಲ್ಲ. ಎಲ್ಲ ಸಾಂಪ್ರದಾಯಿಕವಾಗಿ ನಡೆಯಿತು. ಅದು ನಾನಿನ್ನೂ ಕರ್ನಾಟಕ ಕಾಲೇಜಿನಲ್ಲಿ ಎಂ. ಎ. ಓದುತ್ತಿದ್ದಾಗ ೧೯೩೦ ರಲ್ಲಿ. ನಮಗೆ ಮೊದಲ ಇಬ್ಬರು ಹೆಣ್ಣು ಮಕ್ಕಳು. ಒಬ್ಬಳು—ಶ್ರೀಮತಿ ಭಟ್—ಲೆಕ್ಚರರಾಗಿ ನಾಗಪುರದಲ್ಲಿದ್ದಾಳೆ. ಎರಡನೆಯವಳು ಇಲ್ಲೇ ಎಂ. ಎ. ಓದುತ್ತಿದ್ದಾಳೆ. ಮೂರನೆಯವ ಮಗ. ಈತ ಈಗ ಇಲ್ಲಿ ಬಂದು ಹೋದನಲ್ಲ ಇವನೇ. (ಅಷ್ಟು ಹೊತ್ತಿಗೆ ಬೇಂದ್ರೆಯವರ ಒಂದು ಸಂದೇಶವನ್ನು ತೆಗೆದುಕೊಂಡು ಗೋಕಾಕರ ಮಗ ಅಲ್ಲಿಗೆ ಬಂದು ಹೋಗಿದ್ದ.) ಇವನು ಬಿ. ಎ. ಯಲ್ಲಿದ್ದಾನೆ. ಸ್ವಲ್ಪ ಅದು ಇದು ಚಟುವಟಿಕೆ ನಡೆಸಿದ್ದಾನೆ. ನಾಲ್ಕನೆಯವಳು ಮಗಳು. ಅವಳು ಈಗ ಹತ್ತನೇ ತರಗತಿಯಲ್ಲಿದ್ದಾಳಷ್ಟೆ."

ಗೋಕಾಕರತ್ತ ನಾನು ಮತ್ತೊಮ್ಮೆ ನೋಡಿದೆ. ತಕ್ಕಷ್ಟು ದೃಢವಾದ ದೇಹಸಂಪತ್ತಿಯುಳ್ಳವರು ಅವರು. ಎತ್ತರದ ನಿಲುವು, ಅದಕ್ಕೆ ತಕ್ಕಂತೆ ತೋರ. ಅವರ ಮಗ ಅನಿಲ ಹಾಗಲ್ಲ. ಸಾಧಾರಣ ನಿಲುವು, ತೆಳ್ಳಗೆ ಹೀಚು ಮೈ ಆತನದು.

"ನನ್ನ ಗೆಳೆಯರ ಸಂಖ್ಯೆ ಸಾಹಿತ್ಯ ಹಾಗೂ ಶಿಕ್ಷಣ ಕ್ಷೇತ್ರಗಳಲ್ಲಿಯೇ ಹೆಚ್ಚು. 'ಸಮಾನ ಶೀಲ ವ್ಯಸನೇಷು ಸಖ್ಯಂ'–ಎಂದ ಹಾಗೆ ನನ್ನ ಕ್ಷೇತ್ರ ಮತ್ತು ಅಭಿರುಚಿಗೆ ಅನುಸಾರವಾಗಿ ಭಾರತದ ಪಶ್ಚಿಮ ವಲಯದಲ್ಲಿಯೂ ಹೊರಗೂ ನನಗೆ ಅನೇಕ ಗೆಳೆಯರಿದ್ದಾರೆ. ಗುಜರಾತಿನ, ಮಹಾರಾಷ್ಟ್ರದ ಶಿಷ್ಯರೇ ನನ್ನ ಗೆಳೆಯರಾದುದೂ ಉಂಟು. ಕನ್ನಡಿಗರಲ್ಲಂತೂ ಕೇಳುವುದೇ ಬೇಡ. ಹೊಸದಾಗಿ ಮತ್ತೆ ಮತ್ತೆ ಗೆಳೆಯರನ್ನು ಗಳಿಸುತ್ತ ಇದ್ದೇನೆ. ಹೀಗೆಯೇ ಗೆಳೆತನ ವಿಸ್ತರಿಸುವ ಚಾಚುಗೈ ನನ್ನದು."

ಅವರು "ಕನ್ನಡದಲ್ಲಿ ಬೇಂದ್ರೆಯವರಿಂದ ತೊಡಗಿ ರಾಮಚಂದ್ರ ಶರ್ಮರ ವರೆಗಿನ ಎಲ್ಲ ಕವಿಗಳೂ ನನಗೆ ಮೆಚ್ಚಿಕೆಯಾದವರೇ" ಎನ್ನುತ್ತಾರೆ. "ಇವರಲ್ಲಿ ಬೇಂದ್ರೆ, ಪುಟ್ಟಪ್ಪ, ಪು. ತಿ. ನ, ಅಡಿಗ, ಶರ್ಮ ಹೀಗೆ ಎಲ್ಲರೂ ಒಬ್ಬೊಬ್ಬರೂ ಕನ್ನಡದಲ್ಲಿಲ್ಲದ ಹೊಸತನವನ್ನು ಕನ್ನಡಕ್ಕೆ ತಂದುಕೊಟ್ಟಿದ್ದಾರೆ. ಒಬ್ಬೊಬ್ಬರ ಕಾವ್ಯದಲ್ಲಿ ಒಂದೊಂದು ಮೆಚ್ಚುವ ಗುಣವಿದೆ."

ಅವರ ವಿಮರ್ಶೆಯ ವಿಕಾಸವನ್ನು ಕೇಳಿದರೆ "ನನ್ನ ವಿಮರ್ಶೆಗಳಲ್ಲಿ ಹೆಚ್ಚಿನವು ಅಧ್ಯಕ್ಷ ಭಾಷಣಗಳು. ೧೯೩೩ರಲ್ಲಿ ಒಂದು ರಾಯಚೂ

ರಿನ ಕವಿಗೋಷ್ಠಿಯ ಅಧ್ಯಕ್ಷ ಭಾಷಣ; ರಾಣೆಬೆನ್ನೂರಿನಲ್ಲಿ ನಡೆದ ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ; ಮುಂಬಯಿಯ ಸಾಹಿತ್ಯಸಮ್ಮೇಳನದಲ್ಲಿ ಕವಿಗೋಷ್ಠಿಯ ಅಧ್ಯಕ್ಷ ಭಾಷಣ; ಮುಂತಾದವು. ನನ್ನ ಜೀವನದೃಷ್ಟಿ ವಿಕಸಿತವಾದಂತೆ ವಿಮರ್ಶೆಯ ನೋಟವೂ ಆಗಿದೆ" ಎಂದರು.

"ಇತರ ಭಾರತೀಯ ಭಾಷೆಗಳೊಡನೆ ಹೋಲಿಸಿದರೆ ಕನ್ನಡ ಬಡವಾದುದೆ?" ನಾನು ಇನ್ನೊಂದು ಪ್ರಶ್ನೆಯನ್ನು ಅವರ ಮುಂದೆ ಇರಿಸಿದೆ.

"ಹಾಗೇನೂ ಇಲ್ಲ. ಇತ್ತೀಚೆಗೆ ಭಾರತೀಯ ಭಾಷೆಗಳ ಮೇಲೆ ಆಕಾಶ ವಾಣಿಯವರು ಒಂದು ಭಾಷಣಮಾಲೆಯನ್ನು ಏರ್ಪಡಿಸಿದ್ದರು. ನಾನು ಅದರ ಸಂಪಾದಕನಾಗಿದ್ದೆ. ಆದರಿಂದ ಹೇಳುತ್ತೇನೆ. ಬಂಗಾಲಿ-ಉರ್ದು-ಮರಾಠಿ ಭಾಷೆಗಳು ನಮಗಿಂತ ಸ್ವಲ್ಪ ಮುಂದೆ ಇವೆ. ಉಳಿದವೆಲ್ಲ ನಮ್ಮಂತೆಯೇ—ಕನ್ನಡದಂತೆಯೇ. ತಮಿಳೂ ಕನ್ನಡಕ್ಕಿಂತ ಆಧುನಿಕ ಸಾಹಿತ್ಯದಲ್ಲಿ ಮುಂದುವರಿದಿದೆ ಎಂದು ನನಗೆ ಅನಿಸುವದಿಲ್ಲ. ತಮಿಳರಿಗೆ ಈಗಾಗಲೇ ಒಂದು ವಿಶ್ವಕೋಶವಿದೆ. ಹಿಂದಿಗೆ ಈಗ ಬೇಕಾದಷ್ಟು ಹಣದ ಹೊಳೆ ಹರಿಯುತ್ತಿರುವುದರಿಂದ ಅದು ಬೇಗನೆ ಪ್ರಗತಿಮುಖವಾಗುತ್ತಲಿದೆ."

ಜಗತ್ತಿನಲ್ಲಿ ಭಾರತದ ಸ್ಥಾನ ಏರುವುದು--ಮುಂದಿನ ಶತಮಾನದಲ್ಲಿ ಭಾರತವೇ ಜಗತ್ತಿನ ನಾಯಕತ್ವ ವಹಿಸಬಹುದೆಂದು ಅವರ ನಂಬಿಕೆ. ನೆಹರೂ ನಂತರ ಯಾರು? ಎಂಬ ಪ್ರಶ್ನೆಯೇ ಉದ್ಭವಿಸದು. ಕಾಲ ನಾಯಕನನ್ನು ಸೃಷ್ಟಿಸಿಕೊಳ್ಳುತ್ತದೆ ಎಂದು ಅವರಿಗೆ ವಿಶ್ವಾಸವುಂಟು.

ಜಪಾನಿನಲ್ಲಿ ನಡೆದ ಪಿ. ಇ. ಎನ್. ಸಮ್ಮೇಲನದ ವಿಷಯ ಅವರಲ್ಲಿ ಕೇಳಿದೆ. "ಹೌದು, ನಾವು ಒಂಬತ್ತು ಜನರು ಭಾರತದ ಪ್ರತಿನಿಧಿಗಳಾಗಿ ಹೋಗಿದ್ದೆವು. ಏಶಿಯದ ಲೇಖಕರು ಅನುಕರಣೆಯಲ್ಲಿಯೇ ತೃಪ್ತರಾಗುತ್ತಿದ್ದಾರೆಂದು ಶ್ರೀ ಸ್ಪೆಂಡರ್ ತಮ್ಮ ಭಾಷಣದಲ್ಲಿ ಹೇಳಿದುದನ್ನು ನಾನು ಅಲ್ಲಗಳೆದೆ. ಪಿ. ಇ. ಎನ್. ಸಮ್ಮೇಳನಕ್ಕೆ ಪ್ರತಿವರ್ಷವೂ ಒಬ್ಬ ಕನ್ನಡ ಪ್ರತಿನಿಧಿ ಹೋಗುವ ಸಂಪ್ರದಾಯವಿಟ್ಟುಕೊಳ್ಳುವುದು ಒಳ್ಳೆಯದು" ಎಂದರವರು.

ಗೋಕಾಕರು ಬರಿಯ ಕನ್ನಡ ಲೇಖಕರಲ್ಲ. The Song of Life ಎಂಬ ಭಾವಗೀತಗಳ ಸಂಕಲನವನ್ನು ಹಿಂದ್ ಕಿತಾಬ್ಸ್ ಅವರು ಪ್ರಕಟಿಸಿದ್ದಾರೆ. The Poetic Approach to Language ಎಂಬ ಪುಸ್ತಕ ಆಕ್ಸಫರ್ಡ್ ಯುನಿವರ್ಸಿಟಿ ಪ್ರೆಸ್ಸಿನವರಿಂದ ಪ್ರಕಟಿಸಲ್ಪಟ್ಟಿದೆ. ಇತ್ತೀಚೆಗೆ ಬೇಂದ್ರೆಯವರು ಮತ್ತು ಅವರ ಕವಿತೆಗಳ ಮೇಲೆ ಅವರು ಇಂಗ್ಲೀಷಿನಲ್ಲಿ ಬರೆದಿದ್ದಾರೆ.

೧೯೦೯ ಅಗಸ್ಟ ೯ರಂದು ಜನಿಸಿದ ಗೋಕಾಕರ ತಲೆಗೂದಲು ಅರ್ಧ ಬೆಳ್ಳಗಾಗಿವೆ. ಅದು ಜರೆಯ ಲಕ್ಷಣದಂತೆ ತೋರದೆ ಬರಿಯ ಬೆಳ್ಳಿಗೂದಲಾಗಿದೆ ಅಷ್ಟೆ. ಎಳೆಯ ಜೀವಗಳ ನಡುವೆ ಮತ್ತಷ್ಟು ಎಳೆಯರಾಗಿದ್ದು ಹಿರಿಯ ಹೊಣೆಗಾರಿಕೆಯನ್ನು ಯಶಸ್ವಿಯಾಗಿ ನಿರ್ವಹಿಸುತ್ತಿದ್ದಾರೆ ಅವರು. ಎಳೆಯ ಜೀವಗಳು ಅರಳುವುದನ್ನು ನೋಡುವುದರಲ್ಲಿಯೇ ತಮಗೆ ಎಲ್ಲಿಲ್ಲದ ಆನಂದ ಎಂದು ಎರಡನೆಯ ಬಾರಿ ಅವರೆಂದಾಗ ಅವರ ಕಣ್ಣಿನ ಮುಂದೆ ಮುಂದಿನ ಜನಾಂಗವೇ ಕಟ್ಟಿದಂತಿತ್ತು.

ಅಷ್ಟರಲ್ಲಿ ಮತ್ತೆ ಅವರು ಕಾರ್ಯಾಂತರಕ್ಕೆ ಎದ್ದು ಹೋಗಬೇಕಾಗಿತ್ತು. ನನಗೆ ಗೊತ್ತು ಮಾಡಿದ ೩೦ ನಿಮಿಷಗಳು ಆಗಲೇ ಕಳೆದಿದ್ದುವು. ಸ್ವಾಗತಿಸಿದ ನಗುಮುಖದ ನಿಷ್ಕಪಟ ನೋಟದಿಂದಲೇ ಅವರು ನನ್ನನ್ನು ಬೀಳ್ಕೊಟ್ಟರು.

**ವಸಂತ ಕಾಲದಲ್ಲಿ ಚಿಕ್ಕ ದೋಣಿಯಲ್ಲಿ ಕುಳಿತು ನದಿಯಲ್ಲಿ ತೇಲುವಾಗ ಸಂಪ್ರದಾಯಬದ್ಧನಾದ ಜೀವನವೂ ಮುಕ್ತಿಸುಖವನ್ನು ಅನುಭವಿಸುತ್ತದೆ.**

—ಚೀನಿ ಗಾದೆ

ಮನುಷ್ಯ ವಿಚಾರಪ್ರಮಾದವನ್ನು ತಪ್ಪಿಸಿಕೊಳ್ಳಬೇಕಾದರೆ
ಕೆಲ ಸರಳ ನಿಯಮಗಳನ್ನು ಪಾಲಿಸಬೇಕು

# ವಿಚಾರ ಶಕ್ತಿಯನ್ನು ಹೇಗೆ ಬೆಳೆಸಿಕೊಳ್ಳಬೇಕು ?

" ವಿಚಾರಿ "

ಮನುಷ್ಯ ವಿಚಾರಶೀಲ ಪಶು ಎಂದು ಹೇಳಲಾಗುತ್ತದೆ. ಆದರೆ ಆತ ಯಾವಾಗಲೂ ಸರಿಯಾದ ದಾರಿಯಲ್ಲಿ ವಿಚಾರಿಸುತ್ತಾನೆನ್ನಲು ಬಾರದು. ಇದರಿಂದ ಎಷ್ಟೋ ತಪ್ಪು ನಂಬಿಕೆಗಳನ್ನು ಅವನು ಮಾಡಿಕೊಳ್ಳುತ್ತಾನೆ. ಈ ತಪ್ಪು ನಂಬಿಕೆಗಳು ಕೆಲ ವೇಳೆ ನಗ ಬರಿಸುವಂಥ ಪರಿಣಾಮಗಳಿಗೆ ಎಡೆ ಕೊಟ್ಟರೆ, ಅನೇಕ ವೇಳೆ ಮಹಾ ಅನರ್ಥಗಳಿಗೆ ಕಾರಣವಾಗುವುದುಂಟು.

ಮಾನವನಿಗೆ ಎಲ್ಲ ಬಗೆಯ ತಪ್ಪು ನಂಬಿಕೆಗಳಿಂದ ಮುಕ್ತನಾಗಿರಲು ಸಾಧ್ಯವಿಲ್ಲವೆಂದು ನಾವು ಒಪ್ಪಬಹುದು. ಆದರೆ ಹುಂಬತನದ ಅನೇಕ ತಪ್ಪುಗಳಿಂದ ಮುಕ್ತನಾಗಲು ಸಾಧ್ಯವಿದೆ. ಇದಕ್ಕೆ ಅತಿಮಾನುಷ ಬುದ್ಧಿ ಶಕ್ತಿಯಾಗಲಿ ಜ್ಞಾನವಾಗಲಿ ಬೇಕಾಗಿಲ್ಲ. ಕೆಲವೊಂದು ಸರಳವಾದ ನಿಯಮಗಳನ್ನು ಅನುಸರಿಸುವುದರಿಂದ ನಾವು ಇದನ್ನು ಸಾಧಿಸಬಹುದಾಗಿದೆ

**ಸಾಧ್ಯವಾದಾಗೆಲ್ಲ ಸ್ವತಃ ಪರೀಕ್ಷಿಸಿ ಯಾವುದನ್ನಾದರೂ ದೃಢಪಡಿಸಿಕೊಳ್ಳುವುದು ಮೊದಲನೇ ಉಪಾಯ.** ಆದರೆ ಒಳ್ಳೇ ವಿಚಾರಶೀಲರು ಕೂಡ ಈ ಚಿಕ್ಕ ಮುಂಜಾಗ್ರತೆ ವಹಿಸಲು ತಪ್ಪಿ ನಗೆಗೀಡಾಗುತ್ತಾರೆ. ಗ್ರೀಕ ವಿಜ್ಞಾನದ ದಿಗ್ಗಜನೆನಿಸಿದ ಅರಿಸ್ಟಾಟಲನು ಗಂಡಸರಿಗಿಂತ ಹೆಂಗಸರಿಗೆ ಕಡಿಮೆ ಹಲ್ಲುಗಳಿವೆಯೆಂದು ಬರೆದಿಟ್ಟಿದ್ದಾನೆ. ಅಂಥ ಭ್ರಮೆಯನ್ನು ಅವನಲ್ಲಿ ಯಾರು ಹುಟ್ಟಿಸಿದರೋ ಗೊತ್ತಿಲ್ಲ. ಆದರೆ ತನ್ನ ಹೆಂಡತಿಗೆ ಬಾಯಿ ತೆರೆಯಲು ಹೇಳಿ ಎಣಿಸಿ ನೋಡಿದ್ದರೆ ಅವನಿಗೆ ತನ್ನ ತಪ್ಪು ತಿಳಿದು ಹೋಗುತ್ತಿತ್ತು. ಬಡ ಅರಿಸ್ಟಾಟಲನು ಇದು ತನಗೆ ಖಂಡಿತ ಗೊತ್ತಿದೆಯೆಂದು ಭಾವಿಸಿದ್ದೇ ಅವನು ಮೋಸಹೋಗಲು ಕಾರಣವಾಯಿತು. ನಮಗೆ ಗೊತ್ತಿಲ್ಲದಿದ್ದರೂ ಗೊತ್ತಿದೆಯೆಂದು ಭ್ರಮಿಸುವುದು ಅತಿ ದೊಡ್ಡ ತಪ್ಪು.

ಅದರೆ ಎಲ್ಲ ವಿಷಯಗಳನ್ನು ಸ್ವಾನುಭವದ ಒರೆಗಲ್ಲಿಗೆ ಹಚ್ಚುವುದು ಸಾಧ್ಯವಲ್ಲ. ಮಾನವ ಶಾಂತಿಯನ್ನು ಕಲಕುವ ಅನೇಕ ಭೀಕರ ವಿವಾದಗಳಲ್ಲಿ ಎರಡು ಪಕ್ಷಗಳಿಗೂ ಸರಿಯಾದ ಪ್ರಮಾಣಗಳಿರುವುದಿಲ್ಲ. ಇಂಥ ಪ್ರಸಂಗಗಳಲ್ಲಿ ಮೂರ್ಖತನದಿಂದ ಪಾರಾಗಬೇಕಾದರೆ **ನಿಮ್ಮ ಸ್ವಂತ ಮನಸ್ಸು ಎಷ್ಟು ಪಕ್ಷಪಾತಿಯೆಂದು ಮೊದಲು ಬೆದಕಿ ನೋಡಬೇಕು.**

ನಾನು ದೇವರಿದ್ದಾನೆಂದು ಹೇಳುವವನಾಗಿ ನೀವು ದೇವರಿಲ್ಲ ಎಂದು ವಾದಿಸುವವರಾಗಿದ್ದೀರೆನ್ನೋಣ. ನಿಮ್ಮ ಅಭಿಪ್ರಾಯದಿಂದ ನನಗೆ ಸಿಟ್ಟು ಬರತೊಡಗಿತೆಂದರೆ ಆಗ ನನ್ನ ಅಂತರಂಗದೊ

ಭವನ್ಸ್ ಜರ್ನಲ್ ಆಧಾರದಿಂದ

ಳಿಗೆ ನನಗೆ ದೇವರ ಅಸ್ತಿತ್ವದ ಬಗ್ಗೆ ದೃಢವಾದ ವಿಶ್ವಾಸವಿಲ್ಲವೆಂದು ಅರ್ಥವಾಗುತ್ತದೆ ಎರಡಕ್ಕೆ ಎರಡು ಕೂಡಿಸಿದರೆ ಐದಾಗುತ್ತದೆಂದು ಯಾರಾದರೂ ಸಾಧಿಸಿದಾಗ ನಿಮಗೆ ಸಿಟ್ಟು ಬರುವದಿಲ್ಲ, ನಿಮ್ಮ ಎದುರಾಳಿಯ ಹೆಡ್ಡತನ ನೋಡಿ ಕನಿಕರವಾಗುತ್ತದೆ. ಆದರೆ ಎರಡೆರಡು ನಾಲ್ಕು ಎಂಬ ನಿಮ್ಮ ನಂಬಿಕೆಗೆ, ಸಾಕಷ್ಟು ಆಧಾರ ನಿಮ್ಮಲ್ಲಿಲ್ಲದಿದ್ದರೆ ಆಗ ನಿಮ್ಮ ಬಲುದಿನದ ನಂಬಿಕೆಯ ತಳ ಅಲುಗಿ ಅದಕ್ಕಾಗಿ ನೀವು ಖತಿಗೊಳ್ಳುವಿರಿ. ಆದ್ದರಿಂದ ಯಾವುದಾದರೊಂದು ಅಭಿಪ್ರಾಯದಿಂದ ಮನಸು ರೇಗಲಾರಂಭಿಸಿದರೆ ಆಗ ನಿಧಾನಿಸಿರಿ. ಆಳವಾಗಿ ವಿಚಾರಿಸಿದಾಗ ನಿಮ್ಮ ಅಭಿಪ್ರಾಯಕ್ಕೆ ಸಾಕಷ್ಟು ಪ್ರಮಾಣಗಳಿಲ್ಲೆಂದು ನಿಮಗೇ ಅನಿಸಬಹುದು.

ಕೆಲವೊಮ್ಮೆ ನಮ್ಮ ಮನಸಿನಲ್ಲಿ ಕೆಲ ಸಿದ್ಧಾಂತಗಳು ನೆಲೆಯೂರಿಬಿಡುತ್ತವೆ. ನಾವು ಒಂದು ವಿಶಿಷ್ಟ ಅಭಿಪ್ರಾಯದವರಿದ್ದರೆ ನಮ್ಮ ಅಭಿಪ್ರಾಯದೊಡನೆ ಸಹಮತರಾದ ಜನರ ಸಂಗಡವೇ ಸಂಪರ್ಕವಿಟ್ಟುಕೊಳ್ಳುವ ಚಟ ಬಿದ್ದುಬಿಡುತ್ತದೆ. ಆದರೆ ನಮಗೆ ಸತ್ಯಾನ್ವೇಷಣೆ ಬೇಕಾಗಿದ್ದರೆ ನಾವು ಅನುಸರಿಸತಕ್ಕ ದಾರಿ ಇದಲ್ಲ. **ನಮಗಿಂತ ಭಿನ್ನವಾದ ಅಭಿಪ್ರಾಯವುಳ್ಳವರ ವಿಚಾರಗಳನ್ನು ಅರಿತುಕೊಳ್ಳಲು ಯತ್ನಿಸುವುದು ಅಗತ್ಯ.** ಇಂಥ ಭಿನ್ನಾಭಿಪ್ರಾಯಗಳು ಮೂರ್ಖತನದವೆಂದು ನಮಗನಿಸಿದರೆ ಅವರಿಗೆ ನಮ್ಮ ಅಭಿಪ್ರಾಯಗಳೂ ಅಷ್ಟೇ ಮೂರ್ಖತನದವಾಗಿ ಕಾಣಿಸಬಹುದೆಂದು ನೆನೆದುಕೊಳ್ಳೋಣ.

ಒಮ್ಮೊಮ್ಮೆ ನಮ್ಮ ಮನಸ್ಸಿನಲ್ಲೆ ತರ್ಕಮಾಡುವುದರಿಂದ ನಮ್ಮ ಅಭಿಪ್ರಾಯಗಳ ನಿಜವಾದ ಬೆಲೆ ನಮಗೆ ಗೊತ್ತಾಗಬಲ್ಲುದು. ನಮ್ಮ ವಾದಗಳಿಗೆ ಎದುರಾಳಿಗಳು ಏನು ಪ್ರತಿವಾದ ಹೂಡಬಹುದೆಂದು ಕಲ್ಪಿಸಿಕೊಳ್ಳಲು ಯತ್ನಿಸಬೇಕು. ಹೀಗೆ ಮಾಡುವುದರಿಂದ ನಮ್ಮ ಅಭಿಪ್ರಾಯಗಳೇ ಬದಲಾಗುವ ಸಂಭವವೂ ಇದೆ. ಆದರೆ ಸತ್ಯಾನ್ವೇಷಕನು ಇದಕ್ಕೆ ಅಂಜಬಾರದು.

**ದುರಭಿಮಾನಕ್ಕೆ ಬಿದ್ದು ಯಾವ ಅಭಿಪ್ರಾಯಕ್ಕೂ ಅಂಟಿಕೊಳ್ಳಬೇಡಿರಿ.** ಪುರುಷ ಶ್ರೇಷ್ಠನೋ ಸ್ತ್ರೀ ಶ್ರೇಷ್ಠಳೋ ಎಂಬ ವಾದ ಇದಕ್ಕೊಂದು ನಿದರ್ಶನ. ಎರಡು ವಾದಗಳಿಗೂ ಆಧಾರಗಳನ್ನು ಕೊಡಬಹುದು. ವಿಜ್ಞಾನದಲ್ಲಿ, ಸಾಹಿತ್ಯದಲ್ಲಿ ಪುರುಷರೇ ಹೆಚ್ಚಳ ತೋರಿಸಿದ್ದಾರೆಂದು ಪುರುಷರು ಹೆಗ್ಗಳಿಕೆಪಟ್ಟರೆ ಹುಚ್ಚರು, ಕಳ್ಳರು, ಕೊಲೆಗಡಕರಲ್ಲಿಯೂ ಗಂಡಸರದೇ ಹೆಚ್ಚಳವುಂಟೆಂದು ಸ್ತ್ರೀಯರು ಉತ್ತರ ಕೊಡಬಹುದು. ಸ್ತ್ರೀ ಪುರುಷರಲ್ಲಿ ಯಾರು ಅಧಿಕ ಎಂಬ ಸಮಸ್ಯೆಗೆ ಉತ್ತರವೇ ಇಲ್ಲ. ಆದರೆ ಇದನ್ನು ಒಪ್ಪಿಕೊಳ್ಳಲು ಮಾತ್ರ ನಮ್ಮ ಅಭಿಮಾನ ಅಡ್ಡ ಬರುತ್ತದೆ.

"ಸಾರೇ ಜಹಾನ್ ಸೇ ಅಚ್ಛಾ ಹಿಂದುಸ್ತಾನ್ ಹಮಾರಾ" ಎಂದು ನಾವು ಭಾರತೀಯರು ಹೇಳುತ್ತೇವೆ. "ಆಳ್ ಬ್ರಿಟಾನಿಯಾ, ಬ್ರಿಟಿಶರೆಂದಿಗೂ ಗುಲಾಮರಾಗರು" ಎಂದು ಬ್ರಿಟಿಶರು ಹೇಳುತ್ತಾರೆ. ಹೆತ್ತ ತಾಯಿಗೆ ಹೆಗ್ಗಣ ಮುದ್ದಾದೀತು. ಆದರೆ ಇತರರ ಮೇಲೆ ಈ ಮುದ್ದನ್ನು ಹೇರಲು ಹೋದರೆ ಬರುತ್ತದೆ ಕಷ್ಟ. ಪ್ರತಿ ದೇಶಕ್ಕೂ ಅದರದರದೇ ವೈಶಿಷ್ಟ್ಯವಿರುವಾಗ ನಮ್ಮದೇ ಶ್ರೇಷ್ಠವೆಂದು ಹಟತೊಡುವುದು ಸತ್ಯಾನ್ವೇಷಕರ ದಾರಿಯಲ್ಲ.

ಅಭಿಮಾನವಲ್ಲದೆ ಮಾನವನನ್ನು ತಪ್ಪುದಾರಿಗೆಳೆಯುವ ಅತಿ ಮುಖ್ಯ ಭಾವನೆಯೆಂದರೆ ಭಯ. ಮೃತ್ಯುಭಯ, ಅಜ್ಞಾತದ ಭಯ, ಏನೆಂದರಿಯದಿರುವ ಅಸ್ಫುಟವಾದ ಭಯ ಇವೆಲ್ಲವೂ ವ್ಯಕ್ತಿಗಳನ್ನೂ ಜನಾಂಗಗಳನ್ನೂ ಭಯಂಕರ ಕಾರ್ಯಗಳಿಗೆ ಪ್ರೇರಿಸುತ್ತವೆ.

ಭಾರತ ವಿಭಜನೆಯಾದಾಗ ನಡೆದ ಅತ್ಯಾಚಾರಗಳು ಭಯಮೂಲಕವಾಗಿಯೇ ಇದ್ದವು. ಕಾರ್ಥೇಜಿಯನ್ನರಿಗೂ ರೋಮನ್ನರಿಗೂ ಯುದ್ಧವಾಗಿ ರೋಮನ್ನರಿಗೆ ಗೆಲುವಾಗುವಂತೆ ಕಂಡಾಗ ಮೋಲೋಚ ದೇವತೆಯ ಪೂಜೆಯಲ್ಲಿ ಕೊರತೆಯಾಗುತ್ತಿರುವುದೇ ತಮ್ಮ ಸೋಲಿಗೆ ಕಾರಣವೆಂದು ಕಾರ್ಥೇಜಿಯನ್ನರಿಗೆ ಅನಿಸತೊಡಗಿತು. ಮೋಲೋಚ ದೇವತೆಗೆ ಮಕ್ಕಳ ಬಲಿ

ಯೆಂದರೆ ಪ್ರೀತಿ. ಅದರಲ್ಲಿಯೂ ಶ್ರೀಮಂತರ ಮಕ್ಕಳ ಬಲಿ ತುಂಬ ಇಷ್ಟ ಅವನಿಗೆ ಆದರೆ ಶ್ರೀಮಂತರು ತಮ್ಮ ಮಕ್ಕಳ ಬದಲಿಗೆ ಬೇರೆ ಬಡ ಮಕ್ಕಳನ್ನು ಬಲಿ ಕೊಡಲು ಆರಂಭಿಸಿದ್ದರು. ಇದರಿಂದ ದೇವತೆ ಆಗ್ರಹಗೊಂಡಿದ್ದಾನೆಂದು ಸೋಲಿನ ಗಳಿಗೆಗಳಲ್ಲಿ ತೋರಿತವರಿಗೆ. ಈ ಕಷ್ಟ ಕಾಲದಲ್ಲಿ ಅತಿ ಶ್ರೀಮಂತರ ಮಕ್ಕಳನ್ನು ಕೂಡ ಬಲಿಕೊಡುವುದಾಯಿತು. ಆದರೆ ಇದರಿಂದ ಕಾರ್ಥೇಜಿಯನ್ನರಿಗೆ ಸೋಲಾಗುವುದು ಕೊನೆಗೂ ತಪ್ಪಲಿಲ್ಲವೆಂಬುದೀಗ ವಿಶೇಷ.

ಭಯ ಅತಿಶಯವಾಗಿದ್ದಾಗ ವ್ಯಕ್ತಿಗಳಾಗಲಿ ಸಮಾಜಗಳಾಗಲಿ ರಾಷ್ಟ್ರಗಳಾಗಲಿ ಬುದ್ಧಿಯನ್ನು ಹಿಡಿತದಲ್ಲಿಟ್ಟುಕೊಂಡು ವರ್ತಿಸಲಾರರು. ಮೊದಲು ನಮ್ಮ ಭಯಗಳನ್ನು ನಾವೇ ಕಂಡು ಹಿಡಿದು, ಕಾಲ್ಪನಿಕ ಭಯಗಳನ್ನು ನಿರ್ಮಿಸುವ ಮನಸ್ಸನ್ನು ಮಹಾಪ್ರಯತ್ನದಿಂದ ಅಂಕೆಯಲ್ಲಿಟ್ಟುಕೊಂಡು ಮುಂದುವರಿದ ಹೊರತು ಅನೇಕ ಮಹತ್ವದ ಸಂಗತಿಗಳನ್ನು ಕುರಿತು ಸರಿಯಾಗಿ ವಿಚಾರ ಮಾಡಲು ನಮ್ಮಿಂದಾಗದು. ಭಯವನ್ನು ಗೆಲ್ಲುವುದೇ ತಿಳಿವಳಿಕೆಯ ಆರಂಭ.

(ಬರ್ಟ್ರಂಡ ರಸೆಲ್ಲರ ಲೇಖನವನ್ನು ಆಧರಿಸಿ)



## ಯೋಗ್ಯತೆಯ ಮಾತು

ಸ್ತುತಿಪ್ರಿಯ ಕಾದಂಬರಿಕಾರನನ್ನು ಕಂಡು ವಿಮರ್ಶಕನಿಗೆ ತಲೆಚಿಟ್ಟು ಹಿಡಿಯತೊಡಗಿತ್ತು.

" ನೋಡಿದಿರೇನು! ಈಗಿತ್ತಲಾಗಿ ನನ್ನ ಪುಸ್ತಕಗಳು ಬಿಸಿಬಿಸಿ ಮಸಾಲೆ ದೋಸೆಯಂತೆ ಮಾರಾಟವಾಗುತ್ತಿವೆ. ಆದರೆ ಕೆಲಸಲ ನನ್ನ ಕೃತಿಗಳ ಗುಣ ಕಡಿಮೆಯಾಗುತ್ತಿದೆಯೆಂದು ನನಗನಿಸತೊಡಗಿದೆ. ಮೊದಲಿನಷ್ಟು ಚೆನ್ನಾಗಿ ನಾನೀಗ ಬರೆಯುತ್ತಿಲ್ಲ'' ಎಂದ ಒಮ್ಮೆ ಆ ಕಾದಂಬರಿಕಾರ.

" ಛೆ! ಛೆ! ನೀವು ಮೊದಲಿನಷ್ಟೇ ಚೆನ್ನಾಗಿ ಬರೆಯುತ್ತೀರಿ. ಆದರೆ ಈಗೀಗ ನಿಮ್ಮ ಅಭಿರುಚಿ ಸುಧಾರಿಸತೊಡಗಿದೆ, ಅಷ್ಟೇ'' ವಿಮರ್ಶಕ ಹೇಳಿದ.

* * *

## ಗಂಡನೇ ವಾಸಿ!

"ನಿನಗೇನಮ್ಮಾ, ಗಂಡ ಸತ್ತರೂ ಆಸ್ತಿ ಬೇಕಾದಷ್ಟಿದೆ. ಕಾಯದೆಯಂತೆ....''

" ಏನೂ ಸ್ವಾರಸ್ಯವಿಲ್ಲ. ವಕೀಲರು ಮತ್ತು ಕಾಯದೆಯ ಸುದ್ದಿಯನ್ನೆತ್ತಬೇಡ. ನನ್ನ ಆಸ್ತಿಯ ವಿಚಾರದಲ್ಲಿ ಅವರಿಂದ ಬಂದ ತೊಡಕುಗಳನ್ನು ನೋಡುವಾಗ ಗಂಡ ಬದುಕಿದ್ದರೇ ನೆಟ್ಟಗಿತ್ತು ಎನಿಸುತ್ತದೆ. "

* * *

## ಪ್ರಶಸ್ತಿ ಪ್ರಕಟನೆ

ಒಂದು ಪತ್ರಿಕೆಯಲ್ಲಿ ಶೀರ್ಷಿಕೆ— " ನಮ್ಮ ನಗರದ ಗಣ್ಯ ನಾಗರಿಕರೊಬ್ಬರು ನಾಯಿ ಪ್ರದರ್ಶನದಲ್ಲಿ ಪ್ರಥಮ ಬಹುಮಾನ ಪಡೆದರು.''



# ಭೂದಾನದ ಅಧ್ವರ್ಯು ವಿನೋಬಾ

**ಅವರು ಜನರ ಹೃದಯಭೂಮಿಯಲ್ಲಿ ಪಾಲು ಬೇಡುತ್ತಾರೆ**

೧೯೧೬ ಮಾರ್ಚಿಯ ಕೊನೆಯ ದಿನಗಳು. ವಿದ್ಯಾರ್ಥಿಗಳು ತಮ್ಮ ವಾರ್ಷಿಕ ಪರೀಕ್ಷೆಗೆ ಪೂರ್ವತಯಾರಿ ನಡೆಸಿ ಮುಂಬಯಿಯಲ್ಲಿ ತಮ್ಮ ಪರೀಕ್ಷೆ ಜರಗಲಿಗುವ ದಿನವನ್ನೇ ಎದುರು ನೋಡುತ್ತಿದ್ದರು. ಹತ್ತೊಂಬತ್ತು ವರ್ಷದ ತರುಣ ವಿನಾಯಕ ನರಹರಿರಾವ ಭಾವೆ ಆ ವರ್ಷ ಇಂಟರ ಪರೀಕ್ಷೆಗ ಕುಳಿತುಕೊಳ್ಳತಕ್ಕವನು. ತನ್ನ ಪಾಠ್ಯ ಪುಸ್ತಕಗಳು ಯಾವ ಗಿಡದ ತೊಪ್ಪಲು? ಇತರ ಅನೇಕ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಪ್ರೌಢಗ್ರಂಥಗಳನ್ನು ಅವನಾಗಲೇ ಜೀರ್ಣಿಸಿಕೊಂಡಿದ್ದ. ಆದರೂ ಅವನು ಮಾತ್ರ ಮುಂಬಯಿಯಲ್ಲಿ ನಹೆಯುವ ಪರೀಕ್ಷೆಯಿಂದ ನುಣುಚಿಕೊಳ್ಳಲು ಬಯಸುತ್ತಿದ್ದ.

ಹನ್ನೆರಡನೆಯ ವಯಸ್ಸಿನಿಂದಲೇ ಬ್ರಹ್ಮಚರ್ಯದ ಪ್ರತಿಜ್ಞೆಯನ್ನು ಸ್ವೀಕರಿಸಿ ತಾಯ್ನಾಡಿಗೆ ಜೀವನದಾನವನ್ನು ಸಂಕಲ್ಪಿಸಿದ್ದ ಆತ ಇನ್ನೂವರೆಗೂ ಲೌಕಿಕ ಬಂಧನವನ್ನು ಕಡಿದುಕೊಂಡಿರಲಿಲ್ಲ. ಈ ಏಳು ವರ್ಷಗಳಿಂದ ಸಂಕಲ್ಪದ ದಾರಿಯಲ್ಲಿ ನಿಸ್ಸಂಕೋಚವಾಗಿ ಮುನ್ನಡೆಯಲು ಹಿಂದೆಮುಂದೆ ನೋಡುತ್ತಿದ್ದ ತರುಣ 'ಪ್ರವಾಹ ಪತಿತ ಮನುಷ್ಯ ತಾನಾಗಿಯೇ ಈಸಲು ಕಲಿಯುತ್ತಾನೆ' ಎಂಬ ಸಿದ್ಧಾಂತಕ್ಕೆ ಬಂದಂತಿತ್ತು.

ನಾಳೆ ಮುಂಬಯಿಗೆ ಪರೀಕ್ಷೆಗೆ ಹೊರಡಬೇಕು ಎನ್ನುವಷ್ಟರಲ್ಲಿ ಆತ ಕೊನೆಗೊಮ್ಮೆ ತನಗೂ ಸಂಸಾರಕ್ಕೂ ನಡುವೆ ಇದ್ದ ಸೇತುವೆ

ಯನ್ನು ಕೆಡಹಲು ಪ್ರವೃತ್ತನಾದ. ತಾಯಿ ರುಕ್ಮಿಣಿಯಮ್ಮ ಕೇಳಿದರು: "ಏನು ಮಗೂ ಅದು?"

ವಿನಾಯಕ ಭಾವೆ ಉತ್ತರವಿತ್ತ: "ನನ್ನ ಸರ್ಟಿಫಿಕೇಟುಗಳಮ್ಮ. ಉಪಯೋಗವಿಲ್ಲದ ಪದಾರ್ಥಗಳು. ಅವನ್ನು ಸುಟ್ಟುಹಾಕುತ್ತಿದ್ದೇನೆ."

"ಉಪಯೋಗವಿಲ್ಲದಿದ್ದರೇನಂತೆ? ಅವು ಪೆಟ್ಟಿಗೆಯಲ್ಲಿ ಬಿದ್ದಿರಬಾರದೆ?" ತಾಯಿ ಕೇಳಿದ ಈ ಪ್ರಶ್ನೆಗೆ ಮಗನು ಉತ್ತರ ಕೊಡಲಿಲ್ಲ.

ಮರುದಿನ ಎಲ್ಲ ಸಹಪಾಠಿಗಳೊಂದಿಗೆ ವಿನಾಯಕ ಭಾವೆ ಬಡೋದೆಯಿಂದ ಮುಂಬಯಿಗೆ ಪರೀಕ್ಷೆಗೆಂದು ಹೊರಟವನು ಸೂರತ್ತಿನಲ್ಲೇ ಗಾಡಿಯಿಂದ ಇಳಿದನು. ಸಹಪಾಠಿಗಳಿಗೆ ಆಶ್ಚರ್ಯವಾಯಿತು; ಆತನ ನಿರ್ಧಾರವನ್ನು ಕೇಳಿದಾಗ "ಪರೀಕ್ಷೆ ಮುಗಿಸಿಕೊಂಡು ಹೋದರಾಗದೆ?" ಎಂದು ಅವರು ಅವನ ಮನವೊಲಿಸಲು ಪ್ರಯತ್ನಿಸಿದರು. ಆದರೂ ಅವರು ಸೋತರು. ವಿನಾಯಕ ಸಹಪಾಠಿಗಳನ್ನು ಅಗಲಿ ತನ್ನ ಸಂಕಲ್ಪಿತ ಧ್ಯೇಯಮಾರ್ಗದಲ್ಲಿ ಕಾಲಿಟ್ಟ.

ಈ ವಾರ್ತೆ ತಾಯಿ ರುಕ್ಮಿಣಿಯಮ್ಮನಿಗೆ ತಲುಪಿದ್ದು ಮಗ ಸೂರತ್ತಿನಿಂದ ಬರೆದ ಪತ್ರದಿಂದ. "ನಾನು ಮುಂಬಯಿಗೆ ಪರೀಕ್ಷೆಗೆ ಹೋಗುವುದಿಲ್ಲ. ಬೇರೆ ಕಡೆಗೆ ಪ್ರಯಾಣ ಹೊರಟಿದ್ದೇನೆ. ನಾನು ಎಲ್ಲಿಯೆ ಇರಲಿ, ಎಲ್ಲಿಯೇ ಹೋಗಲಿ ನನ್ನಿಂದ ಅನೈತಿಕ ಕೆಲಸ ನಡೆಯಲಾರದು" ಎಂದು ಆತ ಬರೆದಿದ್ದ. ಆ ತಾಯಿ ಕೂಡ ಅದನ್ನೇ ಸಮರ್ಥಿಸಿದಳು. "ನಮ್ಮ ವಿನ್ಯಾ ನಾಟಕ ಸಿನಿಮಾ ನೋಡಲಿಕ್ಕೆ ಓಡಿ ಹೋಗಿಲ್ಲ. ಒಳ್ಳೆಯ ಕೆಲಸ ಮಾಡಲೆಂದು ಹೋಗಿದ್ದಾನೆ" ಎಂದಳಾಕೆ.

ಬ್ರಹ್ಮಚರ್ಯದ ವ್ರತ ತೊಟ್ಟು ಹೊರಟಿದ್ದ ವಿನಾಯಕನಲ್ಲಿ ಇನ್ನೂ ರಜೋಗುಣವಿತ್ತು. ದೇಶಸೇವೆಗಾಗಿ ರಕ್ತಕ್ರಾಂತಿಯಲ್ಲಿ ಭಾಗ ವಹಿಸಬೇಕೆಂಬ ಹುರುಪು ಅವನಿಗಿತ್ತು. ಅದು ಸಹಜವಾಗಿ ಆಗಿನ ಭಾರತದ ಅಗ್ನಿಶಿಖೆಯಾದ ಬಂಗಾಲಕ್ಕೆ ಅವನನ್ನು ಒಯ್ದಿತು. ಆದರೆ ವಿನಾಯಕನ ಮೇಲೆ ಅಲ್ಲಿನ ಕ್ರಾಂತಿಕಾರರು ಪ್ರಭಾವ ಬೀರಲು ಸಮರ್ಥರಾಗಲಿಲ್ಲ. ಆತ ಹಿಮಾಲಯದತ್ತ ನಡೆದ. ಹಿಮಾಲಯದಿಂದ ಮರಳಿ ಕಾಶಿಗೆ ಬಂದ. ಅಲ್ಲಿಯ ವಿದ್ವಜ್ಜನರ ಸಹವಾಸದಿಂದ ಸಂಸ್ಕೃತಾಧ್ಯಯನದಲ್ಲಿ ಮುಂದುವರಿದ.

ಅದೇ ಹೊತ್ತಿಗೆ ಕಾಶಿಯ ಹಿಂದೂ ವಿಶ್ವವಿದ್ಯಾಲಯದ ಘಟಿಕೋತ್ಸವ ನಡೆದಿತ್ತು, ಶ್ರೀಮತಿ ಅನ್ನಿ ಬೆಸೆಂಟರ ಅಧ್ಯಕ್ಷತೆಯಲ್ಲಿ. ಗಾಂಧೀಜಿ ಅಲ್ಲಿ ಮಾಡಿದ ಚರಿತ್ರಾರ್ಹ ಭಾಷಣ ವಿನಾಯಕನ ಮೇಲೆ ಪ್ರಭಾವ ಬೀರಿತು. ಒಂದು ದಿನ ಗಾಂಧೀಜಿ ಆತನನ್ನು ಸಾಬರಮತಿಯ ತಮ್ಮ ಆಶ್ರಮಕ್ಕೆ ಕರೆಸಿಕೊಂಡರು. ಅವರು ಆತನ ತಂದೆ ತಾಯಿಗೆ ಎರಡು ಸಾಲಿನ ಪತ್ರ ಬರೆದು, "ನಿಮ್ಮ ವಿನೋಬಾ ನನ್ನ ಬಳಿ ಇದ್ದಾನೆ. ಇಷ್ಟು ಚಿಕ್ಕ ವಯಸ್ಸಿನಲ್ಲಿಯೆ ನಿಮ್ಮ ಮಗನಿಗೆ ಬಹಳ ವೈರಾಗ್ಯ, ತೇಜಸ್ಸು ಲಭಿಸಿದೆ. ಇಷ್ಟನ್ನು ಗಳಿಸಬೇಕಾದರೆ ನಾನು ಬಹಳ ಕಾಲ ಕಷ್ಟಪಡಬೇಕಾಯಿತು'' ಎಂದು ತಿಳಿಸಿದರು.

ವಿನೋಬಾ ಹೆಸರು ಮತ್ತು ವ್ಯಕ್ತಿತ್ವ ಹೀಗೆ ಸಾಬರಮತಿ ಆಶ್ರಮದಲ್ಲಿ ಹುಟ್ಟಿ ಗಾಂಧೀಜಿಯ ನೆರಳಿನಲ್ಲಿ ಬೆಳೆಯಿತು.

* * *

ವಿನೋಬಾರ ತಾಯಿನಾಡು ಬಡೋದೆಯಲ್ಲ, ಕೊಲಾಬಾ ಜಿಲ್ಲೆಯ ಪೇಣ ತಾಲೂಕಿನ ಗಾಗೋದೆ. ಅವರ ಎಳವೆಯ ಹೆಸರು ವಿನಾಯಕ. ಅವರ ತಂದೆ ನರಹರಿ ಭಾವೆಯವರು ಆಧುನಿಕ ವಸ್ತುನಿಷ್ಠ ಜೀವನದ ಒಲವಿನವರು. ಇಂಗ್ಲೀಷ್ ಕಲಿತು ಲೌಕಿಕದಲ್ಲಿ ಮೆರೆಯಬೇಕೆಂಬ ಅಭಿಲಾಷೆಯುಳ್ಳ ಅವರು ಮುಂಗೋಪಿಗಳೂ ಆಗಿದ್ದರು. ಆದರೆ ತಾಯಿ ರುಕ್ಮಿಣೀಬಾಯಿ ಹಾಗಲ್ಲ. ಕನ್ನಡ ನಾಡಿನ ಸಾಂಗಲಿಯ ಗೋಡಬೋಲೆ ಮನೆತನದಿಂದ ಬಂದ ಅವರು ತಮ್ಮೊಡನೆ ಸಿಹಿ ಮಾತು, ಕರುಣಾವೃತ್ತಿಗಳನ್ನೂ ತಂದಿದ್ದರು. ದೈವಭಕ್ತಿಪರಾಯಣೆಯಾಗಿದ್ದ ಆಕೆಯ ಪ್ರಭಾವ ವಿನಾಯಕನ ಮೇಲೆ ಹೆಚ್ಚಾಗಿತ್ತು.

ಸಂಸಾರವನ್ನು ಬಿಟ್ಟು ದೂರವಾದ ವಿನೂ ತಾಯಿಯ ಸೀರೆಯ ಒಂದು ತುಣುಕನ್ನು

ತನ್ನೊಂದಿಗೆ ಸಾಬರಮತಿ ಆಶ್ರಮಕ್ಕೂ ಒಯ್ದುದು, ಆಕೆ ಪೂಜಿಸುತ್ತಿದ್ದ ಅನ್ನಪೂರ್ಣೆಯ ಮೂರ್ತಿಯೊಂದನ್ನು ತನ್ನೊಡನೆ ತೆಗೆದುಕೊಂಡು ಹೋದುದು ತಾಯಿ ಆತನ ಮೇಲೆ ಎಂಥ ಪ್ರಭಾವ ಬೀರಿದ್ದಳೆಂಬುದಕ್ಕೆ ನಿದರ್ಶನಗಳಾಗಿವೆ.

ವಿನೋಬಾ ಗಾಂಧೀಪರಂಪರೆಯ ಪ್ರಥಮ ಮಠಪತಿ ಹಾಗೂ ಸಂನ್ಯಾಸಿ ಎನ್ನಬಹುದು. ಗಾಂಧೀಜಿಯ ಮರಣದ ತರುವಾಯ ಸರ್ವೋದಯ ಸಮಾಜದ ನಾಯಕರೆನಿಸಿದರು ಅವರು. ಗಾಂಧೀಜಿಯಿದ್ದಾಗಲೇ ವರ್ಧಾ ಆಶ್ರಮ, ಪರಂಧಾಮ ಆಶ್ರಮಗಳನ್ನು ನಡೆಸಿ, ಮೂಲ ಶಿಕ್ಷಣದ ಪ್ರವರ್ತಕರಾಗಿ ಗಾಂಧೀ ಆಶ್ರಮದ "ಕುಲಪತಿ" ಎನಿಸಿದ್ದರು ಬೇರೆ. ಇಂದವರು ಗಾಂಧೀಜಿಯ ಧಾರ್ಮಿಕ ಹಾಗೂ ನೈತಿಕ ತಳಹದಿಯ ಮೇಲಿನ ಕನಸಾದ ರಾಮರಾಜ್ಯವನ್ನು ಗ್ರಾಮರಾಜ್ಯದ ಮೂಲಕ ನನಸಾಗಿಸಲು ಹೊರಟಿರುವರು.

ಅದರ ಕಥೆ ಬೇರೆ.

೧೯೫೧ರಲ್ಲಿ ಹೈದರಾಬಾದಿನ ಶಿವರಾಮ ಪಳ್ಳಿಯಲ್ಲಿ ಸರ್ವೋದಯ ಸಮ್ಮೇಳನ ಸೇರುವುದಿತ್ತು. ವಿನೋಬಾ ಅಲ್ಲಿಗೆ ಹೋದವರು ಕಮ್ಯುನಿಸ್ಟರ ಹಿಂಸಾಚಾರಕ್ಕೆ ಒಳಗಾಗಿದ್ದ ತೆಲಂಗಾಣವನ್ನು ಸಂದರ್ಶಿಸಲು ಹೊರಟರು. ಹಳ್ಳಿಹಳ್ಳಿಗೆ ನಡೆದು ಜನರಿಗೆ ಶಾಂತಿ ಸಮಾಧಾನಗಳನ್ನು ಹೇಳುತ್ತಿದ್ದ ಅವರಿಗೆ ಇಲ್ಲಿನ ಭೂರಹಿತರ ಸಮಸ್ಯೆ ಬಗೆ ಹರಿಸುವುದು ಹೇಗೆ? ಬರಿಯ ಭೂಮಿಗಾಗಿ ಕೊಲೆ ಸುಲಿಗೆ ನಡೆಯಬೇಕೆ? ಎಂದು ಚಿಂತೆಯುಂಟಾಯಿತು.

ನಲ್ಲಗೊಂಡ ಜಿಲ್ಲೆಯ ಪೋಚಂಪಳ್ಳಿ ಅವರ ಸಮಸ್ಯೆಯನ್ನು ಪರಿಹರಿಸಿತು. ಆ ಹಳ್ಳಿ ಕೂಡ ಹಿಂಸಾಚಾರಕ್ಕೆ ಒಳಗಾಗಿತ್ತು. ಮೂರು ಸಾವಿರ ಜನರಿರುವ ಆ ಹಳ್ಳಿಯ ಎರಡು ಸಾವಿರ ಜನರಿಗೆ ನೆಲವಿರಲಿಲ್ಲ. ಅಲ್ಲಿಯೇ ಸುತ್ತಮುತ್ತಲೂ ಭೂಮಿಗಾಗಿ ಆ ಎರಡು ವರ್ಷಗಳಲ್ಲಿ ಇಪ್ಪತ್ತು ಜನ ಕೊಲೆಯಾಗಿದ್ದರು. ವಿನೋಬಾ ಅಲ್ಲಿಗೆ ಹೋಗುವುದು ಅಪಾಯಕರವೆಂದು ಬೇರೆ ಎಚ್ಚರಿಕೆ ನೀಡಲಾಗಿತ್ತು. ಅವರಿಗೆ ವಿನೋಬಾ ಉತ್ತರ ಇಷ್ಟೆ: "ಶಾಂತಿಃ ಶಸ್ತ್ರಂ ಕರೇ ಯಸ್ಯ ದುರ್ಜನಃ ಕಿಂ ಕರಿಷ್ಯತಿ?" ಅವರು ಶಾಂತಿಯ ಖಡ್ಗವನ್ನು ಹಿಡಿದು ತೆಲಂಗಾಣದ ರಣಭೂಮಿಯಲ್ಲಿ ನಿರಾತಂಕವಾಗಿ ನಡೆದರಷ್ಟೇ ಅಲ್ಲ, ಜಯಶೀಲರೂ ಆದರು

ಪೋಚಂಪಳ್ಳಿಯಲ್ಲಿ ಸೇರಿದ ಪ್ರಾರ್ಥನಾ ಸಭೆಯಲ್ಲಿ ಒಬ್ಬ ರೈತ ಮುಂದೆ ಬಂದು ತನ್ನ ಮತ್ತು ಐವರು ತಮ್ಮಂದಿರ ಪತಿಯಿಂದ ನೂರು ಎಕರೆ ಭೂಮಿಯನ್ನು ಭೂರಹಿತರಿಗೆಂದು ವಿನೋಬಾಗೆ ದಾನಮಾಡಿದ.

ವಿನೋಬಾಗೆ ಬೆಳಕು ಕಂಡಂತಾಯಿತು. ಕೂಡಲೇ ಶಂಕರಾಚಾರ್ಯರ ವಾಕ್ಯವನ್ನು ಉದ್ಧರಿಸಿ ಅವರು "ದಾನಂ ಸಂವಿಭಾಗಃ" ಎಂದುಬಿಟ್ಟರು. ಭೂಮಿ ಇಲ್ಲದ ದರಿದ್ರ ನಾರಾಯಣನಿಗೆ ಭೂಮಿ ಹಂಚುವ ಕಾರ್ಯವನ್ನು ಕೈಗೆತ್ತಿಕೊಂಡರು. ಇದು ನಡೆದುದು ೧೯೫೧, ಎಪ್ರಿಲ್ ೧೮ ರಂದು. ಮೊದಲ ನೂರು ಎಕರೆಯನ್ನು ದರಿದ್ರನಾರಾಯಣನಿಗೆ ಪಾಲುಗೊಟ್ಟ ರೈತನ ಹೆಸರು ರಾಮಚಂದ್ರ ರೆಡ್ಡಿ.

ವಿನೋಬಾ ಆಗಲೇ ಕೃತಸಂಕಲ್ಪರಾದರು. ಪ್ರತಿಯೊಬ್ಬನೂ ತನ್ನ ಭೂಮಿಯ ಆರರಲ್ಲಿ ಒಂದು ಪಾಲನ್ನು ದರಿದ್ರನಾರಾಯಣನಿಗೆ ಕೊಡಬೇಕು. ದರಿದ್ರನಾರಾಯಣನ ಪರವಾಗಿ ಭಾರತದ ಬೆಳೆಯುವ ಹೊಲಗಳ ಆರನೇ ಒಂದಂಶ—ಎಂದರೆ ಐದು ಕೋಟಿ ಎಕರೆ—ಭೂದಾನ ದೊರಕಿಸಬೇಕು ಎಂದು. ಆ ಸಂಕಲ್ಪದ ಮೊಳಕೆ ಬೆಳೆದು ಮುಂದೆ ಶ್ರಮದಾನ, ಸಂಪತ್ತಿದಾನ, ಗ್ರಾಮದಾನ, ಜೀವನದಾನದ ವರೆಗೆ ತಲುಪಿತು ದರಿದ್ರನಾರಾಯಣನಿಗೆ ಭೂಮಿ ಹಂಚಿಕೊಡುವ ಸಲುವಾಗಿ ದುಡಿಯಲು ಜೀವನದಾನ ಮಾಡಿದವರ ಸಂಖ್ಯೆಯೇ ಸುಮಾರು ಎರಡು ಸಾವಿರವಾಗಿದೆ ಈಗ. ಸುಮಾರು ಐವತ್ತು ಲಕ್ಷ ಎಕರೆ ಭೂಮಿ ದಾನವಾಗಿ ವಿನೋಬಾಗೆ ದೊರೆತಿದೆ ಈ ಆರುವರೆ ವರ್ಷಗಳಲ್ಲಿ ವಿನೋಬಾ ಕೃತಕೃತ್ಯರಾಗಲು ಇನ್ನು ನಾಲ್ಕುವರೆ ಕೋಟಿ ಎಕರೆ ಭೂಮಿ ಅವರಿಗೆ ದೊರೆಯಬೇಕು. ಅಷ್ಟು ದೊರ

ಕಿಸುವ ವಿಶ್ವಾಸ ಅವರಿಗೆ ಇದೆ. ತಮ್ಮ ಗ್ರಾಮ ರಾಜ್ಯದ ಹಾದಿಯಲ್ಲಿ ಆಗ ಒಂದು ಮಜಲು ಮುಟ್ಟಿದಂತಾಗುವುದು ಎನ್ನುತ್ತಾರೆ ಅವರು.

* * *

ವಿನೋಬಾ ಹುಟ್ಟಿದುದು ೧೮೯೫ ಸಪ್ಟಂಬರ ೧೧ ರಂದು— ಗಾಗೋದೆಯಲ್ಲಿ. ತಂದೆ ನರಹರಿ ಭಾವೆಯವರು ಬಡೋದೆಯ ಗಾಯಕವಾಡರ ಸರಕಾರದಲ್ಲಿ ನೌಕರಿಯಲ್ಲಿದ್ದರೂ ವಿನೋಬಾ ಪ್ರಾಥಮಿಕ ಶಿಕ್ಷಣ ಪಡೆದುದು ಗಾಗೋದೆಯಲ್ಲಿಯೆ. ೧೯೦೭ ರಲ್ಲಿ ಅವರು ಬಡೋದೆಗೆ ಬಂದು ಹೈಸ್ಕೂಲಿಗೆ ಸೇರಿದರು. ಅನಂತರ ಸರ್ಟಿಫೀಕೇಟುಗಳನ್ನು ಸುಟ್ಟು ಊರು ಬಿಟ್ಟ ಅವರ ವಿದ್ಯಾಭ್ಯಾಸದ ಮುಖ ತಿರುಗಿತು. ಕಾಶಿಯಲ್ಲಿ ಸಂಸ್ಕೃತ ಕಲಿಯುತ್ತಿದ್ದ ಅವರು ಗಾಂಧೀ ಆಶ್ರಮ ಸೇರಿದ ನಂತರವೂ ಒಂದು ವರ್ಷ ರಜೆ ಪಡೆದುಕೊಂಡು ತಮ್ಮ ಮನೆತನದ ಊರಾದ ವಾಯಿಗೆ ಬಂದರು. ಅಲ್ಲಿಯ ವಿದ್ವಾಂಸ ನಾರಾಯಣಶಾಸ್ತ್ರಿ ಮರಾಠೆಯವರ ಪ್ರಜ್ಞಾ ಪಾಠಶಾಲೆಯಲ್ಲಿ ಉಪನಿಷತ್, ಗೀತೆ, ಬ್ರಹ್ಮಸೂತ್ರ (ಶಂಕರರ ಭಾಷ್ಯದೊಂದಿಗೆ), ಮನುಸ್ಮೃತಿ, ಪಾತಂಜಲ ಯೋಗದರ್ಶನ, ನ್ಯಾಯಸೂತ್ರ, ವೈಶೇಷಿಕ ಸೂತ್ರ, ಯಾಜ್ಞವಲ್ಕ್ಯಸ್ಮೃತಿ ಮುಂತಾದ ಗ್ರಂಥಗಳನ್ನು ಅಭ್ಯಾಸ ಮಾಡಿದರು.

ಈಗ ಅವರು ಸ್ವತಂತ್ರವಾಗಿಯೇ ಗಾಂಧೀ ಮಾರ್ಗದ ಒಂದು ಕಾರ್ಯಕ್ರಮ ಪಟ್ಟಿಕೆಯನ್ನು ತಯಾರಿಸಿಕೊಂಡು ಅದರಂತೆ ಆಚರಿಸಿದರು. ಮಹಾರಾಷ್ಟ್ರದಲ್ಲಿ ಸುಮಾರು ನಾಲ್ಕುನೂರು ಮೈಲುಗಳ ಕಾಲ್ನಡಿಗೆಯ ಪ್ರವಾಸ ನಡೆಸಿ ಪ್ರವಚನಗಳನ್ನು ನಡೆಸಿದರು. ಅದರಂತೆ ತಮ್ಮ ಅಜ್ಜನೂ ಮಾಡಿರದ ಕೆಲವು ಹೊಸ ವ್ರತಗಳನ್ನು (ಅಜ್ಜ ಶಂಭೂ ಭಾವೆ ಚಂದ್ರಾಯಣ ವ್ರತನಿಷ್ಠರಾಗಿದ್ದರು) ಅವರು ಪೂರಯಿಸಿದ್ದರು.

ಈ ವಿಷಯಗಳೆಲ್ಲವನ್ನೂ ಗಾಂಧೀಜಿಗೆ ವರದಿ ಮಾಡಿ ತಮ್ಮನ್ನು ಮಗನಾಗಿ ಸ್ವೀಕರಿಸಬೇಕೆಂದು ವಿನೋಬಾ ಕೇಳಿಕೊಂಡಾಗ ಗಾಂಧೀಜಿಗಾದ ಆನಂದ ಅಷ್ಟಿಷ್ಟಲ್ಲ. ಅವರು ವಿನೋಬಾನನ್ನು ತಮ್ಮ ದತ್ತಪುತ್ರನನ್ನಾಗಿ ಸ್ವೀಕರಿಸಿದರು.

ದೃಢವ್ರತಿ ವಿನೋಬಾ ಎಳವೆಯಲ್ಲಿ ಸ್ವಲ್ಪ ಕಟುಭಾಷಿಗಳಾಗಿದ್ದರು. "ಗಡ್ಡ ಯಾಕೆ ಇಳಿಬಿಟ್ಟಿದ್ದೀಯಾ?'' ಎಂದರೆ "ನೀನು ನಾಯಿಂದನೇ? ನಿನಗೇಕೆ ಬೇಕು?" ಎಂದು ಅವರು ಉತ್ತರ ಕೊಡುತ್ತಿದ್ದರಂತೆ. ಇಂಗ್ಲಿಷಿನಲ್ಲಿ ಯಾರಾದರೂ ಮಾತನಾಡಿದರೆ ''ನಿನ್ನ ತಾಯಿ ಮೇಡಮ್ಮನೇ?'' ಎಂದು ಅವರು ಪ್ರಶ್ನಿಸುತ್ತಿದ್ದರು.

ಆದರೆ ಸಂಯಮದ ಸಾಧನೆಯಿಂದ ಅವರು ಈಗ ಪೂರ್ಣ ಸಾತ್ವಿಕರಾಗಿದ್ದಾರೆ.

* * *

ವಿನೋಬಾ ಸಂಸ್ಕೃತ, ಇಂಗ್ಲಿಷ್, ಅರೇಬಿಕ್ ಭಾಷೆಗಳಲ್ಲದೆ ಭಾರತದ ಹೆಚ್ಚಿನ ಎಲ್ಲ ಪ್ರಾಂತೀಯ ಭಾಷೆಗಳನ್ನು ಬಲ್ಲರು. ಅವರ ಮಾತೃಭಾಷೆ ಮರಾಠಿ. ಅದರಲ್ಲಿ ಅವರು ಅನೇಕ ಪಾಂಡಿತ್ಯಪೂರ್ಣ ಗ್ರಂಥಗಳನ್ನು ರಚಿಸಿರುವರು. ಕನ್ನಡ ಅವರ ಪ್ರೀತಿಯ ಭಾಷೆಗಳಲ್ಲಿ ಒಂದು. ಅವರು ಸರಳವಾದ ಕನ್ನಡವನ್ನು ಪ್ರಯತ್ನದಿಂದ ಮಾತನಾಡಬಲ್ಲರು. ಕನ್ನಡದಲ್ಲಿ ಬರೆಯಬಲ್ಲರು. ಕನ್ನಡನಾಡಿನ ಬಗೆಗೆ ಕೂಡ ಅವರಿಗೆ ತುಂಬ ಅಭಿಮಾನವುಂಟು. ಅವರ ತಾಯಿಯ ತವರು ಮತ್ತು ಇತರ ಬಳಗದವರು ಕರ್ನಾಟಕದವರು. ಮೊನ್ನೆ ತಾನೇ ಹಾವನೂರಿಗೆ ಕಾಲಿಟ್ಟ ಭಾವೆಯವರು "ಓ! ಇದು ನಾನು ಚಿಕ್ಕಂದಿನಲ್ಲಿ ಆಡಿದ ಊರು. ತಾಯಿಯೊಂದಿಗೆ ಬೆಳಗ್ಗೆ ಹೋಗಿ ಇಲ್ಲಿನ ಪ್ರಸ್ರವಣಿಯಲ್ಲಿ ನಾನು ಸ್ನಾನ ಮಾಡಿದ್ದೇನೆ. ಈ ಮನೆಯಲ್ಲಿಯೇ ಐವತ್ತೇಳು ವರ್ಷಗಳ ಹಿಂದೆ ನಾನಿದ್ದೆ. ಇವು ನಾನು ಅಡ್ಡಾಡಿದ ಬೀದಿಗಳು" ಎಂದು ನೆನೆದುಕೊಂಡರು.

ಭಾರತದ, ಏಕೆ ಏಶಿಯದ ಪ್ರಮುಖ ಭಾಷೆಗಳ ತಿರುಳನ್ನು ಬಲ್ಲ ಭಾವೆಯವರು ಆ ಪ್ರದೇಶಕ್ಕೆ ಸಂಬಂಧಿಸಿದ ಧರ್ಮಗಳ ನಾಡಿಯ ಮಿಡಿತವನ್ನೂ ಸರಿಯಾಗಿ ಬಲ್ಲರು ಹಿಂದೂ, ಇಸ್ಲಾಂ ಕ್ರಿಶ್ಚಿಯನ್, ಬೌದ್ಧ ಮುಂತಾದ ಧರ್ಮ ಸೂಕ್ಷ್ಮಗಳನ್ನು ಅವರು ಗಾಂಧೀಜಿಯ ಮಾರ್ಗ

ದರ್ಶನದಲ್ಲಿ ಗಳಿಸಿಕೊಂಡಿದ್ದಾರೆ. ಅಹಿಂಸೆ ಮತ್ತು ಭಾರತೀಯ ಸಂಸ್ಕೃತಿಯನ್ನು ತಳಕು ಹಾಕುತ್ತ ಅವರು, ಅಹಿಂಸೆಯು ಎಲ್ಲ ಕ್ಷೇತ್ರಗಳಲ್ಲಿಯೂ ವಿಸ್ತರಿಸಿದಾಗ ಭಾರತೀಯ ಸಂಸ್ಕೃತಿ ತನ್ನ ಕೊನೆಯ ಶಿಖರವನ್ನು ಕಾಣುವುದು ಎನ್ನುವರು.

ವಿನೋಬಾ ಒಳ್ಳೆಯ ಮಾತುಗಾರರು. ವ್ಯಾಖ್ಯಾನಕಾರರು. ಅವರು ಪರಿಣಾಮಕಾರಿಯಾಗಿ ಬರೆಯಲೂ ಬಲ್ಲರು. ಅದರಂತೆ ಅವರು ಕವಿಗಳು ಕೂಡ. ಗೀತೆಯನ್ನು ಮರಾಠಿಯಲ್ಲಿ ಅವರು ಅನುವಾದಿಸಿದ್ದಾರೆ. ಮೂಲದ ಛಂದಸ್ಸನ್ನೇ ಉಪಯೋಗಿಸಿ ಗೀತೆಯ ಭಾವವನ್ನು ಮರಾಠಿಗೆ ಭಟ್ಟಿ ಇಳಿಸುವುದರಲ್ಲಿ ಆಚಾರ್ಯ ಭಾವೆಯವರು ಸಂಪೂರ್ಣ ಯಶಸ್ವಿಯಾಗಿದ್ದಾರೆ. ಆಚಾರ್ಯರ " ಗೀತಾಯಿ " [ ಗೀತಾಮಾತೆ ] ಮರಾಠಿ ಜನರಲ್ಲಿ ತುಂಬ ಜನಪ್ರಿಯತೆಯನ್ನು ಗಳಿಸಿದೆ.

* * *

ಸಂತ ವಿನೋಬಾ ಗಾಂಧೀಜಿಯ ಶಿಷ್ಯರು. ಇದರಲ್ಲಿ ಸಂಶಯವಿಲ್ಲ. ಆದರೆ ಗಾಂಧೀ ವಿಶ್ವದಲ್ಲಿ ಅವರ ಸ್ಥಾನ ಧ್ರುವತಾರೆಯದು ಎನ್ನಬೇಕು, ಅಷ್ಟೆ. ಗಾಂಧೀಜಿಯ ತರುವಾಯ ವಿನೋಬಾ ರಾಜಕೀಯದಿಂದ ಸಂಪೂರ್ಣ ದೂರವಾಗಿದ್ದಾರೆ. ವಿನೋಬಾ ಗಾಂಧೀಜಿಯ ಧಾರ್ಮಿಕ ಮತ್ತು ಸಾಮಾಜಿಕ ನೀತಿಯ ವ್ಯಾಖ್ಯಾತರು. ರಾಜಕೀಯವನ್ನು ಗಾಂಧೀಜಿ ಅತ್ಯಂತ ಸರಳ ಮಾಡಿದ್ದರೂ ವಿನೋಬಾ ಆ ಸರಳ ರಾಜಕೀಯದಲ್ಲೂ ಅಷ್ಟೊಂದು ಆಸಕ್ತಿ ತಳೆದವರಲ್ಲ. ಅನಾರ್ಕಿಸ್ಟರು ಹೇಳುವಂತೆ ಗಾಂಧೀ ರಾಮರಾಜ್ಯದಲ್ಲಾಗಲಿ ವಿನೋಬಾರ ಗ್ರಾಮರಾಜ್ಯದಲ್ಲಾಗಲಿ ಕಳ್ಳರಿಲ್ಲ ಪೋಲೀಸರಿಲ್ಲ. ಸುಸಂಸ್ಕೃತ, ತೃಪ್ತ, ಆದರ್ಶ ಮಾನವರಷ್ಟೇ ಅವರ ರಾಜ್ಯದ ಕಲ್ಪನೆಗೆ ಆಧಾರ. ಈ ದೃಷ್ಟಿಯಲ್ಲಿ ವಿನೋಬಾ ಗಾಂಧೀಜಿಯ ನೆರಳಿನಂತೆ ನಮಗೆ ತೋರುತ್ತಾರೆ.

ಆದರೆ ಗಾಂಧೀಜಿಯ ಮೋಹಕವಾದ, ಎದುರಾಳಿಯ ಶಕ್ತಿಯನ್ನೆಲ್ಲ ಹೀರಿಕೊಳ್ಳಬಲ್ಲ ಆ ವ್ಯಕ್ತಿತ್ವದ ಭಾಗ ವಿನೋಬಾರಿಗಿದೆಯೆನ್ನುವುದು ಕಷ್ಟ. ಗಾಂಧೀಜಿ ಹೃದಯದಿಂದ ಒಂದು ವಿಷಯವನ್ನು ಗ್ರಹಿಸಿ ಆ ಮೇಲೆ ಅದಕ್ಕೆ ತರ್ಕದ ಉಡುಗೆ ತೊಡಿಸುತ್ತಿದ್ದರು. ಆದರೆ ವಿನೋಬಾ ಶಂಕರಾಚಾರ್ಯರಂತೆ ನಿಶಿತ ತರ್ಕದಿಂದ ವಿಷಯವನ್ನು ಸಾಧಿಸಿ ಆ ಮೇಲೆ ಅದನ್ನು ಹೃದಯ ಪೀಠದ ಮೇಲೇರಿಸುವವರು.

ಆದರೆ ಇದು ಸಹಜವೇ. ಪ್ರತಿಯೊಬ್ಬ ಮತ ಸ್ಥಾಪಕನ ಪ್ರಮುಖ ಶಿಷ್ಯನೂ ಗುರುವಿನ ಅರ್ಥವನ್ನು ತರ್ಕದಿಂದಲೇ ವಿಸ್ತರಿಸಿದ್ದು ನಮಗೆ ಗೋಚರವಾಗುತ್ತದೆ. ಮತ್ತು ಇದು ಒಂದು ರೀತಿಯಿಂದ ಉಪಯುಕ್ತವೇ. ಕಮ್ಯುನಿಸ್ಟರು ಗಾಂಧೀಜಿಯ ಹೆಸರನ್ನು ಧಾರಾಳವಾಗಿ ಉಪಯೋಗಿಸಿದರೂ ಅವರಿಂದ ಪ್ರಭಾವಿತರಾಗಿರಲಿಲ್ಲ ಆದರೆ ವಿನೋಬಾ ಅವರ ತರ್ಕಬದ್ಧ ವಾದ ಸರಣಿಯ ಮುಂದೆ ಅವರು ಪೆಚ್ಚಾಗಿ ಅವರ ಅನುಯಾಯಿಗಳಾಗಿದ್ದಾರೆ. ಸಮಾಜವಾದಿ ಜಯಪ್ರಕಾಶರೂ ಗಾಂಧೀಜಿಯನ್ನು ಟೀಕಿಸಿದವರೇ. ಆದರೆ ವಿನೋಬಾ ಅವರ ಮೇಲೆ ಅಮಿತ ಪ್ರಭಾವ ಬೀರಿದ್ದಾರೆ. "ಸಮಾಜವಾದವೇ ಏಕೆ ? '' ಎಂದು ಪುಸ್ತಕ ಬರೆದ ಜಯಪ್ರಕಾಶರು ವಿನೋಬಾರ ಕೈಯಲ್ಲಿ ಜೀವನದಾನಿಯಾಗಿ ಮಾರ್ಪಟ್ಟದ್ದು ಸಣ್ಣ ಮಾತಲ್ಲ.

* * *

ಬೆಳಗ್ಗೆ ಮೂರೂವರೆ ಗಂಟೆಗೆ ವಿನೋಬಾ ಏಳುತ್ತಾರೆ. ಸ್ನಾನ ಪ್ರಾರ್ಥನೆ ತೀರಿಸಿಕೊಂಡ ಅವರು ನಾಲ್ಕುವರೆ ಗಂಟೆಗೆ ಮುಂದಿನ ಹಳ್ಳಿಗೆ ಪ್ರಯಾಣ ಬೆಳೆಸುತ್ತಾರೆ. ಒಂದು ಹಳ್ಳಿಯಲ್ಲಿ ಒಂದು ದಿನಕ್ಕಿಂತ ಹೆಚ್ಚು ಅವರು ವಸತಿ ಮಾಡುವವರಲ್ಲ. ಪ್ರತಿಯೊಂದು ಹಳ್ಳಿಯಲ್ಲೂ ಅವರು ಬಡಜನರ, ಹರಿಜನರ, ದರಿದ್ರನಾರಾಯಣರ ಕೇರಿಗಳಿಗೆ ಭೆಟ್ಟಿಕೊಟ್ಟು ಅವರ ಸುಖದುಃಖಗಳನ್ನು ವಿಚಾರಿಸಿ ಸಲಹೆ ನೀಡುತ್ತಾರೆ. ಅವರಿಗೆ ಸಲಹೆ ನೀಡಿ ಹೊಸ ಜೀವನಕ್ಕೆ ದಾರಿ ತೋರಿಸುತ್ತಾರೆ. ಅನಂತರ ಬಿಡುವೈದಾನಿನಲ್ಲಾಗಲಿ ಒಂದು ಮರದ ನೆರಳಿನಲ್ಲಾಗಲಿ ಪ್ರಾರ್ಥನಾಸಭೆ ನೆರೆಯುತ್ತದೆ. ಭೂದಾನ ಸಂದೇಶವನ್ನು ವಿನೋಬಾ ಇಲ್ಲಿ ವಿವರಿಸುವರು. ಪ್ರತಿದಿನ ಹೊಸ ವಾದ ಹೊಸ

ಉದಾಹರಣೆಗಳಿಂದ ಭೂದಾನವನ್ನು ಅವರು ಜನತೆಯ ಮುಂದೆ ಪರಿಣಾಮಕಾರಿಯಾಗಿ ಇಡುತ್ತಾರೆ. ನೆರೆದ ಸಜ್ಜನರಲ್ಲಿ ಒಬ್ಬಿಬ್ಬರು ತಮ್ಮ ಭೂಮಿಯನ್ನು ಕೊಟ್ಟರೆ ಕೆಲವರು ಕೈಲಾದ ಸಂಪತ್ತಿದಾನವನ್ನು ಮಾಡುತ್ತಾರೆ. ಇನ್ನು ಹಲವರು ಜೀವನದಾನಕ್ಕೆ ಮುಂದಾಗುತ್ತಾರೆ. ಆ ರಾತ್ರಿ ಅಲ್ಲಿ ಉಳಿದು ಮರುದಿನ ಬೆಳಗ್ಗೆ ದರಿದ್ರ ನಾರಾಯಣನ ನೆಲದ ಹಸಿವನ್ನು ಹಿಂಗಿಸಿರೆನ್ನುತ್ತ ವಿನೋಬಾ ಮತ್ತೆ ವಾಮನನ ಅವತಾರ ತಳೆಯುತ್ತಾರೆ.

ವಿನೋಬಾ ಹೋದಲ್ಲೆಲ್ಲ ಹಳ್ಳಿಯ ಜನ ಈ ಸಂತನನ್ನು ತಳಿರುತೋರಣಗಳಿಂದ ಸ್ವಾಗತಿಸುತ್ತಾರೆ. ವಿನೋಬಾ ಕೂಡ ಕಟ್ಟು-ನಿಟ್ಟಾಗಿ ತಮ್ಮ ಪಾದಯಾತ್ರೆಯ ಕಾರ್ಯಕ್ರಮವನ್ನು ಸಮಯಕ್ಕೆ ಸರಿಯಾಗಿ ನಡೆಸುತ್ತಾರೆ. ಅವರ ಪರಿವಾರದವರು ಮುಂದಿನ ಹಳ್ಳಿಗೆ ಹೋಗಿ ಮೊದಲೇ ಭೂದಾನ ಪ್ರಚಾರದ ಸಿದ್ಧತೆಯನ್ನು ನಡೆಸುತ್ತಾರೆ. ಅಲ್ಲದೆ ವಿನೋಬಾ ಮತ್ತು ಪರಿವಾರದ ವಸತಿಗೆ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಒಮ್ಮೆ ವಿನೋಬಾ ಮುಂದಿನ ಹಳ್ಳಿಯಲ್ಲಿ ಇಷ್ಟು ಹೊತ್ತಿಗೆ ಫಲಾಹಾರ ಸ್ವೀಕರಿಸುವುದಾಗಿ ತಮ್ಮ ಪರಿವಾರದವರಿಗೆ ಹೇಳಿದರು. ಯಾವುದೋ ತೊಂದರೆಯಿಂದ ಪರಿವಾರದವರು ಅಷ್ಟು ಹೊತ್ತಿಗೆ ಆ ಹಳ್ಳಿಗೆ ತಲುಪದ್ದರಿಂದ ಫಲಾಹಾರದ ಸಿದ್ಧತೆಯಾಗಿರಲಿಲ್ಲ. ಆದರೆ ವಿನೋಬಾ ಸ್ವಲ್ಪವೂ ಕಾಯಲಿಲ್ಲ, ತಮ್ಮ ಬಳಿಯಲ್ಲಿದ್ದಷ್ಟೇ ಫಲಹಾರ ಸಾಮಗ್ರಿಯಿಂದ ಅವರು ಎಲ್ಲವನ್ನೂ ತೀರಿಸಿಕೊಂಡರು.

ನಾಲಿಗೆಯ ರುಚಿ ಎಂದರೇನು? ವಿನೋಬಾ ಇದಕ್ಕೆ ಬಾಲ್ಯದಿಂದಲೂ ಉತ್ತರ ಹುಡುಕಿದವರಲ್ಲ. ಚಾಂದ್ರಾಯಣ ವ್ರತದ ವಾತಾವರಣದಲ್ಲಿ ಬೆಳೆದ ಅವರು ಆಹಾರಸೇವನೆಯನ್ನೂ ಒಂದು ವ್ರತವೆಂದು ತಿಳಿಯುತ್ತಾರೆ. ಬದುಕಿಗಾಗಿ ಔಷಧ ತೆಗೆದುಕೊಳ್ಳಬೇಕೆ? ಎಂಬುದೂ ಅವರ ಜಿಜ್ಞಾಸೆಗೆ ಒಳಗಾದ ವಿಷಯವೆ.

* * *

ಭಾರತದ ಭೂಸಮಸ್ಯೆಯನ್ನು ವಿನೋಬಾ ಬಿಡಿಸಹೊರಟಿದ್ದಾರೆ ಎಂದುಕೊಳ್ಳುವವರುಂಟು ನಮ್ಮಲ್ಲಿ. ಅಮೇರಿಕನ್ನರು ವಿನೋಬಾ ಕಮ್ಯುನಿಜಮ್ಮಿನ ಉಚ್ಚಾಟನೆಗೆ ತೊಡಗಿದ್ದಾರೆಂದು ಹೇಳುವುದೂ ಉಂಟು. ಆದರೆ ವಿನೋಬಾರ ಭೂದಾನದಲ್ಲಿ ಈ ಸಂಕುಚಿತ ಆರ್ಥಿಕ ರಾಜಕೀಯ ದೃಷ್ಟಿಗಳಷ್ಟೇ ಇಲ್ಲ. ಮಾನವೀಯತೆ, ಪ್ರೇಮ, ಅಹಿಂಸೆ, ಇವುಗಳ ಪ್ರಸಾರಕ್ಕಾಗಿ ಅವರು ಭೂದಾನ ಯಜ್ಞವನ್ನು ಕೈಕೊಂಡಿದ್ದಾರೆ. ವಿನೋಬಾ ಭೂದಾನ ಯಾತ್ರೆಯಿಂದ ಭಾರತದಲ್ಲಿ ಭೂಸಮಸ್ಯೆ ಪರಿಹಾರವಾದೀತೆಂದು ವಾದಕ್ಕೆ ಒಪ್ಪಬೇಕಾದರೂ ಪ್ರಾಯೋಗಿಕವಾಗಿ ಅಲ್ಲ. ಆದರೆ ಅದರಿಂದ ವರ್ಗಕಲಹದ ರಾಡಿ ಶಾಂತವಾಗುತ್ತಿರುವುದು ನಮಗೆ ಪ್ರತ್ಯಕ್ಷವಾಗಿದೆ. ಇಲ್ಲದವರು ಇದ್ದವರು ಕತ್ತಿ ಮಸೆಯುವುದು ಬಿಟ್ಟು ಸಹಾನುಭೂತಿಯ ಮಾತುಗಳತ್ತ ಒಲಿಯತೊಡಗಿದ್ದಾರೆ. ಇದು ಸಣ್ಣ ಸಾಧನೆಯೇನಲ್ಲ. ಹತ್ತೊಂಬತ್ತನೇ ಶತಮಾನದಿಂದ ಇದ್ದವರು ಇಲ್ಲದವರ ನಡುವೆ ದೊಡ್ಡ ಹಳ್ಳ ಕಡಿದವರು ಇಂದು ಮಹಾಪುರುಷರೆನಿಸಿದರೆ ವಿನೋಬಾ ಅದಕ್ಕೆ ಸೇತುವೆಯಾಗಿ ಇಬ್ಬರ ಸಂಗಮಕ್ಕೆ ನೆರವಾಗಿದ್ದಾರೆ.

ಈ ಕೆಲಸ ಗಾಂಧೀಜಿ ಆರಂಭಿಸಿದ ಕೆಲಸ. ಮಾನವರಲ್ಲಿರುವ ಭೇದಭಾವವನ್ನು ಅಳಿಸಲು ಅವರು ಜೀವಮಾನವಿಡೀ ಹೋರಾಡಿದರು. ಅವರ ಜೀವನಾನಂತರ ಸರ್ವೋದಯ ಸಮಾಜದ ನಾಯಕರಾಗಿ ವಿನೋಬಾ ಆ ಕೆಲಸವನ್ನು ಸರ್ವಾತ್ಮನಾ ಪೂರೈಸುತ್ತಿದ್ದಾರೆ.

ಮಾನವನ ಸಮಸ್ಯೆ ಭೂಮಿಯಲ್ಲಿಲ್ಲ, ಅವನ ಹೃದಯದಲ್ಲಿದೆ. ಆ ಹೃದಯ ಉದಾತ್ತವಾದರೆ ಎಲ್ಲ ಸಮಸ್ಯೆಗಳೂ ಕರಗಿಹೋಗುತ್ತವೆ. ಭೂದಾನ ಭಾರತೀಯರ ಹೃದಯಭೂಮಿಯನ್ನು ಕುರಿತಾಗಿದೆ. ನಿಮ್ಮ ಭೂಮಿಯಲ್ಲಿ ಪಾಲು ಕೇಳುವಾಗ ನಿಮಗಿಂತ ಹೀನಸ್ಥಿತಿಯಲ್ಲಿರುವವರಿಗಾಗಿ ನಿಮ್ಮ ಹೃದಯಭೂಮಿಯಲ್ಲಿ ವಿನೋಬಾ ಸ್ಥಳ ಕೇಳುತ್ತಾರೆ. ಭೂಮಿ ಬರಿ ಸಂಕೇತ ಮಾತ್ರ.



೩೫ ವರ್ಷಗಳ ಹಿಂದಿನ ಒಂದು
ಸಂಸ್ಮರಣೆ

# ಗಾಂಧೀಜಿ ಕಣ್ಣೀರು ಮಿಡಿದರು

ಮಹಾವೀರ ತ್ಯಾಗಿ

೧೯೨೧ ರ ಚಳವಳಿ ಇಳಿಮುಖವಾಗಿತ್ತು. ಶಿಕ್ಷೆಯನ್ನು ಅನುಭವಿಸಿಕೊಂಡು ಜನ ಜೇಲಿನಿಂದ ಬಿಡುಗಡೆ ಹೊಂದಿ ಹೊರಗೆ ಬರತೊಡಗಿದ್ದರು. ಇಂಗ್ಲಿಷರ ಕೈ ಮೇಲಾಗಿತ್ತು. ಆದರೆ ಜನರಲ್ಲಿಯ ಉತ್ಸಾಹ–ಉತ್ತೇಜನಗಳು ಶಾಂತವಾಗಿರಲಿಲ್ಲ. ವಿಧ್ವಂಸಕ ಕೃತಿಗಳಿಂದಲ್ಲದೆ ಅದು ಶಾಂತವಾಗುವಂತೆಯೂ ಇರಲಿಲ್ಲ.

ಖಿಲಾಫತ ದಿನಗಳಲ್ಲಿ ಹಿಂದು ಮತ್ತು ಮುಸಲ್ಮಾನರಲ್ಲಿ ಹಾಲು–ಸಕ್ಕರೆಯಂಥ ಸ್ನೇಹವಿತ್ತು. ಚಳವಳಿ ಶಾಂತವಾದದ್ದೇ ಈ ಸ್ನೇಹ ಅಳಿದು ಎರಡು ಬಣಗಳಾದವು. ಹಿಂದುಗಳು "ಶುದ್ಧಿ"-ಯನ್ನೂ ಮುಸಲ್ಮಾನರು "ತಬಲೀಗ"ನ್ನೂ ಸುರು ಮಾಡಿದರು. ಮತ್ತೆ ಕೇಳುವದುಂಟೆ? ದಂಗೆಗಳೂ ಸುರುವಾದವು. ಹಿಂದುಮಹಾಸಭೆ ಮತ್ತು ಮುಸ್ಲಿಂಲೀಗುಗಳು ಹುಟ್ಟಿದವು. ವಿದೇಶೀ ಸರಕಾರದ ಮನದಾಶೆ ಪೂರೈಸಿತು. ಕಾಂಗ್ರೆಸ್ಸಿಗರ ಬೆಲೆ ಇಳಿಯತೊಡಗಿತು.

ಈ ದಿನಗಳಲ್ಲಿಯೆ ಒಮ್ಮೆ ಕಾಂಗ್ರೆಸ್ ಅಧ್ಯಕ್ಷ ಮೌಲಾನಾ ಮುಹಮ್ಮದ ಅಲಿಯವರು ಒಂದು ಭಾಷಣದಲ್ಲಿ ಹೇಳಿದರು: "ಮಹಾತ್ಮಾ ಗಾಂಧಿಗಿಂತಲೂ ಓರ್ವ ಯಃಕಶ್ಚಿತ, ಪಾಪಿ ಮುಸಲ್ಮಾನನೇ ಶ್ರೇಷ್ಠನೆಂದು ನಾನು ತಿಳಿಯುತ್ತೇನೆ." ಪಂಜಾಬದಲ್ಲಿಯ ಹಿಂದು ಪತ್ರಿಕೆಗಳಲ್ಲಿ ಕೋಲಾಹಲವೆದ್ದಿತು. ಸಾವಧಾನಿಗಳಾದ ಹಿಂದುಗಳು ಕೂಡ ಕೆರಳುವಂತಾಯಿತು.

ನಾನು ಅಖಿಲ ಭಾರತ ಕಾಂಗ್ರೆಸ್ಸಿನ ಸದಸ್ಯನಾಗಿದ್ದೆ. ಪಂಡಿತ ಜವಾಹರಲಾಲ ನೆಹರೂ ಕಾರ್ಯದರ್ಶಿಗಳಾಗಿದ್ದರು. ಕಾಂಗ್ರೆಸ್ ಅಧ್ಯಕ್ಷರ ಈ ಮಾತುಗಳು ಅಸಹನೀಯವಾದವು. ನಾನು ಅವರಲ್ಲಿ ಅವಿಶ್ವಾಸ ಸೂಚಿಸುವ ಗೊತ್ತುವಳಿಯನ್ನು ಕಳಿಸಿಕೊಟ್ಟೆ. ಶ್ರೀ ನರದೇವ ಶಾಸ್ತ್ರಿಗಳು ಗೊತ್ತುವಳಿಯನ್ನು ಅನುಮೋದಿಸಿ ಅದಕ್ಕೆ ಸಹಿ ಹಾಕಿದ್ದರು.

ಅ. ಭಾ. ಕಾಂ. ಸಮಿತಿಯ ಸಭೆ ಅಹಮದಾಬಾದದಲ್ಲಿ ಕರೆಯಲ್ಪಟ್ಟಿತು. ಕಾಂಗ್ರೆಸ್ಸಿನ ಇತಿಹಾಸದಲ್ಲಿ ಈ ಸಭೆ ಅಮರವಾಗುಳಿಯುವಂಥದು. ಜೇಲಿನಿಂದ ಬಿಡುಗಡೆ ಹೊಂದಿದ ಮಹಾತ್ಮಾ ಗಾಂಧಿಯವರು ಮೊದಲನೆಯ ಸಲ ಈ ಸಭೆಗೆ ಬಂದಿದ್ದರು. ಅವರು ಜೇಲಿನಲ್ಲಿರುವಾಗ ಪಂಡಿತ ಮೋತೀಲಾಲ ನೆಹರೂ, ದೇಶಬಂಧು ಸಿ. ಆರ್. ದಾಸ ಮೊದಲಾದವರು ಒಂದು ವಿಚಾರಣಾ ಸಮಿತಿಯ ಮೂಲಕ ಶಾಸನ ಸಭೆಗಳ ಮೇಲಿನ ಬಹಿಷ್ಕಾರವನ್ನು ತೆಗೆದು ಹಾಕತಕ್ಕದ್ದು ಮತ್ತು ಶಾಸನ ಸಭೆಗಳಿಗೆ ಹೋಗಿ ಅಲ್ಲಿಂದಲೇ ಚಳವಳಿಯನ್ನು ನಡೆಸತಕ್ಕದ್ದು ಎಂದು ಶಿಫಾರಸು ಮಾಡಿದ್ದರು. ಈ ವಿಚಾರದಲ್ಲಿ ಕಾಂಗ್ರೆಸ್ಸಿಗರಲ್ಲಿ ಎರಡು ಪಕ್ಷಗಳಾಗಿದ್ದವು.

ಕ್ರಾಂತಿಕಾರಕರು ಕೂಡ ಇಷ್ಟರಲ್ಲಿ ಪಂಜಾಬ

ಮತ್ತು ಬಂಗಾಲದಲ್ಲಿ ತಮ್ಮ ಚಟುವಟಿಕೆಗಳನ್ನಾರಂಭಿಸಿದ್ದರು. ಈ ಗದ್ದಲದಲ್ಲಿಯೇ ಶಹೀದ ಗೋಪೀನಾಥ ಸಾಹಾರಿಗೆ ಫಾಶಿ ಶಿಕ್ಷೆಯಾಗಿತ್ತು. ಕ್ರಾಂತಿಕಾರಕರು ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ಮಹಾತ್ಮಾ ಗಾಂಧಿಯವರಿಗೆ ಅವರ ಅಸಹಕಾರ ಚಳವಳಿಗೆ ಪೂರ್ಣ ಅವಕಾಶವನ್ನು ಕೊಡುವದಾಗಿಯೂ ಆ ಸಮಯದಲ್ಲಿ ಬಾಂಬು ಮುಂತಾದವುಗಳ ಪ್ರಯೋಗಮಾಡುವದಿಲ್ಲೆಂದೂ ವಚನವಿತ್ತಿದ್ದರು. ಹಾಗಿದ್ದರೂ ಕೆಲ ಬಿಸಿ ರಕ್ತದ ತರುಣರಿಗೆ ಇಂಗ್ಲಿಷ್ ಸರಕಾರದ ಅತ್ಯಾಚಾರ ಸಹನವಾಗಲಿಲ್ಲ. ಶ್ರೀ ಸಾಹಾ ಕೂಡ ಇಂಥ ಬಿಸಿನೆತ್ತರದ ತರುಣರಾಗಿದ್ದರು. ಕಲಕತ್ತೆಯ ಪೋಲೀಸ ಕಮೀಶನರ ಸರ್ ಚಾರ್ಲಸ್ ಟೀಗರ್ಟರು ಕ್ರಾಂತಿಕಾರಕರ ಬೆನ್ನು ಹತ್ತಿದ್ದರು. ಅವರನ್ನು ಗುಂಡಿಕ್ಕಿ ಕೊಲ್ಲಲು ಶ್ರೀ ಸಾಹಾ ನಿಶ್ಚಯಿಸಿದರು. ಆದರೆ ಮೋಸಹೋಗಿ ಡೇ ಎಂಬವರ ಮೇಲೆ ಗುಂಡು ಹಾರಿಸಿದರು. ಗೋಪೀನಾಥರಿಗೆ ಫಾಶಿ ಶಿಕ್ಷೆ ವಿಧಿಸಲ್ಪಟ್ಟಿತು.

ಗೋಪೀನಾಥ ಸಾಹಾರ ಸಾಹಸವನ್ನು ಅಭಿನಂದಿಸುವ ಗೊತ್ತುವಳಿಯೊಂದನ್ನು ದೇಶಬಂಧು ದಾಸರು ಮಂಡಿಸಿದರು. ಮಹಾತ್ಮಾ ಗಾಂಧಿ ಅದಕ್ಕೆ ಅನುಕೂಲರಾಗಿರಲಿಲ್ಲ. ಗೊತ್ತುವಳಿಯ ಮೇಲೆ ಚರ್ಚೆ ನಡೆಯುವ ಮೊದಲೇ ಮೌಲಾನಾ ಮಹಮ್ಮದ ಅಲಿಯವರು, "ಎಲ್ಲಕ್ಕೂ ಮೊದಲು ನನ್ನ ಅದೃಷ್ಟದ ನಿರ್ಣಯವಾಗಬೇಕು" ಎಂದು ನನ್ನನ್ನು ಕೂಗಿ, "ಅವಿಶ್ವಾಸ ಗೊತ್ತುವಳಿಯನ್ನು ಮಂಡಿಸಿರಿ" ಎಂದು ಹೇಳಿದರು.

ನಾನು ಆಗ ೨೪ ವರ್ಷದ ಯುವಕ. ಹೆಸರು ಕೂಗಿದೊಡನೆ ಜಿಗಿದೆದ್ದು ವೇದಿಕೆಯ ಮೇಲೇರಿ ನಿಂತೆ. "ಅಧ್ಯಕ್ಷರೇ ಮತ್ತು ಸದ್ಗೃಹಸ್ಥರೇ" ಎಂದು ನಾನಂದೊಡನೆ ಮಹಾತ್ಮಾ ಗಾಂಧಿಯವರು, "ಗೊತ್ತುವಳಿ ಮಂಡಿಸುವ ಪೂರ್ವದಲ್ಲಿ ಒಂದೆರಡು ಮಾತುಗಳನ್ನು ಹೇಳಲು ನನಗೆ ಅವಕಾಶ ಬೇಕು" ಎಂದು ಮಹಮ್ಮದ ಅಲಿಯವರಲ್ಲಿ ಕೇಳಿಕೊಂಡರು. ಮೌಲಾನರು ಗಟ್ಟಿಯಾಗಿ "ಆರ್ಡರ್, ಆರ್ಡರ್! ಮೊದಲು ಗೊತ್ತುವಳಿಯ ಇತ್ಯರ್ಥ, ಆಮೇಲೆ ಎರಡನೆಯ ಮಾತು" ಎಂದರು.

ಆದರೆ ಮಹಾತ್ಮಾಜಿಯವರನ್ನು ಸುಮ್ಮನೆ ಕೂಡ್ರಿಸುವದು ಸುಲಭವಾಗಿರಲಿಲ್ಲ. ಅವರು "ನಾನು ಮಾತಾಡಲು ನಿಮ್ಮದೇನೂ ಆತಂಕವಿಲ್ಲವಲ್ಲ" ಎಂದು ನನ್ನನ್ನು ಕೇಳಿದರು. ನಾನು "ಇಲ್ಲ"ವೆಂದೆ. ಆಗ ಗಟ್ಟಿಯಾಗಿ ನಗುತ್ತ ಬಾಪೂ, "ನಾನೂ ಇವರೂ ರಾಜಿ ಆಗಿರುವಾಗ ಯಾಕೆ ಮಾತಾಡಬೇಕು ಕಾಜಿ?" ಎಂದರು. ಇಡೀ ಸಭೆಗೆ ಸಭೆಯೇ ನಕ್ಕು ಅಟ್ಟಹಾಸ ಮಾಡಿತು. ನಾನು ಸರ್ರನೆ ಗಾಂಧೀಜಿಯವರ ಹತ್ತಿರ ಹೋಗಿ ಕುಳಿತೆ.

ಬಾಪೂ ಹೇಳಿದರು: "ಈ ಗೊತ್ತುವಳಿ ಸರಿಯಾಗಿಲ್ಲ. ಮೌಲಾನಾರವರು ಇಲ್ಲಿ ಇನ್ನಾರಿಗೂ ಏನನ್ನೂ ಹೇಳಿಲ್ಲ. ಮಹಾತ್ಮಾ ಗಾಂಧಿಗಿಂತಲೂ ಯಃಕಶ್ಚಿತ, ಪಾಪಿ ಮುಸಲ್ಮಾನ ಒಳ್ಳೆಯವ ಎಂದು ತಿಳಿದುಕೊಳ್ಳುವ ವಿಚಾರ ಇದು. ಅದರಲ್ಲಿ ಬೈಗಳೇನೂ ಇಲ್ಲ. ಗಾಂಧಿಗಂತೂ ಈ ಮಾತಿನಿಂದ ಏನೂ ಕೇಡೆನಿಸಿಲ್ಲ. ಅಂದ ಮೇಲೆ ಆ ಮಾತೇ ಮುಗಿಯಿತಲ್ಲ."

"ಮಹಾತ್ಮಾ ಗಾಂಧಿಗೂ ಇದಕ್ಕೂ ಏನೂ ಸಂಬಂಧವಿಲ್ಲ. ಮೌಲಾನಾರ ಹೇಳಿಕೆಯಿಂದ ರಾಷ್ಟ್ರಪತಿಗಳ ದೃಷ್ಟಿಯಲ್ಲಿ ಪುಂಡ ಬದಮಾಶ್ ಮುಸಲ್ಮಾನ ಕೂಡ ಎರಡನೆಯ ಧರ್ಮದ ಶ್ರೇಷ್ಠತಮ ವ್ಯಕ್ತಿಗಿಂತಲೂ ಶ್ರೇಷ್ಠ ಎಂದಾಗುವದು. ಇಂದು ಎಲ್ಲೆಲ್ಲಿಯೂ ಹಿಂದು-ಮುಸಲ್ಮಾನರ ದಂಗೆಗಳಾಗುತ್ತಿವೆ. ಇಂಥ ಹೇಳಿಕೆಯಿಂದ ಉರಿಯುವ ಬೆಂಕಿಯಲ್ಲಿ ಪೆಟ್ರೋಲನ್ನು ಸುರುವಿದಂತಾಗುವದು" ಎಂದು ನಾನಂದೆ.

"ನಿಮಗೆ ಈ ಗೊತ್ತುವಳಿ ಸ್ವೀಕೃತವಾಗುವದೆಂಬ ಆಶೆಯಿದೆಯೆ? ನಿಮಗೆಷ್ಟು ಮತಗಳು ಸಿಕ್ಕಾವು?" ಗಾಂಧೀಜಿ ಕೇಳಿದರು.

"ಎರಡು ಮತಗಳಂತೂ ನಿಶ್ಚಿತ ಸಿಗುವವು. ಗೊತ್ತುವಳಿ ಪಾಸಾಗಲಿ ಆಗದಿರಲಿ, ಕಾಂಗ್ರೆಸ್ ಅಧ್ಯಕ್ಷರ ಸಿದ್ಧಾಂತಕ್ಕೆ ಕೆಲವರಾದರೂ ಆಕ್ಷೇಪವೆತ್ತಿದ್ದರು ಎನ್ನುವದು ದಾಖಲೆಯಲ್ಲಿ ಉಳಿಯು

ತ್ರದಲ್ಲ, ಅಷ್ಟೇ ಸಾಕು."

"ಇಂಥ ಮಾತುಗಳಿಂದ ಕಾಂಗ್ರೆಸ್ಸಿನ ಹೆಸರು ಒಳ್ಳೆಯದಾಗುವದರ ಬದಲು ಕೆಟ್ಟೀತು. ಹಿಂದು-ಮುಸಲ್ಮಾನರಲ್ಲಿ ಒಕ್ಕಟ್ಟನ್ನು ಕಾಪಾಡಿಕೊಳ್ಳಬೇಕಾದರೆ ಪರಸ್ಪರರ ದೋಷಗಳನ್ನು ಸಹಿಸಿಕೊಳ್ಳಬೇಕಾಗುವದು. ಈ ಗೊತ್ತುವಳಿ ಯೋಗ್ಯವಲ್ಲ." ಗಾಂಧೀಜಿ ಹೇಳಿದರು.

''ನಾನಂತೂ ಗೊತ್ತುವಳಿಯನ್ನು ಹಿಂತೆಗೆದುಕೊಳ್ಳಲಾರೆ, ಬಾಪೂ.''

ನಾನು ಎದ್ದುನಿಲ್ಲುವ ಮೊದಲೇ ಗಾಂಧೀಜಿ, "ಒಳ್ಳೇದು, ನಿಮ್ಮಿಷ್ಟ. ಆದರೆ ಒಂದು ಮಾತಿಗೆ ಉತ್ತರ ಕೊಡಿರಿ. ನೀವು ಬುದ್ಧಿವಂತರೋ, ಮಹಾತ್ಮಾ ಗಾಂಧಿಯವರೋ ?" ಎಂದರು.

ನಾನು ಉತ್ತರವಿತ್ತೆ, "ಗಾಂಧೀಜಿ."

''ಸರಿ, ಹಾಗಾದರೆ ಬುದ್ಧಿವಂತನ ಮಾತು ಮೂರ್ಖನಿಗೆ ಮಾನ್ಯವಾಗಬಹುದು ಎನ್ನುವ ವಾದವನ್ನು ನೀವು ಒಪ್ಪಬಹುದು. ಅದನ್ನು ನಾನು ಮೊದಲಿನಿಂದಲೂ ಒಲ್ಲೆ. ಮೂರ್ಖನಿಗೆ ವಿವೇಕದ ವಾದಕ್ಕಿಂತಲೂ ಅವಿವೇಕದ ವಾದವೇ ಹೆಚ್ಚು ಮನಸ್ಸಿಗೆ ಬರುವದು. ಈಗಲಾದರೂ ಗೊತ್ತುವಳಿ ಹಿಂತೆಗೆದುಕೊಳ್ಳುತ್ತೀರಾ ?"

ಇನ್ನೇನು ಹೇಳಬಹುದಿತ್ತು ನಾನು ? ಗೊತ್ತುವಳಿಯನ್ನು ಹಿಂತೆಗೆದುಕೊಂಡೆ

ಗೋಪೀನಾಥ ಸಾಹಾರ ದೇಶಭಕ್ತಿ, ಸಾಹಸ ಮತ್ತು ತ್ಯಾಗಗಳನ್ನು ಪ್ರಶಂಸಿಸಿ ಅಭಿನಂದಿಸುವ ಗೊತ್ತುವಳಿಯನ್ನು ದೇಶಬಂಧು ದಾಸ ಮತ್ತು ಪಂಡಿತ ಮೋತೀಲಾಲರು ಮಂಡಿಸಿದರು. ಮಹಾತ್ಮಾ ಗಾಂಧಿಯವರು ಅದನ್ನು ವಿರೋಧಿಸಿದರು. ಆದರೆ ಕೆಲ ಹೊತ್ತು ಚರ್ಚೆ ನಡೆದು ಬಳಿಕ ಗೊತ್ತುವಳಿ ಸ್ವೀಕೃತವಾಯಿತು. ಆ ಮೇಲೆ ಇನ್ನೊಂದು ಗೊತ್ತುವಳಿಯ ವಾಕ್ಯಗಳ ಬಗ್ಗೆ ಮತಭೇದವಾಯಿತು ಕೋರ್ಟು-ಕಚೇರಿಗಳ ಮೇಲಿನ ಬಹಿಷ್ಕಾರವನ್ನು ಹಿಂತೆಗೆದುಕೊಳ್ಳುವ ವಿಷಯದಲ್ಲಿ ಮತಭೇದವೆದ್ದು ಮತದಾನವಾಗುವದಕ್ಕೆ ಮೊದಲು ದೇಶಬಂಧು ದಾಸ, ಪಂಡಿತ ಮೋತೀಲಾಲ ನೆಹರು ಮತ್ತು ಅವರ ಪಕ್ಷದವರು ಎದ್ದು ಹೊರಗೆ ಹೋದರು ಮತದಾನ ನಡೆದು ಗಾಂಧೀಜಿಯವರ ಪಕ್ಷಕ್ಕೆ ಗೆಲುವಾಯಿತು.

ಆದರೆ ದೇಶಬಂಧು ದಾಸ ಮೊದಲಾದವರು ಎದ್ದು ಹೋದದ್ದರ ಪರಿಣಾಮ ಗಾಂಧೀಜಿಯವರ ಮನಸ್ಸಿನ ಮೇಲೆ ತೀವ್ರವಾಗಿ ಆಯಿತು. "ನಿಜವಾಗಿ ಗೊತ್ತುವಳಿ ನಪಾಸಾಗಿದೆ. ಆದರೆ ದಾಖಲೆಯಲ್ಲಿ ಪಾಸಾಗಿದೆ ಎಂದು ಬರೆಯಬೇಕು" ಎಂದರವರು. ಆಗ ಡಾ. ಚೋಯಿಥರಾಮ ಗಿಡವಾನಿಯವರು ವಿಧಿಬಿಂದುವನ್ನೆತ್ತಿ, ''ಅಸ್ವೀಕೃತ ಗೊತ್ತುವಳಿಯನ್ನು ಸ್ವೀಕೃತವೆಂದು ಯಾವ ಕಾಯಿದೆ-ಕಾನೂನಿನ ಆಧಾರದಿಂದ ಬರೆಯುತ್ತೀರಿ ? ಸಭೆಯಿಂದ ಹೊರಗೆ ಹೋದಷ್ಟು ಜನರು ಗೊತ್ತುವಳಿಗೆ ಅನುಕೂಲ ಮತ ಕೊಟ್ಟರೆಂದು ಹಿಡಿದರೂ ಬಹುಮತವು ಅದಕ್ಕೆ ವಿರುದ್ಧವಾಗಿಯೇ ಇದೆ" ಎಂದರು.

ಡಾ. ಚೋಯಿಥರಾಮರ ಹೇಳಿಕೆಯಲ್ಲಿ ಅನುಚಿತವಾದದ್ದೇನೂ ಇರಲಿಲ್ಲ. ಆದರೆ ಅವರು ಕುಳಿತೊಡನೆ ಗಾಂಧೀಜಿಯವರ ಮುಖ ಒಣಗಿ ಕಣ್ಣುಗಳಿಂದ ಹನಿಗಳುದುರತೊಡಗಿದವು. ಅದನ್ನು ಕಂಡು ಡಾ ಚೋಯಿಥರಾಮರ ಮುಖ ಅಪರಾಧಿಯ ಮುಖದಂತಾಯಿತು. ಹೊತ್ತುಕೊಂಡ ಶಾಲಿನಂಚಿನಿಂದ ಕಣ್ಣೀರನ್ನೊರಿಸಿಕೊಳ್ಳುತ್ತ, ಬಿಕ್ಕುತ್ತ ಗಾಂಧೀಜಿ ಹೇಳತೊಡಗಿದರು: ''ನಾನು ಮಗನಂತೆ ಸಾಕಿದ ಈ ಚೋಯಿಥರಾಮ ಇಂದು ನನಗೆ ಪಾಯಿಂಟ ಆಫ್ ಆರ್ಡರ್ ಕಲಿಸುತ್ತಿದ್ದಾನೆ. ಇಂದು ನೀವೆಲ್ಲರೂ ನನಗೆ ಎದುರು ವಾದಿಸಿದ್ದೀರಿ. ನಾನಿಂದು ಒಬ್ಬಂಟಿಗನಾಗಿ ಹೋದೆ ..''

ಅವರು ಏನೇನೆಲ್ಲ ಹೇಳಿದರೋ ನೆನಪಿಲ್ಲ. ಆದರೆ ನಮ್ಮಿಂದ ಸಹಿಸಿಕೊಳ್ಳುವದಾಗಲಿಲ್ಲ ಇಷ್ಟರಲ್ಲಿ ಹೊರಗೆ ಹೋಗಿದ್ದವರೂ ಒಳಗೆ ಬಂದರು ನಾವೆಲ್ಲ ಯುವಕರು ಸಭಾಸ್ಥಾನದಲ್ಲಿ ಎದ್ದು ನಿಂತು ಗಂಟಲು ಒಡೆಯುವಂತೆ ''ಮಹಾತ್ಮಾಜೀ ಕೀ ಜಯ !'' ಎಂದು ಕೂಗತೊಡಗಿದೆವು.



# ಮೂಕ ಪ್ರಾಣಿಗಳ ಸಹವಾಸದಲ್ಲಿ

**ಬಾಬಾಸಾಹೇಬ ಖಾಪರ್ಡೆ**

**ಒಂದು ಬೆಕ್ಕು ಮತ್ತು ಒಂದು ನಾಯಿಯ ಮೈತ್ರಿ ಮತ್ತು ಮೈತ್ರಿಭಂಗದ ಮನೋವೇಧಕ ಸತ್ಯ ಕಥೆ**

ರುಖಿ ಎಂಬ ಬೆಕ್ಕೊಂದಿತ್ತು, ಕಾಂಚಿ ಎಂಬ ಹೆಸರಿನ ನಾಯಿಯೊಂದು ಇತ್ತು. ಬಾಲ್ಯದಿಂದಲೂ ಇವೆರಡೂ ಅತ್ಯಂತ ಸ್ನೇಹದಿಂದಿದ್ದವು. ಜೊತೆಯಾಗಿ ತಿನ್ನುವದು, ಆಡುವದು, ಮಲಗುವದು ನಡೆಯುತ್ತಿತ್ತು. ಬಳಿಕ ಒಂದು ದಿನ—

೧೯೩೪ ರಲ್ಲಿ ಮಾರ್ಚ ತಿಂಗಳ ಪ್ರಾರಂಭದಲ್ಲಿ ನಾನು ಎಂದಿನಂತೆ ನಾಗಪುರದಲ್ಲಿದ್ದೆ. ರೂಢಿಯಂತೆ ಅಂದೂ ಮುಂಜಾನೆ ಅಡ್ಡಾಡಲು ಹೋದೆ. ರಸ್ತೆಯಲ್ಲಿ ಹೋಗುತ್ತಿದ್ದಂತೆ ನನ್ನ ಹಿಂದಿನಿಂದ ಎರಡು ಮೂರು “ ಸ್ಮೂತ್ ಟೆರಿಯರ್ ” ಜಾತಿಯ ನಾಯಿಗಳು ಓಡುತ್ತ ಬಂದು ಮುಂದೆ ಹೋದವು. ನಾನು ತಿರುಗಿ ನೋಡಿದಾಗ ಒಬ್ಬ ಪಾರ್ಸಿ ಗೃಹಸ್ಥರು ಬರುತ್ತಿರುವದು ಕಾಣಿಸಿತು. ಓಡಿದ ನಾಯಿಗಳು ಅವರವೇ ಇರಬೇಕು ಎಂದುಕೊಂಡೆ. ನನ್ನ ನಡಿಗೆಯನ್ನು ತುಸು ನಿಧಾನಮಾಡಿದೆ. ನನ್ನ ಸಮೀಪಕ್ಕೆ ಬಂದೊಡನೆ ಆ ಮನುಷ್ಯ “ ಗುಡ್ ಮಾರ್ನಿಂಗ್ ಸರ್ ” ಎಂದು ನಮಸ್ಕರಿಸಿದ್ದನ್ನು ಕಂಡು ನನಗೆ ಆಶ್ಚರ್ಯವಾಯಿತು. ಆ ಮನುಷ್ಯ ನನಗೆ ತೀರ ಅಪರಿಚಿತನಾಗಿದ್ದ. ನನ್ನ ಮಟ್ಟಿಗೆ “ ಸರ್ ” ಎಂಬ ಶಬ್ದವೂ ಅಪರಿಚಿತವಾಗಿತ್ತು. ನಡೆಯುತ್ತಿದ್ದ ನಾನು ನಿಂತೆ.

ಆ ಗೃಹಸ್ಥ ಇಂಗ್ಲೀಷಿನಲ್ಲಿ “ ನೀವು ವಿರೋಧಿ ಪಕ್ಷದ ಧುರೀಣ ಶ್ರೀ ಖಾಪರ್ಡೆಯವರಲ್ಲವೇ ? ” ಎಂದು ಕೇಳಿದ.

ನಾನು ತುಸುನಕ್ಕು ಹೌದೆಂದು ತಲೆಯಲ್ಲಾಡಿ

ಮರಾಠಿ “ ಸಕಾಳ ” ದಿಂದ

ಸಿದ ಬಳಿಕ ನಮ್ಮಿರ್ವರಲ್ಲಿ ಇಂಗ್ಲೀಷಿನಲ್ಲಿ ಸಂಭಾಷಣೆ ನಡೆಯಿತು.

"ನಿಮಗೆ ನನ್ನ ಗುರುತಿರಲಿಕ್ಕಿಲ್ಲ. ಆದರೆ ನನಗೆ ನಿಮ್ಮ ಗುರುತಿದೆ. ಎಷ್ಟೋ ಸಲ ಕೌನ್ಸಿಲಿನಲ್ಲಿ ಗ್ಯಾಲರಿಯಲ್ಲಿ ಕುಳಿತು ನಾನು ನಿಮ್ಮ ಭಾಷಣಗಳನ್ನು ಕೇಳಿದ್ದೇನೆ. ನನ್ನ ಹೆಸರು ದಸ್ತೂರ" ಆ ಗೃಹಸ್ಥನೆಂದ.

"ನಿಮ್ಮ ಭೆಟ್ಟಿಯಾದದ್ದು ಬಹಳ ಸಂತೋಷ. ನಿಮ್ಮ ನಾಯಿಗಳು ಬಹು ಸುಂದರವಾಗಿವೆ."

"ನಿಮಗೊಂದು ಬೇಕೇನು ?"

"ಹೌದು. ನನ್ನ ಪತ್ನಿಗೆ ನಾಯಿಗಳೆಂದರೆ ತುಂಬ ಪ್ರೀತಿ." (ಹೆಂಡತಿಯ ಹೆಸರು ಹೇಳಿದರೆ ನಾಯಿ ಸಿಗುವ ಸಂಭವ ಹೆಚ್ಚೆಂದು ನಾನು ಭಾವಿಸಿದ್ದೆ.)

"ನೀವು ಮಂತ್ರಿಗಳಾದ ಕೂಡಲೆ ನಿಮಗೆ ಒಂದು ಒಳ್ಳೆಯ ನಾಯಿಯನ್ನು ಕೊಡುತ್ತೇನೆ."

ಅದನ್ನು ಕೇಳಿ ನಾನು ದಂಗಾದೆ. ಆ ಸಮಯದಲ್ಲಿ ನಾನು ಮಂತ್ರಿಯಾಗುವ ಸಂಭವವೂ ಇರಲಿಲ್ಲ. ಆ ಬಗೆಯ ಸುದ್ದಿಯೂ ಇರಲಿಲ್ಲ. ಈ ಮನುಷ್ಯ ವ್ಯಂಗ್ಯವಾಗಿ ಮಾತಾಡುತ್ತಿರಬೇಕು ಎಂದು ನನಗನಿಸಿತು. ಆದರೆ ಹೆಚ್ಚು ಮಾತಾಡುವ ಸಂದರ್ಭ ಅದಾಗಿರಲಿಲ್ಲ. ನಾನು ಅವರಿಗೆ "ಥ್ಯಾಂಕ ಯೂ" ಎಂದು ಹಸ್ತಾಂದೋಲನ ಮಾಡಿದೆ. ಬಳಿಕ ನಾವಿಬ್ಬರೂ ನಮ್ಮ ನಮ್ಮ ಹಾದಿ ಹಿಡಿದು ಹೋದೆವು.

ಕರ್ಮಧರ್ಮಸಂಯೋಗದಿಂದ ಮುಂದೆ ಎಂಟು ಹತ್ತು ದಿನಗಳಲ್ಲಿಯೇ ನಾನು ಮಂತ್ರಿಯಾದೆ. ಆಗಿನ ಪದ್ಧತಿಯಂತೆ ಎಪ್ರಿಲ ತಿಂಗಳ ಆರಂಭದಲ್ಲಿ ಪಚಮಡಿಗೆ ವಾಸಕ್ಕಾಗಿ ಹೋದೆ.

ಒಂದು ದಿನ ನಾನು ನನ್ನ ಕಚೇರಿಯಲ್ಲಿ ಕೆಲಸ ಮಾಡುತ್ತ ಕುಳಿತಾಗ, "ಯಾರೋ ಒಬ್ಬರು ತಮ್ಮ ಭೆಟ್ಟಿಗಾಗಿ ಬಂದಿದ್ದಾರೆ" ಎಂದು ಶಿಪಾಯಿ ಹೇಳಿದ. "ಒಳಗೆ ಕಳಿಸು ಅವರನ್ನು" ಎಂದೆ ನಾನು.

ತುಸು ಹೊತ್ತಿನ ಮೇಲೆ ಒಬ್ಬ ಚಪರಾಶಿ ಒಳಗೆ ಬಂದ. ಅವನ ಕೈಯಲ್ಲಿ ಒಂದು ನಾಯಿಮರಿ ಇತ್ತು. ಆ ಚಪರಾಶಿ ಅದನ್ನು ನನಗೆ ತೋರಿಸಿ "ದಸ್ತೂರ ಸಾಹೇಬರು ಈ ನಾಯಿಮರಿಯನ್ನು ನಿಮಗಾಗಿ ಕಳಿಸಿಕೊಟ್ಟಿದ್ದಾರೆ, ಮತ್ತು ನಮಸ್ಕಾರ ಹೇಳಿದ್ದಾರೆ" ಎಂದ. ನಾನು ನಾಯಿಮರಿಯನ್ನು ನನ್ನ ಕೈಲೆತ್ತಿಕೊಂಡು "ದಸ್ತೂರ ಸಾಹೇಬರಿಗೆ ನನ್ನ ನಮಸ್ಕಾರ ಹೇಳು" ಎಂದು ಆ ಚಪರಾಶಿಗೆ ಇನಾಮು ಕೊಟ್ಟು ಕಳಿಸಿದೆ.

ನಾಯಿಮರಿಯನ್ನು ಎಷ್ಟೋ ಹೊತ್ತಿನವರೆಗೆ ನೋಡುತ್ತ ಕುಳಿತಿದ್ದೆ. ಅದು ಬಲು ಸುಂದರವಾಗಿತ್ತು. ಅದರ ಮೈಮೇಲೆ ತುಂಬ ಕೂದಲುಗಳಿದ್ದವು. ತಾಯಿಯಿಂದ ಬೇರ್ಪಡಿಸಿದ್ದರಿಂದ ಅದು ಆಗಾಗ ಅಳುತ್ತಿತ್ತು. ಮರಿ ನನಗೆ ದೊರೆತದ್ದಕ್ಕಾಗಿ ಆನಂದವಾದಂತೆ ತಾಯಿಯಿಂದ ಅಗಲಿಸಲ್ಪಟ್ಟಿದ್ದ ಅದರ ಬಗ್ಗೆ ಕನಿಕರವೂ ಉಂಟಾಯಿತು. ಕೆಲಸವನ್ನು ಬಿಟ್ಟುಕೊಟ್ಟು ಬಂಗಲೆಗೆ ಹೋಗಿ ನನ್ನ ಪತ್ನಿಗೆ ನಾಯಿ ಮರಿಯನ್ನೂ ಅದು ದೊರೆತ ಕಥೆಯನ್ನೂ ಹೇಳಿದೆ. ಅವಳಿಗೆ ಆನಂದವಾಯಿತು. ನಾಯಿ ಮರಿಗೆ ನಾವು ಕಾಂಚಿ ಎಂದು ಹೆಸರಿಟ್ಟೆವು. ಮರಿ ಕೇವಲ ೧೫-೨೦ ದಿನಗಳದಿತ್ತು. ನನ್ನ ಪತ್ನಿ ಅದನ್ನು ಸಾಕುವ ಹೊಣೆ ಹೊತ್ತಳು.

ನಮಗೊಂದು ಹೊಸ ಉದ್ಯೋಗ ಕೊರಳಿಗೆ ಬಿದ್ದಿತು. ಫೀಡಿಂಗ ಬಾಟಲಿನಿಂದ ಹಾಲು ಕುಡಿಸಿ ಕಾಂಚಿಯನ್ನು ಸಾಕತೊಡಗಿದೆವು. ಅದು ಮನೆಯಲ್ಲಿ ಓಡಾಡಲು ಆರಂಭಿಸಿದಾಗ ನಮಗೆ ಮೋಜೆನಿಸಿತು. ಮೊಟ್ಟಮೊದಲನೆಯ ಸಲ ಅದು ಕೋಣೆಯ ಬಾಗಿಲು ಮೆಟ್ಟಲನ್ನು ದಾಟಿದಾಗ ಅದು ಚಡಪಡಿಸಿದ ರೀತಿಯನ್ನು ಪುನಃ ಪುನಃ ನೋಡಬೇಕೆಂದೆನಿಸಿ ತಿನಿಸಿನ ಆಶೆ ತೋರಿಸಿ ಅದು ಅನೇಕ ಸಲ ಬಾಗಿಲು ದಾಟುವಂತೆ ಮಾಡಿದೆವು.

ಕಾಂಚಿ ಮನೆಯಲ್ಲಿಯ ವಿನೋದದ ವಸ್ತುವಾಯಿತು. ಒಂದು ದಿನ ಅದು ಕಪಾಟಿನ ಬುಡದಲ್ಲಿ ಹೋಗಿ ಮಲಗಿಕೊಂಡಿತ್ತು. ಎಷ್ಟು ಹುಡುಕಿದರೂ ನಮಗೆ ಕಾಣಿಸಲಿಲ್ಲ. ಮನೆಯ ಆಳುಗಳೆಲ್ಲ ಇಡೀ ಮನೆಯಲ್ಲಿ ಹುಡುಕಾಡ-

ತೊಡಗಿದರು. ನಾಯಿಮರಿ ಮುದ್ದಾಗಿದ್ದುದರಿಂದ ಯಾರೋ ಎತ್ತಿಕೊಂಡು ಹೋಗಿರಬೇಕು ಎಂದು ಕೊನೆಗೆ ನಾವೆಲ್ಲ ನಿರ್ಣಯಿಸಿದೆವು ಅಷ್ಟರಲ್ಲಿ ಕಾಂಚಿ ನನ್ನ ಕಾಲಬುಡದಲ್ಲಿ ಬಂದು ನಿಂತದ್ದು ಕಾಣಿಸಿತು. ನೌಕರರು ಪಾರಾದೆವು ಎಂದು ನಿಟ್ಟಿಸುರು ಬಿಟ್ಟರು. ನಮ್ಮಿಬ್ಬರಿಗೆ ಬಹಳ ಆನಂದವಾಯಿತು. ಮೋಟಾರಿನಲ್ಲಿ ಹೊರಗೆ ಹೋಗುವಾಗ ಮೋಟಾರಿನಲ್ಲಿ, ಕಾಲಿನಿಂದ ನಡೆದು ಹೋಗುವಾಗ ಕೈಯಲ್ಲಿ, ಹೀಗೆ ಸದಾ ಕಾಂಚಿ ನಮ್ಮ ಜೊತೆಯಲ್ಲಿರುತ್ತಿತ್ತು. ನಮ್ಮ ಈ ರೀತಿಯನ್ನು ಕಂಡು ಜನ ಮನದಲ್ಲಿ ಏನೆಂದುಕೊಳ್ಳುತ್ತಿದ್ದರೋ ಏನೋ. ಆದರೆ ಮಂತ್ರಿದಂಪತಿಗಳ ಎದುರು ನಗುವ ಧೈರ್ಯ ಮಾತ್ರ ಯಾರಿಗೂ ಆಗುತ್ತಿರಲಿಲ್ಲ.

ಏನೋ ಕೆಲಸದ ನಿಮಿತ್ತ ಒಮ್ಮೆ ಜಬ್ಬಲಪುರಕ್ಕೆ ಹೋದೆ. ಶಿಕ್ಷಣ ಶಾಖೆ ನನ್ನದಾಗಿದ್ದುದರಿಂದ ಅಲ್ಲಿಯ ಯುರೋಪಿಯನ್ ಹುಡುಗರ ಶಾಲೆಗೆ ಭೆಟ್ಟಿ ಕೊಡುವ ಪ್ರಸಂಗ ಬಂದಿತು. ಅಲ್ಲಿಯ ಮುಖ್ಯಾಧ್ಯಾಪಕರು ಹುಡುಗರ ಊಟದ ಮನೆಗೆ ಅದನ್ನು ತೋರಿಸಲೆಂದು ಕರೆದುಕೊಂಡು ಹೋದರು. ಅಲ್ಲಿ ಮೇಜಿನ ಮೇಲೆ ಬಿಳಿ ಕೂದಲಿನ ಸುಂದರವಾದ ಪರ್ಶಿಯನ್ ಬೆಕ್ಕೊಂದು ಮಲಗಿತ್ತು. ನಾನದನ್ನು ದಿಟ್ಟಿಸಿ ನೋಡುತ್ತಿರುವದು ಮುಖ್ಯಾಧ್ಯಾಪಕರ ಲಕ್ಷ್ಯಕ್ಕೆ ಬಂದು ಅವರು, "ಒಬ್ಬ ಮಿಶನರಿ ಈ ಬೆಕ್ಕನ್ನು ನಮಗೆ ಕೊಟ್ಟರು. ಬಹಳ ಸುಂದರವಾಗಿದೆ" ಎಂದರು. ನಾನೂ "ಸುಂದರವಾಗಿದೆ" ಎಂದೆ. ಆ ವಿಷಯ ಅಲ್ಲಿಗೇ ನಿಂತಿತು. ನಾನು ನನ್ನ ನಿವಾಸಸ್ಥಾನಕ್ಕೆ ತಿರುಗಿದೆ.

ಮರುದಿನ ಒಬ್ಬಾತ ಒಂದು ಪಂಜರದಲ್ಲಿ ಬೆಕ್ಕಿನ ಮರಿಯೊಂದನ್ನು ಹಾಕಿಕೊಂಡು ಬಂದು ನನಗೆ ನಮಸ್ಕರಿಸಿ, "ನಿನ್ನೆ ತಾವು ನೋಡಿದ ಬೆಕ್ಕಿನ ಮರಿ ಇದು ಇದನ್ನು ಮುಖ್ಯಾಧ್ಯಾಪಕ ಸಾಹೇಬರು ತಮಗೆ ಕಾಣಿಕೆಯೆಂದು ಕಳಿಸಿದ್ದಾರೆ'' ಎಂದು ಪಂಜರ ಸಹಿತವಾಗಿ ಬೆಕ್ಕಿನ ಮರಿಯನ್ನು ಮೇಜಿನ ಮೇಲಿಟ್ಟು ಹೊರಟುಹೋದ. ಶೂದ್ರಕ ರಾಜನಿಗೆ ಚಾಂಡಾಲ ಕನ್ಯೆಯು ಇದೇ ರೀತಿಯಾಗಿ ವೈಶಂಪಾಯನ ಎಂಬ ಗಿಳಿಯನ್ನು ಕೊಟ್ಟಿರಬೇಕು ಎಂಬ ವಿಚಾರ ಸುಳಿದು ನನ್ನಷ್ಟಕ್ಕೆ ನಾನೇ ನಕ್ಕೆ. ಎಲ್ಲಿ ಲಕ್ಷ್ಮಿಯ ಅವತಾರವಾದ ಚಂಡಾಲ ಕನ್ಯೆ, ಎಲ್ಲಿಯ ಚಂದ್ರಾಪೀಡನ ಅವತಾರವಾದ ಶೂದ್ರಕ ರಾಜ ಮತ್ತು ಎಲ್ಲಿಯ ನಾನು ಮತ್ತು ಈ ಶಿಪಾಯಿ ಮತ್ತು ಬೆಕ್ಕಿನ ಮರಿ, ಎಲ್ಲಿಯ ವಿದಿಶಾನಗರಿ ಮತ್ತು ಅದರ ಅರಮನೆ ಹಾಗೂ ಎಲ್ಲಿಯ ಜಬ್ಬಲಪುರದ ಈ ಸಾಮಾನ್ಯ ಸರಕಾರೀ ಬಂಗಲೆ! ಏನೋ ಎಂತೋ! ನನ್ನ ಕಲ್ಪನೆ ಮತ್ತು ಮೂರ್ಖತನಕ್ಕೆ ನಾನೇ ನಕ್ಕು ಮೋಟಾರಿನಲ್ಲಿ ಕುಳಿತೆ.

ಹೀಗೆ ನಾಗಪುರಕ್ಕೆ ಬಂದ ರುಖಿ ಕಾಂಚಿಯ ಗೆಳತಿಯಾಯಿತು.

ನನ್ನ ಪತ್ನಿಗೆ ಈ ಬೆಕ್ಕಿನ ಮರಿ ಬಹಳ ಮೆಚ್ಚಿಕೆಯಾಯಿತು. ಕುಣಬಿ ಜನರು ರುಕ್ಮಿಣಿ ಎಂಬ ಶಬ್ದವನ್ನು ರುಖಿ ಎಂದು ಅಪಭ್ರಂಶ ಮಾಡಿ ಆ ಹೆಸರನ್ನು ತಮ್ಮ ಹೆಣ್ಣು ಮಕ್ಕಳಿಗೆ ಇಡುತ್ತಾರೆ. ರುಖಿ ಮತ್ತು ಕಾಂಚಿಯನ್ನು ಒಂದೇ ಸ್ಥಳದಲ್ಲಿ ಒಟ್ಟಿಗೆ ಬೆಳೆಸುವ ಯೋಚನೆ ಮಾಡಿದೆವು. ಚಿಕ್ಕಂದಿನಿಂದಲೂ ಒತ್ತಟ್ಟಿಗೆ ಬೆಳೆದರೆ ಜನ್ಮಾಂತರದ ದ್ವೇಷ ಅಳಿಯುತ್ತದೆಂದು ಕೇಳಿದ್ದೆವು. ಪ್ರಯೋಗ ಮಾಡಿ ನೋಡೋಣವೆಂದು-ಕೊಂಡೆವು.

ರುಖಿ ಮತ್ತು ಕಾಂಚಿ ಒಂದೇ ಪಾತ್ರೆಯಲ್ಲಿ ಹಾಕಿದ್ದನ್ನು ತಿನ್ನುತ್ತಿದ್ದವು, ಒಂದೇ ಪಾತ್ರೆಯಲ್ಲಿ ಹಾಲನ್ನು ಕುಡಿಯುತ್ತಿದ್ದವು, ಒಂದೇ ಸಣ್ಣ ಮಂಚದ ಮೇಲೆ ಮಲಗುತ್ತಿದ್ದವು, ಪರಸ್ಪರ ಕೂಡಿ ಆಡುತ್ತಿದ್ದವು.

ಹೀಗೆ ಒಂದು ವರ್ಷ ಕಳೆಯಿತು.

ಒಂದು ದಿನ ಇದ್ದಕ್ಕಿದ್ದಂತೆ ಕಾಂಚಿ ಕಾಣದಂತಾಯಿತು. ನಮಗೆಲ್ಲ ಚಿಂತೆ ಹತ್ತಿತು. ಆದರೆ ಕಾಂಚಿ ಎರಡು ದಿನಗಳ ನಂತರ ತಿರುಗಿ ಮನೆಗೆ ಬಂದಿತು. ನಮ್ಮೆಲ್ಲರನ್ನು ಕಂಡು ಅದಕ್ಕೆ, ಅದನ್ನು ಕಂಡು ನಮಗೆ ತುಂಬ ಆನಂದವಾಯಿತು. ಯಾರೋ ಸುಂದರ ಕಾಂಚಿಯನ್ನು

ಕಂಡು ಎರಡು ದಿನ ಕಟ್ಟಿಹಾಕಿರಬೇಕು, ಮೂರನೆಯ ದಿನ ಬಿಚ್ಚಿದೊಡನೆ ಅದು ಓಡಿ ಬಂದಿರಬೇಕು ಎಂದು ನಾವು ತಿಳಿದುಕೊಂಡೆವು. ಆದರೆ ವಸ್ತುಸ್ಥಿತಿ ಬೇರೆಯಾಗಿತ್ತು. ಸಾವಕಾಶವಾಗಿ ಕಾಂಚಿಯ ಹೊಟ್ಟೆ ದೊಡ್ಡದಾಗತೊಡಗಿತು. ಶಕುಂತಲೆಯಂತೆ, ನಮ್ಮನ್ನು ಕೇಳದೆ ಕಾಂಚಿ-"ಗಾಂಧರ್ವವಿವಾಹ" ಮಾಡಿಕೊಂಡಿದ್ದು ಬಯಲಿಗೆ ಬಂದಿತು. ಆದರೆ ಮಿಂಚಿದ ಮಾತಿಗೆ ಚಿಂತಿಸಿ ಫಲವಿರಲಿಲ್ಲ. ಮಹಾಯುದ್ಧದ ಕಾಲದಲ್ಲಿ ಕುಮಾರಿಯರು ಹಡೆದ ಸಾವಿರಾರು ಮಕ್ಕಳನ್ನು ಇಂಗ್ಲಂಡು ಕಾಯದೆಯ ನೀರಿನ ಪ್ರೋಕ್ಷಣೆಯಿಂದ ಶುದ್ಧೀಕರಿಸಿಕೊಂಡಂತೆ ನಾವು ಕ್ಷಮೆಯ ಉದಾರ ದೃಷ್ಟಿಯಿಂದ ಕಾಂಚಿಯನ್ನು ಕಂಡು ಅದರ ಮರಿಗಳನ್ನು ಸಾಕತಕ್ಕದ್ದೆಂದು ನಿರ್ಣಯಿಸಿದೆವು.

ರುಖಿ ಮತ್ತು ಕಾಂಚಿ ಒಂದೇ ದಿನ ಮರಿ ಹಾಕಿದ್ದೂ ಕರ್ಮಧರ್ಮಸಂಯೋಗವೇ ಸರಿ. ಎರಡೂ ಸೇರಿಕೊಂಡು ಹೀಗೆ ಮಾಡಬೇಕು ಎಂದು ಮಾತಾಡಿಕೊಂಡಿದ್ದವೋ ಏನೋ! ಕಾಂಚಿಗೆ ಒಂದೇ ಒಂದು ಮತ್ತು ರುಖಿಗೆ ಮೂರು ಮರಿಗಳು ಹುಟ್ಟಿದವು. ದುರ್ದೈವದಿಂದ ಕಾಂಚಿಯ ಮರಿ ಎರಡೇ ದಿನಗಳಲ್ಲಿ ಸತ್ತು ಹೋಯಿತು. ನಮ್ಮ ಬಂಗಲೆಯ ಆವಾರದಲ್ಲಿ ಒಂದು ಗಿಡವ ಬುಡದಲ್ಲಿ ಆ ಮರಿಯನ್ನು ಹುಗಿದು ಅದರ ಋಣದಿಂದ ನಾವು ಮುಕ್ತರಾದೆವು.

ಆದರೆ ಕಾಂಚಿಯನ್ನು ಸಮಾಧಾನಪಡಿಸುವದು ನಮಗೆ ಸಾಧ್ಯವಾಗಲಿಲ್ಲ. ಅದು ಮರಿಯನ್ನು ಹುಡುಕುತ್ತ ಇಡೀ ಮನೆಯಲ್ಲೆಲ್ಲ ಹುಚ್ಚಿಯಂತೆ ತಿರುಗುತ್ತಿತ್ತು. ಮರಿ ಸತ್ತ ಜಾಗೆಯನ್ನು ಮೇಲಿಂದ ಮೇಲೆ ಮೂಸಿ ನೋಡಿ ಕರುಣಾಜನಕ ರೀತಿಯಲ್ಲಿ ಅಳುತ್ತಿತ್ತು. ಹೊರಗೆ ಹೋಗಲೆಂದು ಮೋಟಾರು ಬಾಗಿಲ ಬಳಿ ಬಂದು ನಿಂತೊಡನೆ ಯಾವಾಗಲೂ ಮುಂದಾಗಿ ಹಾರಿ ಅದರಲ್ಲಿ ಕುಳಿತುಕೊಳ್ಳುವ ಕಾಂಚಿ ಈಗ ಮನೆಯನ್ನೇ ಬಿಡದಂತಾಯಿತು. ಹೀಗೆ ೨-೩ ದಿನಗಳು ಕಳೆದವು. ಕಡೆಗೊಂದು ಚಮತ್ಕಾರ ಸಂಭವಿಸಿತು.

ನಾನು ಮೇಜಿನ ಬಳಿ ಮುಂಜಾನೆಯ ಪೇಯವನ್ನು ಕುಡಿಯುತ್ತ ಕುಳಿತಿದ್ದೆ. ನಿತ್ಯವೂ ಬಿಸ್ಕೀಟಿನ ತುಣುಕುಗಳಿಗಾಗಿ ಮೇಜಿನ ಮೇಲೆ ಬಂದು ಕುಳಿತಿರುತ್ತಿದ್ದ ರುಖಿ ಇಂದು ಮರಿಯನ್ನು ಹಾಕಿದ್ದ ಕೋಣೆಯ ಬಾಗಿಲ ಬಳಿ ನಿಂತು ಗಟ್ಟಿಯಾಗಿ ಒದರುತ್ತಲಿತ್ತು. ಆಗೊಮ್ಮೆ ಈಗೊಮ್ಮೆ ಬಾಗಿಲ ಬಳಿ ಅತ್ತಿತ್ತ ತಿರುಗುತ್ತಿತ್ತು. ನನ್ನ ಪಕ್ಕದಲ್ಲೆ ಕುಳಿತಿದ್ದ ನನ್ನ ಪತ್ನಿಯ ಬಳಿಗೆ ಬಂದು ಅವಳ ಕಾಲಿಗೆ ಮೈತಿಕ್ಕಿ ಗಟ್ಟಿಯಾಗಿ ಕೂಗುತ್ತಿತ್ತು. ರುಖಿ ಸಾಮಾನ್ಯವಾಗಿ "ಮ್ಯಾವ್ ಮ್ಯಾಂವ್" ಎನ್ನುತ್ತಿದ್ದುದು ಕಡಿಮೆ. ಊಟದ ಹೊತ್ತಿನಲ್ಲಿ ತಾಟಿನ ಬಳಿ ಬಂದು ಕುಳಿತರೂ ಒದರುತ್ತಿದ್ದಿಲ್ಲ. ತಾಟಿನಲ್ಲಿ ಬಾಯಿ ಹಾಕುತ್ತಿರಲಿಲ್ಲ. ಆದ್ದರಿಂದ ಇಂದದು ಒಂದೇಸವನೆ ಕೂಗುತ್ತಿರುವದನ್ನು ಕಂಡು ನಮಗೆ ಆಶ್ಚರ್ಯವಾಯಿತು.

ಕೋಣೆಗೆ ಹೋಗಿ ಬೆಕ್ಕಿನ ಮರಿಗಳಿಗೇನಾದರೂ ಆಗಿದೆಯೆ ಎಂದು ನೋಡಿ ಬರಲು ಯಾರಿಗಾದರೂ ಹೇಳು ಎಂದು ನನ್ನ ಹೆಂಡತಿಗೆ ಹೇಳಿ ನಾನು ಉದಯನೆಂಬ ನನ್ನ ನೌಕರನನ್ನು ಕೂಗಿದೆ. ಆದರೆ ನನ್ನ ಹೆಂಡತಿ ಗಾಬರಿಯಾಗಿ ತಾನೇ ಸ್ವತಃ ಬಾಗಿಲ ಬಳಿಗೆ ಹೋಗಿ ಒಳಗೆ ನೋಡಿದವಳೇ, "ಬನ್ನಿ ಬೇಗ ಬನ್ನಿ" ಎಂದಳು. ನಾನು ಹೋಗಿ ಒಳಗಿನ ಆ ಅಪೂರ್ವ ಆಶ್ಚರ್ಯವನ್ನು ನೋಡಿದೆ. ಕಾಂಚಿ ರುಖಿಯ ಮರಿಗಳ ಸಹಿತ ರುಖಿಯ ಸ್ಥಳದಲ್ಲಿ ದಿಮಾಕಿನಿಂದ ಕುಳಿತುಕೊಂಡಿತ್ತು. ರುಖಿಯ ಮರಿಗಳು ಕಾಂಚಿಯ ಮೊಲೆಗಳನ್ನು ಚೀಪುತ್ತಿದ್ದವು. ಅವು ಇನ್ನೂ ಕಣ್ಣು ಕೂಡ ತೆಗೆದಿರಲಿಲ್ಲ. ಅವಕ್ಕೆ ತಾಯಿಯೇನು, ಅತ್ತೆಯೇನು? ಹಾಲು ಸಿಕ್ಕಿದ್ದೇ ಗೊತ್ತು.

ನನಗೆ ಆಶ್ಚರ್ಯವಾದಂತೆ ರುಖಿಯ ಕೂಗಾಟದ ಅರ್ಥವೂ ಆಯಿತು. ನಾನು ಕಾಂಚಿಯನ್ನು ಕರೆದೆ. ಆದರೆ ಅದು ಕುಳಿತಲ್ಲಿಂದಲೇ

ಬಾಲ ಅಲುಗಾಡಿಸಿತೇ ವಿನಾ ಎದ್ದು ಬರಲಿಲ್ಲ. ಒಂದರ ಬದಲು ಅದಕ್ಕೆ ಮೂರು ಮರಿಗಳು ದೊರೆತಿದ್ದವು. ಕೊನೆಗೆ ನಾನು ಕುತ್ತಿಗೆ ಹಿಡಿದು ಕಾಂಚಿಯನ್ನು ಹೊರಗೆಳೆದು ತಂದೆ. ನನ್ನ ಹೆಂಡತಿ ರುಖಿಯನ್ನು ಮರಿಗಳ ಬಳಿ ಬಿಟ್ಟಳು. ಉದಯ ಕಾಂಚಿಯನ್ನು ಕೆರೆದೊಯ್ದು ಮೋಟರ ಶೆಡ್ಡಿನಲ್ಲಿ ಕಟ್ಟಿಹಾಕಿದ. ಮನೆಯಲ್ಲಿ ಮತ್ತೆ ಶಾಂತಿಯುಂಟಾಯಿತು.

ನಿತ್ಯದಂತೆ ನಾನು ಅಂದು ಸಂಜೆ ತಿರುಗಾಡಲು ಹೋದೆ. ನಿತ್ಯವೂ ಜೊತೆಯಲ್ಲಿರುವ ಕಾಂಚಿ ಇಂದು ಇರಲಿಲ್ಲ. ಅದನ್ನು ಕಟ್ಟಿ ಹಾಕಿಡುವದೇ ಒಳಿತೆಂದು ನಾನೊಬ್ಬನೇ ಹೋದೆ; ನನ್ನ ಪತ್ನಿ ಮೋಟಾರು ತೆಗೆದುಕೊಂಡು ಎಲ್ಲಿಯೊ ಹೊರಗೆ ಹೋದಳು.

ಮನೆಗೆ ನಾನೇ ಮೊದಲು ತಿರುಗಿ ಬಂದೆ. ಮನೆಯಲ್ಲಿ ಮತ್ತೆ ಬೆಳಗಿನ ನಾಟಕವೇ ನಡೆದಿತ್ತು. ನನ್ನೊಡನೆ ಅಡ್ಡಾಡಲು ಹೋಗಲೆಂದು ಉದಯ ಕಾಂಚಿಯನ್ನು ಬಿಟ್ಟಿದ್ದ. ಕಾಂಚಿ ನನ್ನ ಜೊತೆಗಾಗಲಿ, ಅಥವಾ ನನ್ನ ಹೆಂಡತಿಯ ಜೊತೆಗಾಗಲಿ ಬಾರದೆ ರುಖಿಯನ್ನು ಕೋಣೆಯಿಂದ ಹೊರಗೆ ಹಾಕಿ ಅದರ ಮರಿಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿತ್ತು. ಆದರೆ ಈ ಸಲ ರುಖಿ ಯುದ್ಧಸಿದ್ಧತೆಯಲ್ಲಿತ್ತು. ಬಾಗಿಲ ಬಳಿ ಅದು ಬೆನ್ನುಬ್ಬಿಸಿಕೊಂಡು ಬಾಲವನ್ನೆತ್ತಿ ಗುರುಗುಡತೊಡಗಿತ್ತು. ಯುದ್ಧ ಪ್ರಸಂಗ ಸಮೀಪದಲ್ಲಿದೆಯೆಂದು ಕಾಣಿಸುತ್ತಿತ್ತು. ಆದರೆ ರುಖಿಗೆ ಸ್ವಸಾಮರ್ಥ್ಯದ ಕಲ್ಪನೆಯಿದ್ದುದರಿಂದ ನೇರವಾದ ಹಲ್ಲೆ ಮಾಡುವ ಧೈರ್ಯ ಅದಕ್ಕಿರಲಿಲ್ಲವೆಂದು ಸ್ಪಷ್ಟವಾಗಿ ಗೊತ್ತಾಗುತ್ತಿತ್ತು. ಕಾಂಚಿಯನ್ನು ಪುನಃ ಹೊರಗೆಳೆದು ತಂದು ಮೋಟಾರ ಶೆಡ್ಡಿನಲ್ಲಿ ಕಟ್ಟಿಹಾಕಲಾಯಿತು. ರುಖಿಗೆ ಮತ್ತೆ ಮರಿಗಳು ದೊರೆತವು. ಆದರೆ ಹೀಗೆಯೇ ಇನ್ನೆಷ್ಟು ದಿನ ನಡೆಯತಕ್ಕದ್ದು ಎಂದು ನಾನು ಯೋಚಿಸಿದೆ.

ನನ್ನ ಹೆಂಡತಿ ಮೋಟಾರಿನಿಂದಿಳಿದೊಡನೆ ಅವಳಿಗೆ ಎಲ್ಲ ಸಂಗತಿ ತಿಳಿಸಿದೆ. ನಾವಿಬ್ಬರೂ ಮಾತನಾಡುತ್ತ ಕುಳಿತಿದ್ದಾಗ ಅಕಸ್ಮಾತ್ತಾಗಿ ಬಖಲೆ ಮತ್ತು ಅವರ ಪತ್ನಿ ನಮ್ಮಲ್ಲಿಗೆ ಬಂದರು. ಅವರಿಗೆ ಸಹಜವಾಗಿ ನಾನು ನಮ್ಮಲ್ಲಿ ನಡೆದಿದ್ದ ಕಾಂಚಿ ರುಖಿ ಚಮತ್ಕಾರವನ್ನು ಹೇಳಿದೆ. ಸಾ. ಬಖಲೆ ಹೇಳಿದರು: "ನಿಮ್ಮಲ್ಲಿಯ ಈ ಜಗಳವನ್ನು ನಿಲ್ಲಿಸಲು ನಿಮಗೊಂದು ಉಪಾಯವನ್ನು ಸೂಚಿಸುತ್ತೇನೆ. ನಮ್ಮ ಫ್ಯಾಟಿ ಮೊನ್ನೆಮೊನ್ನೆ ಮರಿ ಹಾಕಿದೆ. ಅವುಗಳಲ್ಲಿ ಒಂದನ್ನು ನಿಮ್ಮ ಕಾಂಚಿಗೆ ತಂದು ಕೊಡಿ. ಅದಕ್ಕೆ ಸಮಾಧಾನವಾಗಿ ಬೆಕ್ಕಿನ ತೊಂದರೆ ತಪ್ಪೀತು."

ಕಾಂಚಿಯೆದುರು ಫ್ಯಾಟಿಯ ಮರಿಯನ್ನು ತಂದಿಟ್ಟಾಗ ಅದು ಬಹಳ ಹೊತ್ತು ಮೂಸಿ ನೋಡಿತು. ಬಳಿಕ ಅದಕ್ಕೆ ಮೊಲೆಯುಣಿಸತೊಡಗಿತು. ಕಾಂಚಿಗೆ ವಿಶೇಷ ಆನಂದವಾದಂತನಿಸದಿದ್ದರೂ ಅದಕ್ಕೆ ಸಮಾಧಾನವಾಯಿತು. ಮುಂದೆ ಅದು ರುಖಿಯ ಮರಿಗಳನ್ನು ಅಪಹರಿಸುವ ಪ್ರಯತ್ನ ಮಾಡಲಿಲ್ಲ.

ರುಖಿ-ಕಾಂಚಿಯ ನಡುವಿನ ಜಗಳ ನಿಂತಿತು. ಆದರೆ ಮೊದಲಿನಂತೆ ಅವುಗಳ ಸ್ನೇಹ ಮಾತ್ರ ಉಳಿಯಲಿಲ್ಲ. ಮುಂದೆ ಅವೆಂದೂ ಒಟ್ಟಾಗಿ ಆಡಲಿಲ್ಲ, ತಿನ್ನಲಿಲ್ಲ. ಅವು ಒಂದನ್ನೊಂದು ತಪ್ಪಿಸಿ ಅಡ್ಡಾಡತೊಡಗಿದವು. ಅವು ಒಂದರ ಮೇಲೊಂದು ಏರಿ ಹೋಗುತ್ತಿರಲಿಲ್ಲವೆನ್ನುವದೇ ನಮಗೆ ಸಮಾಧಾನದ ಸಂಗತಿಯಾಗಿತ್ತು. ಅವುಗಳ ಹಾಸಿಗೆ-ಊಟದ ವ್ಯವಸ್ಥೆಯನ್ನು ಪ್ರತ್ಯೇಕವಾಗಿ ಮಾಡಬೇಕಾಗಿ ಬಂತು. ಅವೆರಡೂ ಪರಸ್ಪರ ಜಗಳಾಡುತ್ತಿರಲಿಲ್ಲವಾದರೂ ಅವುಗಳಲ್ಲಿ ಮತ್ಸರ ಭಾವ ಮೂಡಿಹೋಗಿತ್ತು ಎಂದು ಸುಲಭವಾಗಿ ಕಂಡುಬರುತ್ತಿತ್ತು.

ವರ್ಧಾದಲ್ಲಿ ಕಾಂಗ್ರೆಸ್ಸು ಅಧಿಕಾರ ಗ್ರಹಣ ಮಾಡಬೇಕೆಂಬ ಗೊತ್ತುವಳಿಯನ್ನು ಸ್ವೀಕರಿಸಿದ ನಂತರ ನಾವು ೧೯೩೭ರ ಜುಲೈ ತಿಂಗಳಲ್ಲಿ ನಮ್ಮ ಮಂತ್ರಿಪದಗಳಿಗೆ ರಾಜೀನಾಮೆಯಿತ್ತೆವು. ನನ್ನ ಬಂಗಲೆಯಲ್ಲಿ ಪಂಡಿತ ರವಿಶಂಕರ ಶುಕ್ಲರು ವಾಸ ಮಾಡಲು ಬಂದರು. ಅವರು ಶಿಕ್ಷಣ ಮಂತ್ರಿಗಳಾಗಿದ್ದರು. ನಾವು ನೆರೆಯ ಅಭ್ಯಂಕರ

ಬಂಗಲೆಯಲ್ಲಿ ಇರತೊಡಗಿದೆವು.

ಕಾಂಚಿ ನಮ್ಮ ಸಂಗಡ ಬಂದಿತು ಎಂದು ಹೇಳುವ ಅಗತ್ಯವಿಲ್ಲ. ರುಖಿಯನ್ನು ನಾವು ನಮ್ಮ ಜೊತೆಯಲ್ಲಿ ಒಯ್ದರೂ ಮರುದಿನ ಅದು ಕಾಣ ದಂತಾಯಿತು. ೮-೧೦ ದಿನಗಳನಂತರ ನಮ್ಮ ಅಗಸರವ ರುಖಿಯನ್ನು ತಂದುಕೊಟ್ಟ. ಅದು ನಾವು ಬಿಟ್ಟುಬಂದ ಬಂಗಲೆಗೇ ತಿರುಗಿ ಹೋ-ಗಿತ್ತು. ಅಗಸರವನ ಕಣ್ಣಿಗೆ ಬಿದ್ದಾಗ ಅದು ನಮ್ಮದೆನ್ನುವ ಗುರುತು ಹಿಡಿದು ಅವನದನ್ನು ತಂದು ನಮಗೆ ಒಪ್ಪಿಸಿದ್ದ. ಆದರೆ ರುಖಿ ನಮ್ಮಲ್ಲಿ ಉಳಿಯಲಿಲ್ಲ ಅದು ಮತ್ತೆ ಕಾಣದಂತಾಯಿತು. ಅದು ನಮ್ಮ ಹಿಂದಿನ ಬಂಗಲೆಯಲ್ಲಿಯೇ ಇರತೊ ಡಗಿದೆಯೆನ್ನುವದನ್ನು ನಮ್ಮ ಆಳು ಉದಯ ಪತ್ತೆ ಹಚ್ಚಿದ. ನಾವು ಅದರ ಹವ್ಯಾಸ ಬಿಟ್ಟೆವು. ಮುಂದೆ ರುಖಿಗೆ ಏನಾಯಿತು, ಅಥವಾ ಅದರ ಮರಿಗಳ ಗತಿ ಏನಾಯಿತೆನ್ನುವದು ನಮಗೆ ತಿಳಿ ಯಲಿಲ್ಲ. ರುಖಿ ನಮ್ಮನ್ನು ಬಿಟ್ಟು ಹೋದದ್ದಕ್ಕೆ ಕೆಡಕೆನಿಸಿತು, ನಿಜ. ಆದರೆ ಅದಕ್ಕೆ ಉಪಾಯ ವಿರಲಿಲ್ಲ. ನಾಯಿ ಮನುಷ್ಯನನ್ನು ಪ್ರೀತಿಸಿ ಅವ ನನ್ನು ಬಿಟ್ಟು ಹೋಗುವದಿಲ್ಲ, ಬೆಕ್ಕು ಸ್ಥಳದ ಮೇಲೆ ಪ್ರೇಮಮಾಡಿ ಅದನ್ನು ಬಿಟ್ಟು ಹೋಗು ವದಿಲ್ಲ; ಆದ್ದರಿಂದ ನಾಯಿ ನಿಷ್ಠಾವಂತ ಪ್ರಾಣಿ ಮತ್ತು ಬೆಕ್ಕು ಎಷ್ಟಾದರೂ ದ್ರೋಹಿ ಎಂದು ಜನರಲ್ಲಿ ಸಾಮಾನ್ಯವಾಗಿ ಇರುವ ಕಲ್ಪನೆಯ ಕಟು ಅನುಭವ ನಮಗೆ ಬಂತು.

೧೯೩೪ರಲ್ಲಿ ನನ್ನ ತೀರ್ಥರೂಪರು ಸ್ವರ್ಗಸ್ಥ ರಾದರು. ಮನೆಯನ್ನು ಖಾಲಿಯಿರಿಸುವದು ಯೋಗ್ಯವಲ್ಲೆಂದು ನಾವು ನಾಗಪುರವನ್ನು ಬಿಟ್ಟು ಉಮರಾವತಿಯ ನಮ್ಮ ಮನೆಗೆ ಬಂದೆವು. ಕಾಂಚಿ ಕೂಡ ನಮ್ಮೊಂದಿಗೆ ಬಂದಿತು.

ರಾತ್ರಿ ಊಟವಾದ ಬಳಿಕ ನಾನು ಕಬ್ಬು ತಿನ್ನುತ್ತಿದ್ದೆ. ಅದಕ್ಕೆಂದೇ ಕಬ್ಬಿನ ಹೋಳುಗ ಳನ್ನು ಮಾಡಿಟ್ಟಿರುತ್ತಿದ್ದರು. ಕಾಂಚಿ ನನ್ನನ್ನು ಬಿಟ್ಟು ಯಾವಾಗಲೂ ದೂರ ಇರುತ್ತಿರಲಿಲ್ಲ. ಕಾಂಚಿ ಕಬ್ಬು ತಿನ್ನುವದೋ ನೋಡೋಣ ವೆಂದು ಒಂದು ದಿನ ನನಗನಿಸಿತು. ಅದರ ಮುಂದೆ ಕಬ್ಬಿನ ಹೋಳನ್ನು ಒಗೆದೆ. ಅದನ್ನೇನು ಮಾಡಬೇಕೆಂಬದು ಮೊದಲಿಗೆ ಅದಕ್ಕೆ ತಿಳಿಯು ಲಿಲ್ಲ. ಆದರೆ ನಾನು 'ತಿನ್ನು' ಎಂದ ಬಳಿಕ ಅದು ಹೋಳನ್ನು ಕಚ್ಚಿ ರಸವನ್ನು ಹೀರಿ ಚರಟವನ್ನು ಉಗಿಯಿತು. ನಾನು ನಿತ್ಯವೂ ಕಾಂಚಿಗೆ ಕಬ್ಬು ತಿನ್ನಿಸತೊಡಗಿದೆ; ಅದಕ್ಕೆ ಅದರ ರುಚಿ ಹತ್ತಿ ಇಟ್ಟಲ್ಲಿಂದ ಕಬ್ಬನ್ನು ಹುಡುಕಿ ಕದ್ದು ತಿನ್ನತೊಡಗಿತು. ಅದು ಕಬ್ಬಿನ ಹೋಳು ಗಳನ್ನು ಎಂಜಲು ಮಾಡದಿರಲೆಂದು ಹೋಳು ಗಳ ಬಟ್ಟಲನ್ನು ನಾನು ಕಪಾಟಿನಲ್ಲಿಟ್ಟರೆ ಅದು ಕಾಲಿನ ಉಗುರುಗಳ ಸಹಾಯದಿಂದ ಕಪಾಟಿನ ಬಾಗಿಲು ತೆರೆದು ಹೋಳುಗಳನ್ನು ತಿನ್ನತೊಡ ಗಿತು.

ಉಮರಾವತಿಕರ ಎಂಬ ದನದ ಡಾಕ್ಟರರು ನಮ್ಮಲ್ಲಿಗೆ ಆಗಾಗ ಬರುತ್ತಿದ್ದರು. ನಮ್ಮ ಮನೆ ಯಲ್ಲಿದ್ದುಕೊಂಡೇ ಅವರು ಶಿಕ್ಷಣ ಪಡೆದಿದ್ದರು. ನಾಯಿಗೆ ಸಿಹಿ ಪದಾರ್ಥ ತಿನ್ನಿಸಿದರೆ ಅದಕೆ ಕಜ್ಜಿಯಾಗುವ ಸಂಭವ ವಿಶೇಷವಾಗಿದ್ದು ಅದ ರಿಂದ ಅದಕ್ಕೆ ಹುಚ್ಚು ಕೂಡ ಹಿಡಿಯುತ್ತದೆ ಎಂದು ಅವರು ಹೇಳಿದರು. ಅದನ್ನು ಕೇಳಿ ಕಾಂಚಿಯು ಕಬ್ಬು ತಿನ್ನುವ ಚಟ ಬಿಡಿಸುವದು ಹೇಗೆ ಎಂಬ ಚಿಂತೆ ನನಗೆ ಉಂಟಾಯಿತು. ರಾತ್ರಿ ನಾನು ಕಬ್ಬು ತಿನ್ನುವಾಗ ಅದನ್ನು ಕಟ್ಟಿ ಹಾಕತೊಡಗಿದೆ. ಆದರೆ ಬಿಟ್ಟೊಡನೆ ಅದು ಕಬ್ಬಿನ ಚರಟ ಬಿದ್ದಲ್ಲಿಗೆ ಹೋಗಿ ಅದನ್ನು ತಿನ್ನತೊಡಗಿದ್ದು ಯಾರಿಗೂ ಗೊತ್ತಾಗಲಿಲ್ಲ. ಚರಟವನ್ನು ತಿಂದದ್ದರಿಂದ ಕಾಂಚಿಗೆ ಮಲಬದ್ಧ ತೆಯಾಗಿ ಹೊಟ್ಟೆನೋವು ಸುರುವಾಯಿತು. ಅದು ಅನ್ನ-ನೀರನ್ನು ಬಿಟ್ಟಿತು. ಔಷಧೋಪಚಾರದ ಪ್ರಯೋಜನವಾಗಲಿಲ್ಲ.

ಒಂದು ದಿನ ಸಾಯಂಕಾಲ ನಾನು ಯಾವದೊ ಊರಿಗೆ ಹೋಗಿದ್ದವನು ತಿರುಗಿ ಮನೆಗೆ ಬಂದಾಗ ನಾನು ಮನೆಯಲ್ಲಿಲ್ಲದ ಇಡೀ ಮೂರು ದಿನಗಳಲ್ಲಿ ಕಾಂಚಿ ಏನನ್ನೂ ತಿನ್ನಲಿಲ್ಲ ಎಂದು ನನ್ನ ಪತ್ನಿ ಹೇಳಿದಳು. ನೀವೇ ಕೊಟ್ಟರೆ ಏನನ್ನಾದರೂ ತಿಂದೀತು ಎಂದು ಅವಳು ಅಭಿಪ್ರಾಯಪಟ್ಟಳು.

ಎಷ್ಟೋ ಸಲ ಕಾಂಚಿ ಈ ರೀತಿ ಹಟಮಾಡಿದ್ದುಂಟು. ನಾನೇ ತಂದು ಹಾಕಿದ ವಿನಾ ಅದು ತಿನ್ನುತ್ತಿರಲಿಲ್ಲ.

ನಾನು ಕಾಂಚಿಯನ್ನು ಕರೆದೆ. ನನ್ನ ಸ್ವರ ಕೇಳಿ ಅದು ದೀನವಾಣಿಯಿಂದ ಕೂಗಿತು. ಎದ್ದು ನಿಂತು ನನ್ನೆಡೆಗೆ ಬರಲು ಅದು ಪ್ರಯತ್ನಿಸಿತು. ಆದರೆ ಅದಕ್ಕೆ ಎದ್ದು ನಿಲ್ಲುವದಾಗಲಿಲ್ಲ. ನನಗೆ ಅತ್ಯಂತ ದುಃಖವಾಯಿತು. ನಾನು ಅದೇ ಪ್ರವಾಸದಿಂದ ಮರಳಿ ಬಂದಿದ್ದೆನಾದರೂ ಅದನ್ನು ಯೋಚಿಸದೆ, ಮೈಮೇಲಿನ ಬಟ್ಟೆ ಕೂಡ ಬದಲಿಸದೆ ಕಾಂಚಿಯ ಬಳಿಗೆ ಹೋಗಿ ಕುಳಿತೆ. ಅದರ ಮೈಮೇಲೆ ಕೈಯಾಡಿಸಿದೆ. ಅದರೊಂದಿಗೆ ಮಾತಾಡಿದೆ. ತನ್ನನ್ನು ಹೊಗಳಿ ಮಾತಾಡಿದ್ದು ಅದಕ್ಕೆ ತಿಳಿಯುತ್ತಿತ್ತು. ಅಂಥ ಮಾತುಗಳನ್ನು ಅದು ಕಿವಿಗೊಟ್ಟು ಕೇಳುತ್ತಿತ್ತು.

ತುಸು ಹಾಲು ತರಿಸಿ ಅದರ ಮುಂದಿಟ್ಟು ಕುಡಿಯೆಂದು ಹೇಳಿದೆ. ನನ್ನ ಮನಸ್ಸನ್ನು ನೋಯಿಸಬಾರದೆಂದೇನೋ ಅದು ಹಾಲಿನ ಬಟ್ಟಲಿಗೆ ಬಾಯಿ ಹಾಕಿತು. ನಾಲಿಗೆಯಿಂದ ಒಂದೆರಡು ಸಲ ಹಾಲನ್ನು ನೆಕ್ಕಿದಂತೆ ಮಾಡಿತು ಆದರೆ ಅದಕ್ಕೆ ಹಾಲು ಕುಡಿಯುವದಾಗಲಿಲ್ಲ. ಕಾಂಚಿಯನ್ನು ಕಟ್ಟಿದಲ್ಲೇ ಸಮೀಪದಲ್ಲಿ ತೂಗು ಮಂಚವಿತ್ತು. ಅದರ ಮೇಲೆ ಕುಳಿತೆ. "ಹಾಗೆಯೆ ಒಂದರ್ಧ ತಾಸು ಕುಳಿತುಕೊಳ್ಳಿ, ಕಾಂಚಿಗೆ ಸಮಾಧಾನವೆನಿಸೀತು" ಎಂದಳು ನನ್ನ ಪತ್ನಿ.

ಮರುದಿನ ಮಧ್ಯಾಹ್ನ ಕಾಂಚಿ ಈ ಲೋಕವನ್ನು ತ್ಯಜಿಸಿತು.

ನನ್ನ ಕುದುರೆಯನ್ನು ಹುಗಿದಿದ್ದ ಸ್ಥಳದ ಸಮೀಪದಲ್ಲಿ ಅದನ್ನು ಹುಗಿದೆ.

ಕಾಂಚಿಯಂಥ ಒಳ್ಳೆಯ, ಪ್ರೇಮಲ ಪ್ರಾಣಿ ಸಿಗುವದು ಅಪರೂಪ.

ಕಾಂಚಿ ಅಭಿಮಾನಿಯಾಗಿತ್ತು. ಸಿಟ್ಟು ಮಾಡಿ ಬಿಗಿದು ಕೂಡುತ್ತಿತ್ತು. ಒಮ್ಮೆ ಉಮರಾವತಿಯಲ್ಲಿ ನನ್ನೊಬ್ಬ ಆಪ್ತರ ಮನೆಗೆ ಹೋಗಿದ್ದೆ. ಕಾಂಚಿ ನನ್ನ ಸಂಗಡ ಬಂದಿತ್ತು. ನಾವೆಲ್ಲ ಮಾತಾಡುತ್ತ ಕುಳಿತಿದ್ದಾಗ ಕಾಂಚಿ ಮನೆಯಲ್ಲೆಲ್ಲ ಅಡ್ಡಾಡಿ ಬಂದಿತು. ಈ ಓಡಾಟದಲ್ಲಿ ಅದು ಅಡಿಗೆ ಮನೆಯಲ್ಲೂ ಕಾಲಿಟ್ಟಿತ್ತು ಅಲ್ಲಿ ಅಡಿಗೆ ಮಾಡುತ್ತಿದ್ದವಳು ಗಟ್ಟಿಯಾಗಿ ಕೂಗಿಕಟ್ಟಿಗೆಯನ್ನೆತ್ತಿದಾಗ ಕಾಂಚಿ ಓಡುತ್ತ ಹೋಗಿ ನನ್ನ ಮೋಟಾರಿನಲ್ಲಿ ಕುಳಿತಿತು. ಮನೆಯ ಜನರು ಅದನ್ನು ಕರೆದರು. ನಾನೂ ಕೂಗಿದೆ. ಆದರೆ ತಿರುಗಿ ಅದು ಆ ಮನೆಯಲ್ಲಿ ಕಾಲಿಡಲಿಲ್ಲ. ಅಷ್ಟೇ ಅಲ್ಲ, ನಾನು ಆ ಮನೆಗೆ ಹೋದಾಗಲೆಲ್ಲ ನನ್ನ ಸಂಗಡ ಬಂದಿದ್ದರೂ ಅದು ಮುಂದೆ ಆ ಮನೆಯಲ್ಲಿ ಆಗ್ರಹಪಡಿಸಿದರೂ ಕಾಲಿಡಲಿಲ್ಲ.

ಪಚಮಡಿಯಲ್ಲೊಮ್ಮೆ ಕಾಂಚಿ ಮಂಗಗಳನ್ನು ಕಂಡು ಬೊಗಳುತ್ತ ಅವುಗಳ ಹಿಂದೆಯೆ ಅಡವಿಗೆ ಹೋಗಿಬಿಟ್ಟಿತು. ಇಬ್ಬರು ಅದನ್ನು ಹುಡುಕಲು ಹೋದರು. ಆದರೆ ಕಾಂಚಿ ಕಾಣಿಸಲಿಲ್ಲ. ಸಂಜೆಯಾದ್ದರಿಂದ ನಾವೆಲ್ಲ ತಿರುಗಿ ಮನೆಗೆ ಹೊರಟೆವು. ಮಂಗಗಳು ಕಾಣದಾದೊಡನೆ ಕಾಂಚಿ ತಿರುಗಿ ರಸ್ತೆಗೆ ಬಂದು ಮೋಟರಿನ ಹಾದಿ ನೋಡುತ್ತ ಕುಳಿತಿರಬಹುದು ಎಂಬ ಕಲ್ಪನೆ ಬಂದು ನಾನು ರಸ್ತೆಯ ಮೇಲೆ ವಿಶೇಷ ಲಕ್ಷ್ಯವಿಡುತ್ತ ಮೋಟರನ್ನು ಬಿಡಿಸಿದೆ. ನಮ್ಮ ಬಂಗಲೆಗೆ ಹೋಗುವ ರಸ್ತೆ ಕವಲೊಡೆದ ಸ್ಥಳದಲ್ಲಿ ಕಾಂಚಿ ಕುಳಿತಿತ್ತು. ತುಸು ಮಳೆ ಬಂದಿತ್ತು. ಕಾಂಚಿ ತೊಯ್ದು ಚಳಿಯಿಂದ ನಡುಗುತ್ತಿತ್ತು. ಮೋಟರನ್ನು ಕಂಡೊಡನೆ ಜಿಗಿದು ಒಳಗೆ ಬಂತು. ಅದಕ್ಕೆ ತುಂಬ ಆನಂದವಾಗಿತ್ತು. ಅದು ಮೋಟರಿನ ತುಂಬೆಲ್ಲ ಜಿಗಿಯತೊಡಗಿತು. ನನ್ನ ಬಟ್ಟೆ ತೊಯ್ದುದ್ದನ್ನು ಗಮನಿಸದೆ ನಾನು ಅದನ್ನು ಹಿಡಿದುಕೊಂಡು ಕೂಡ್ರಬೇಕಾಯಿತು.

ಕಾಂಚಿ ಸತ್ತರೂ ಅದರ ನೆನಪು ಅಳಿಯಲಿಲ್ಲ.

"ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹೋದಧೌ। ಸಮೇತ್ಯ ಚ ವ್ಯಯೇಯಾತಾಂ ತದ್ವತ್ ಭೂತಸಮಾಗಮಃ ॥"

ಸ್ವರ್ಗದಲ್ಲಿಯೂ ನಾಯಿಗಳಿವೆ ಎಂದು ವೇದ ಮತ್ತು ಪುರಾಣಗಳಲ್ಲಿ ಹೇಳಿದೆ. ಯಮರಾಜನ ಹತ್ತರ ನಾಯಿಗಳಿದ್ದು ಅವು ಅವನ ಮುಂದೆ ಓಡುತ್ತಿರುತ್ತವೆ ಎಂದು ಋಗ್ವೇದದಲ್ಲಿ ಓದಿದ

ನೆನಪಿದೆ. ಸರಮಾ ಎಂಬ ನಾಯಿ ದೇವತೆಗಳ ಬಳಿ ಇತ್ತು. ಅದರ ಮಕ್ಕಳನ್ನು ಅಂದರೆ ಸಾರಮೇಯರನ್ನು ಯಜ್ಞದಿಂದ ಹೊರಗೆ ದಬ್ಬಿದ್ದರಿಂದ ಅದು ಇಂದ್ರನ ಹತ್ತಿರ ದೂರಿಕೊಂಡು ನ್ಯಾಯ ಕೇಳಿತು ಎಂಬ ಕಥೆಯಿದೆ. ತ್ರಿಮೂರ್ತಿಗಳ ಅವತಾರವಾದ ದತ್ತಾತ್ರೇಯನಿಗೆ ನಾಯಿಗಳೆಂದರೆ ಬಲು ಪ್ರೀತಿ. ಧರ್ಮರಾಜನು ಹಿಮಾಲಯದಲ್ಲಿ ಕೊನೆಯ ಪ್ರವಾಸ ಮಾಡುತ್ತಿದ್ದಾಗ ಅವನ ಸಂಗಡ ನಾಯಿ ಮಾತ್ರ ಇತ್ತು. ಧರ್ಮರಾಜನನ್ನು ಕರೆದೊಯ್ಯಲು ದೇವಲೋಕದ ವಿಮಾನ ಬಂದಾಗ ನಾಯಿಯನ್ನೂ ತನ್ನ ಜೊತೆಯಲ್ಲಿ ಸ್ವರ್ಗಕ್ಕೆ ಕರೆದೊಯ್ಯುವದಾದರೆ ಮಾತ್ರ ತಾನು ಬರುತ್ತೇನೆ, ಇಲ್ಲವಾದರೆ ಆ ನಿಷ್ಠಾವಂತ ನಾಯಿಯನ್ನು ಬಿಟ್ಟು ನಾನೊಬ್ಬನೇ ಸ್ವರ್ಗಕ್ಕೆ ಬರಲಾರೆ ಎಂದಾತ ಖಂಡಿತವಾಗಿ ಹೇಳಿದ ಎಂದು ವ್ಯಾಸ ಮಹರ್ಷಿಗಳು ಹೇಳಿದ್ದಾರೆ. ಸ್ವರ್ಗದಲ್ಲಿ ನಾಯಿಗಳಿದ್ದುದೇ ಆದರೆ ಮತ್ತು ನಾಯಿಗಳು ಇಹಲೋಕದಿಂದ ಸ್ವರ್ಗಕ್ಕೆ ಹೋಗಬಲ್ಲವಾದರೆ ನಮ್ಮ ಕಾಂಚಿ ಖಂಡಿತವಾಗಿ ಸ್ವರ್ಗಕ್ಕೆ ಹೋಗಿರಬೇಕು. "ಜೀ" ಎಂಬ ಬೆಕ್ಕಿಗೆ ಮನುಷ್ಯತ್ವ ಪ್ರಾಪ್ತವಾಯಿತೆಂದು ಜಿನರಾಜ ದಾಸರು ಬರೆದಿಟ್ಟಿದ್ದಾರೆ. ಹಾಗೆಯೆ ಕಾಂಚಿಗೂ ಮನುಷ್ಯತ್ವ ಲಭಿಸಿರಬೇಕು ಎಂದು ನನಗನಿಸುತ್ತದೆ.



## ಇನ್ನೊಂದು ಬಗೆಯ ತಲೆಶೂಲೆ !

ಅಜೀರ್ಣ ಅಥವಾ ಥಂಡಿಯಿಂದ ನಮಗೆ ತಲೆಶೂಲೆ ಏಳುತ್ತದೆ ಎನ್ನುವುದು ಎಲ್ಲರಿಗೂ ತಿಳಿದೇ ಇದೆ. ಆದರೆ ಸಾಮಾಜಿಕವಾಗಿ ನಮಗೆ ತಲೆಶೂಲೆ ತರಿಸುವ ಈ ಕೆಲವು ವ್ಯಕ್ತಿಗಳಿದ್ದಾರೆ:

ದ್ವಾವಿಮೌ ಪುರುಷೌ ಲೋಕೇ ಶಿರಃಶೂಲಕರಾವುಭೌ।
ಗೃಹಸ್ಥಶ್ಚ ನಿರಾರಂಭಃ ಯತಿಶ್ಚ ಸಪರಿಗ್ರಹಃ॥

ನಿರುದ್ಯೋಗಿಯಾಗಿರುವ ಗೃಹಸ್ಥ, ಸಂಸಾರ ಸಮೇತನಾಗಿರುವ ಸಂನ್ಯಾಸಿ ಇವರಿಬ್ಬರೂ ತಲೆಶೂಲೆಗೆ ಸಮಾನರು.

ಅವಿಧೇಯೋ ಭೃತ್ಯಜನಃ ಶಠಾನಿ ಮಿತ್ರಾಣ್ಯದಾಯಕಃ ಸ್ವಾಮೀ।
ಅವಿನಯವತೀ ಚ ಭಾರ್ಯಾ ಮಸ್ತಕಶೂಲಾನಿ ಚತ್ವಾರಿ॥

ಅವಿಧೇಯನಾದ ಸೇವಕ, ಮೋಸಮಾಡುವ ಮಿತ್ರ, ರೊಕ್ಕ ಕೊಡದೇ ದುಡಿಸಿಕೊಳ್ಳುವ ಯಜಮಾನ, ಭಂಡ ಹೆಂಡತಿ ಈ ನಾಲ್ವರೂ ಸಂಬಂಧಪಟ್ಟವರಿಗೆ ತಲೆಶೂಲೆಯನ್ನುಂಟುಮಾಡುತ್ತಾರೆ.

ವೈದ್ಯಸ್ತರ್ಕವಿಹೀನೋ ನಿರ್ಲಜ್ಜಾ ಕುಲವಧೂರ್ಯತಿರ್ಮೂರ್ಖಃ।
ಕಟಕೇ ಚ ಪ್ರಾಘುಣಿಕೋ ಮಸ್ತಕಶೂಲಾನಿ ಚತ್ವಾರಿ॥

ಯೋಜನೆ ಮಾಡದೆ ಔಷಧ ಕೊಡುವ ವೈದ್ಯ, ನಿರ್ಲಜ್ಜೆಯಿಂದ ವರ್ತಿಸುವ ಹೆಣ್ಣು, ಮೂರ್ಖನಾದ ಯತಿ, ಸೈನಿಕರ ಬಿಡಾರದ ಊಟಕ್ಕೆ ಹೋಗುವ ಅತಿಥಿ, ಇವರೂ ತಲೆಶೂಲೆಯನ್ನುಂಟುಮಾಡುವವರೇ ಆಗಿದ್ದಾರೆ.

ಶ್ರೀ ಆನ್ಯಾನಂದರ ಆಯ್ಕೆ : ವಾಗ್ಭೂಷಣದಿಂದ

ನಾಲ್ಕು ಶತಮಾನಗಳಲ್ಲಿ ಅದು
ಜಗತ್ತಿನಲ್ಲೆಲ್ಲ ವ್ಯಾಪಿಸಿತು

# ಬಟಾಟೆಯ ಇತಿವೃತ್ತ

ಬಟಾಟೆಯು ನಮ್ಮ-ನಿಮ್ಮ ಜೀವನದಲ್ಲಿ ಎಷ್ಟು ಸೇರಿಹೋಗಿದೆಯೆಂದರೆ ಒಂದು ಕಾಲದಲ್ಲಿ ಈ ದೇಶದಲ್ಲಿ ಬಟಾಟೆ ಗೊತ್ತಿರಲಿಲ್ಲವೆಂದು ನಂಬುವುದು ಕಷ್ಟವೇ. ಆದರೆ ನಾಲ್ಕೇ ಶತಮಾನಗಳ ಕೆಳಗೆ ನಮಗೆ ಭಾರತೀಯರಿಗಷ್ಟೇ ಅಲ್ಲ, ಯುರೋಪಿಯನ್ನರಿಗೆ ಕೂಡ ಅದರ ಪರಿಚಯ ಇದ್ದಿಲ್ಲ. ಬಟಾಟೆಯು ಪ್ರಪಂಚಕ್ಕೆ ದಕ್ಷಿಣ ಅಮೇರಿಕದ ಪ್ರಾಚೀನ ಇಂಕಾ ನಾಗರಿಕತೆಯ ವರಪ್ರದಾನವಾಗಿದೆ. ದಕ್ಷಿಣ ಅಮೇರಿಕದಿಂದ ಯುರೋಪಿಗೆ, ಅಲ್ಲಿಂದ ಭಾರತಾದಿ ದೇಶಗಳಿಗೆ, ಬಟಾಟೆಯ ಸಾಮ್ರಾಜ್ಯ ವಿಸ್ತರಿಸಿದೆ.



ಬಟಾಟೆಯನ್ನು "ಕಂಡುಹಿಡಿದ'' ಕೀರ್ತಿ ಸ್ಪೇನ್ ದೇಶದ ಪುಂಡರಿಗೆ ಸಲ್ಲಬೇಕು. ಅಮೇರಿಕ ಖಂಡವನ್ನು ಕಂಡುಹಿಡಿದ ಹೊಸದರಲ್ಲಿ ಅಲ್ಲಿನ ಪ್ರಾಚೀನ ಇಂಕಾ ಜನರ ಸಂಪತ್ತನ್ನು ಕೊಳ್ಳೆ ಹೊಡೆಯಲು ಟೋಳಿ ಕಟ್ಟಿಕೊಂಡು ಹಡಗಿನಲ್ಲಿ ಹೋಗಿ ದಾಳಿ ಮಾಡುತ್ತಿದ್ದವರಲ್ಲಿ ಸ್ಪೇನ್ ದೇಶದ ಪುಂಡರು ಅಗ್ರಗಣ್ಯರು. ಇಂಥ ಒಂದು ಟೋಳಿಯು ಆಂಡಿಸ್ ಪರ್ವತಾವಳಿಯ ತಪ್ಪಲಿನ ಒಂದು ಹಳ್ಳಿಯ ಮೇಲೆ ಬಂಗಾರಕ್ಕಾಗಿ ದಾಳಿ ಮಾಡಿತು. ಹಸಿದ ದಾಳಿಗಾರರು ಹಳ್ಳಿಯ ಮನೆಗಳಲ್ಲಿ ನುಗ್ಗಿದಾಗ ಅವರಿಗೆ ನಸುಕಂದು ಬಣ್ಣದ ಗಡ್ಡೆಗಳು ಸಿಕ್ಕಿದವು. ಅವರು ಅವುಗಳನ್ನು ಬೇಯಿಸಿ ತಿಂದರು. ಬಹಳ ರುಚಿಯೆನಿಸಿತು. ಇದು ಏನು ? ಎಂದು ಸ್ಥಳೀಯ ಜನರನ್ನು ಕೇಳಿದಾಗ ಅವರು "ಪಪಾ" ಎಂದರು. ಸ್ಪಾನಿಸ್ ಸುಲಿಗೆಗಾರರ ಬಾಯಲ್ಲಿ ಅದು "ಪಟಾಟ" ಎಂದಾಯಿತು. "ಬಟಾಟೆ" ಅದರದೇ ಇನ್ನೊಂದು ರೂಪ.

ಶತಮಾನಗಳಿಂದ ಇಂಕಾ ಜನರಿಗೆ ಮುಖ್ಯ ಆಹಾರಗಳಲ್ಲೊಂದಾಗಿದ್ದ ಬಟಾಟೆ ಈ ಪ್ರಕಾರವಾಗಿ ೧೫೩೭ ರಲ್ಲಿ ಜಗತ್ತಿನ ಲಕ್ಷ್ಯಕ್ಕೆ ಬಂತು.

ಆದರೆ ಅದನ್ನು ಲೋಕವು ಒಳ್ಳೆ ಆಹಾರವೆಂದೊಪ್ಪಿಕೊಳ್ಳಬೇಕಾದರೆ ಬಹಳ ಕಾಲ ಹಿಡಿಯಿತು. ಬಟಾಟೆ ತಿಂದರೆ ಕುಷ್ಠರೋಗ ಬರುತ್ತದೆಂದು ಯಾರೋ ಸುದ್ದಿ ಹುಟ್ಟಿಸಿದರು. ಈ ಅಪವಾದವು ಒಂದು ಶತಮಾನ ಕಾಲ ಈ ನಿರಪರಾಧಿ ಗಡ್ಡೆಗೆ ಅಂಟಿಕೊಂಡಿತ್ತು. ಕ್ಷಯರೋಗ, ಸಂಗ್ರಹಣಿ ಇತ್ಯಾದಿ ರೋಗಗಳ ಜನಕನೆಂದೂ ಅದಕ್ಕೆ ಬಿರುದು ಬಂದ ದಿನಗಳಿವೆ.

ಕೊನೆಗೆ ಈ ಎಲ್ಲ ದುಷ್ಕೀರ್ತಿ ದೂರವಾಗಿ ಬಟಾಟೆ ಜನತೆಯ ಊಟದಲ್ಲಿ ಸ್ಥಾನ ಪಡೆಯಬೇಕಾದರೆ ಧಾರ್ಮಿಕ ಪ್ರಭೃತಿಗಳ ಮೇಲ್ಪಂಕ್ತಿಯೂ ಅರಸರ ದಂಡಶಕ್ತಿಯೂ ಬಹಳ ಮಟ್ಟಿಗೆ ಅದರ ನೆರವಿಗೆ ಬರಬೇಕಾಯಿತು. ಪೋಪನ ಪ್ರತಿನಿಧಿಯು ೧೫೮೮ ರಲ್ಲಿ ವಿಯೆನ್ನಾದ ರಾಜೋದ್ಯಾನದ ಅಧಿಕಾರಿಯಾದ ಚಾರ್ಲಸ್ ದ ಲೆಕ್ಲೂಸನಿಗೆ ಎರಡು ಬಟಾಟೆಗಳನ್ನು ಕಳಿಸಿದನು. ಅವನು ಅವುಗಳನ್ನು ನಟ್ಟು ಬೆಳಸಿ ಮಾಂಸದೊಡನೆ ಬೇಯಿಸಿ ತಿಂದು ಮೆಚ್ಚಿ ಯುರೋಪಿನ ಬೇರೆ ಬೇರೆ ದೇಶಗಳ ಪ್ರಮುಖ ತರಕಾರಿ ಬೆಳೆಸುವವರಿಗೆ ಬೀಜಗಳನ್ನು ಕಳಿಸಿದನು. ಅವನ ಪ್ರಯತ್ನಗಳಿಂದ ಬಟಾಟೆ ಶ್ರೀಮಂತರ ಅಡಿಗೆಮನೆಗೆ ಪ್ರವೇಶ ಪಡೆದರೂ ಸಾಮಾನ್ಯ ಜನರಿಗೆ ಅದು ಅಭೋಜ್ಯವಾಗಿಯೇ ಉಳಿಯಿತು.

ಬಟಾಟೆಯನ್ನು ವಿಪುಲವಾಗಿ ಬೆಳಸಿದ ಪ್ರಥಮ ದೇಶ ಜರ್ಮನಿ. ೧೮ ನೇ ಶತಮಾನದ ಮಧ್ಯದಲ್ಲಿ ಜರ್ಮನಿಯಲ್ಲಿ ಬರಗಾಲ ಬಂದಾಗ ಪ್ರಸಿದ್ಧ ಫ್ರೆಡ್ರಿಕ್ ಅರಸನು ಒಂದು ಗಾಡಿ ತುಂಬ ಬಟಾಟೆ ಬೀಜಗಳನ್ನು ತರಿಸಿ ರೈತರಿಗೆ ಹಂಚಿದನು. ರೈತರು ಅದನ್ನು ನಡುವಂತೆ ನೋಡಿಕೊಳ್ಳಲು ಅವನು ಸಶಸ್ತ್ರ ಸೈನಿಕರನ್ನು ಹಳ್ಳಿಗಳಿಗೆ ಕಳಿಸಿದ್ದರಿಂದ ಬಟಾಟೆ ಬೆಳೆ ಅನಿವಾರ್ಯವಾಗಿ ಪ್ರಸಾರಗೊಂಡಿತು ಬಳಿಕ ಯುದ್ಧದಲ್ಲಿ ಆಹಾರ ಕೊರತೆಯಿಂದ ಬಳಲುತ್ತಿದ್ದ ಜನತೆ ಬಟಾಟೆಯನ್ನು ಮೆಚ್ಚಲು ಕಲಿಯಿತು

ಅನಂತರ ಫ್ರಾನ್ಸ್ ಬಟಾಟೆಯನ್ನು ಸ್ವೀಕರಿಸಿತು. ಜರ್ಮನಿಯಲ್ಲಿ ಯುದ್ಧ ಕೈದಿಯಾಗಿದ್ದ ಪಾರ್ಮೆಂಟಿಯರನೆಂಬವನು ಫ್ರಾನ್ಸಿಗೆ ಬಟಾಟೆ ಬೀಜಗಳನ್ನು ತಂದನು. ಬಟಾಟೆಗೆ ರಾಜಕುಟುಂಬದಲ್ಲಿ ಎಷ್ಟು ಮರ್ಯಾದೆ ದೊರೆಯಿತೆಂದರೆ ರಾಣಿ ಆಂಟನೇಟಳು ಬಟಾಟೆ ಹೂಗಳನ್ನು ಮುಡಿದುಕೊಂಡು ರಾಜದರ್ಬಾರದಲ್ಲಿ ಕಾಣಿಸಿಕೊಂಡಳು. ಪ್ರತಿಯೊಬ್ಬರೂ ಬಟಾಟೆಗಾಗಿ ಹಂಬಲಿಸುತ್ತಿದ್ದುದರಿಂದ ಪಾರ್ಮೆಂಟಿಯರನಿಗೆ ತನ್ನ ಬಟಾಟೆ ಹೊಲವನ್ನು ಕಳ್ಳಕಾಕರಿಂದ ಕಾಯಲು ಸೈನಿಕರನ್ನು ಇಡುವ ಪ್ರಸಂಗ ಬಂತು. ಅವನು ಸತ್ತ ಮೇಲೆ ಅವನ ಗೋರಿಯ ಮೇಲೆ ಬಟಾಟೆಯನ್ನು ನಟ್ಟು ಗೌರವಿಸಲಾಯಿತು— ಅವನೇ ಬಟಾಟೆಯನ್ನು ಕಂಡುಹಿಡಿದವನೋ ಎಂಬ ಹಾಗೆ.

ಭಾರತಕ್ಕೆ ಬಟಾಟೆ ಎಂದು ಬಂತೆಂದು ಖಂಡಿತವಾಗಿ ಗೊತ್ತಿಲ್ಲ. ಆದರೆ ಅದು ಯುರೋಪಿಗೆ ತರಲ್ಪಟ್ಟ ಕೆಲ ವರ್ಷಗಳಲ್ಲೇ ಇಲ್ಲಿಗೆ ಬಂದಿರಬೇಕು. ಇಂದು ಭಾರತದಲ್ಲಿ ಬೆಳೆಯುವ ಮುಖ್ಯ ಬಟಾಟೆ ಜಾತಿಯಾದ "ದೇಶಿ"ಯು ಶತಮಾನಗಳ ಹಿಂದೆ ಯುರೋಪಿನಲ್ಲಿ ಬೆಳೆಸಲ್ಪಡುತ್ತಿದ್ದ ಜಾತಿಯನ್ನು ಹೋಲುತ್ತದೆ. ಈಚೆಗೆ ಯುರೋಪಿನಿಂದ ತಂದು ಬಿತ್ತಿದ ಜಾತಿಯನ್ನು ವಿಲಾಯತಿ ಬಟಾಟೆಯೆಂದು ಹೆಸರಿಸುತ್ತಾರೆ. ಈ ದೇಶದಲ್ಲಿ ಬಟಾಟೆ ಯಾವ ಯಾವ ಅಪವಾದಗಳನ್ನು ಸಹಿಸಬೇಕಾಯಿತೆಂಬುದರ ಸ್ವಾರಸ್ಯವಾದ ಉಲ್ಲೇಖಗಳು ದೊರೆಯದಿದ್ದರೂ ಯುರೋಪಿನಲ್ಲಿ ಹೇಗೊ ಹಾಗೆ ಇಲ್ಲಿಯೂ ಬಟಾಟೆಯನ್ನು ಮೊದಲು ನಚ್ಚಿಕೊಂಡವರು ಶ್ರೀಮಂತರೇ. ಅದರ ಬೆಲೆ ಕೂಡ ಇಂದಿಗೂ ಬಡವರ ಜೇಬಿಗೆ ನಿಲುಕುವಂತಿದೆಯೆನ್ನಲು ಬರುವುದಿಲ್ಲ.

ಒಂದು ದೇಶದಲ್ಲಿ ಮಾತ್ರ ಬಟಾಟೆಯಿಂದ ಒಂದು ದೊಡ್ಡ ದುರಂತ ಸಂಭವಿಸಿತು. ಅದು ಅಯರ್ಲಂಡ್. ಪ್ರಾರಂಭದಲ್ಲೇ ಬಟಾಟೆಯನ್ನು ಮುಖ್ಯ ಆಹಾರವಾಗಿ ಸ್ವೀಕರಿಸಿದ ಐರಿಶ್ ಜನರು ಬಿತ್ತಲೂ ಬೆಳೆಯಲೂ ಅಷ್ಟು ಕಷ್ಟವಲ್ಲದ

ವಿಪುಲ ಫಲದಾಯಕವಾದ ಈ ಗಡ್ಡೆಯನ್ನು ಎಷ್ಟು ನೆಚ್ಚಿಕೊಂಡಿದ್ದರೆಂದರೆ, "ಐರಿಶ್ ಜನರ ತಲೆಯಲ್ಲಿ ಬಟಾಟೆಯೇ ಇದೆ" ಎಂದು ಗಾದೆ ಕೂಡ ಹುಟ್ಟಿಬಿಟ್ಟಿತ್ತು. ೧೮೪೫-೪೬ ರಲ್ಲಿ ಅಯರ್ಲಂಡಿನಲ್ಲಿ ಬಟಾಟೆಗೆ ಭಯಂಕರ ರೋಗವೊಂದು ಹಬ್ಬಿ ಬೆಳೆಯನ್ನು ಸಂಪೂರ್ಣ ನಾಶ ಮಾಡಿಬಿಟ್ಟಿತು. ಲಕ್ಷಾಂತರ ಜನರಿಗೆ ಆಹಾರವಿಲ್ಲದಾದಾಗ ಟೈಫಸ್ ಜ್ವರವೂ ಹಾವಳಿ ಎಬ್ಬಿಸಿತು. ೮೦ ಲಕ್ಷ ಜನಸಂಖ್ಯೆಯಲ್ಲಿ ೧೦ ಲಕ್ಷ ಜನರು ಉಪವಾಸದಿಂದಲೂ ರೋಗದಿಂದಲೂ ಸತ್ತರು. ಲಕ್ಷಾಂತರ ಜನರು ದೇಶತ್ಯಾಗ ಮಾಡಿದರು.

ಒಂದು ದೇಶದಲ್ಲಿ ಹೀಗೆ ದುರಂತಕ್ಕೆಡೆ ಮಾಡಿಕೊಟ್ಟರೂ ಬಟಾಟೆ ಎಷ್ಟೋ ದೇಶಗಳಲ್ಲಿ ಜೀವನದಾಯಿಯಾಗಿದೆ. ಎರಡನೇ ಮಹಾಯುದ್ಧಕಾಲದಲ್ಲಿ ಆಹಾರ ಕೊರತೆಯುಂಟಾದಾಗ ಇಂಗ್ಲಂಡನ್ನು ಕಾಪಾಡಿದ್ದು ಬಟಾಟೆಯೆಂದೇ ಹೇಳಬಹುದು. ಧಾನ್ಯಗಳ ಕೊರತೆಯನ್ನು ಬಟಾಟೆ ಬೆಳೆಯಿಂದ ತುಂಬಿಕೊಂಡು ಇಂಗ್ಲೀಷ್ ಜನತೆ ಯುದ್ಧ ಮಾಡಿತು.

ಬಟಾಟೆಯ ವಿಷಯಕ್ಕೆ ಇಂದಿಗೂ ಹಲ ಕೆಲವು ತಪ್ಪು ಗ್ರಹಿಕೆಗಳು ಇಲ್ಲದಿಲ್ಲ. ಬಟಾಟೆ ಅಭೋಜ್ಯವೆಂದು ಭಾವಿಸುವ ಕೆಲ ಸನಾತನಿಗಳು ಉಳಿದಿರಬಹುದಾದರೂ ಅವರ ಸಂಖ್ಯೆ ಇಂದು ತೀರ ಕಡಿಮೆ. ಬಟಾಟೆ ತಿಂದರೆ ಕೊಬ್ಬು ಹೆಚ್ಚಿ ಮನುಷ್ಯ ದಪ್ಪನಾಗುವನೆಂಬ ಭ್ರಮೆ ಮಾತ್ರ ಸಾಕಷ್ಟು ಪ್ರಚಲಿತವಾಗಿದೆ. ಆದರೆ ಇದರಲ್ಲಿ ತಥ್ಯವಿಲ್ಲ. ಒಂದು ಸಾಧಾರಣ ಬಟಾಟೆಯಲ್ಲಿ ಒಂದು ದೊಡ್ಡ ಸೇಬು ಹಣ್ಣಿನಲ್ಲಿರುವುದಕ್ಕಿಂತ ಹೆಚ್ಚು "ಕೆಲರಿ"ಗಳಿಲ್ಲವೆಂದು ಆಹಾರ ತಜ್ಞರು ತೋರಿಸಿಕೊಟ್ಟಿದ್ದಾರೆ.

ಬಟಾಟೆಯು ನಮಗೆ ಬೇಕಾದ ಆಹಾರ ಸತ್ವಗಳಲ್ಲಿ ಹಲವನ್ನು ಅಗ್ಗವಾಗಿ ಪೂರೈಸುತ್ತದೆ. ಅದರಲ್ಲಿ ಬ, ಜೀವನ ಸತ್ವ, ಕಬ್ಬಿಣ, ಮತ್ತು ಸ್ವಲ್ಪಾಂಶ ತಾಮ್ರವಲ್ಲದೆ, ಇತರ ಕೆಲ ಅವಶ್ಯಕ ಖನಿಜಗಳೂ ಸುಲಭವಾಗಿ ಪಚನವಾಗುವ ರೂಪದಲ್ಲಿ ಇವೆ.

ಇಂದು ನಾವು ತಿನ್ನುವ ಬಟಾಟೆ ನಾಲ್ಕು ಶತಮಾನಗಳ ಹಿಂದೆ ಸ್ಪಾನಿಶ್ ಪುಂಡರು ಪೆರುವಿನಲ್ಲಿ ಮೊದಲು ಕಂಡ ಬಟಾಟೆಯಂತಿಲ್ಲ. ಇಂಕಾ ಜನರ ಬಟಾಟೆ ಬಲು ಚಿಕ್ಕದಾದ ಗಡ್ಡೆಯಾಗಿತ್ತು. ಆದರೆ ಶತಮಾನಗಳಿಂದ ಒಕ್ಕಲುತನ ತಜ್ಞರು ಅದರ ತಳಿ ಸುಧಾರಿಸಲು ಮಾಡಿದ ಯತ್ನಗಳ ಫಲವಾಗಿ ಇಂದು ಇಷ್ಟು ದೊಡ್ಡ ಬಟಾಟೆಗಡ್ಡೆಗಳನ್ನು ಕಾಣಲು ಸಾಧ್ಯವಾಗಿದೆ. ಈ ಸುಧಾರಣೆಯ ಪ್ರಯತ್ನ ಇನ್ನೂ ಸಾಗಿದೆ. ಅದರಿಂದ ಇನ್ನೂ ಸುಧಾರಿಸಿದ ಮತ್ತು ರೋಗ ನಿರೋಧಕ ಬಟಾಟೆಗಳು ಬರಲಿವೆ.

ಸುಮಾರು ಐದು ಲಕ್ಷ ಎಕರೆ ಭೂಮಿಯಲ್ಲಿ ಬಟಾಟೆ ಬೆಳೆಯುವ ಭಾರತದಲ್ಲಿ ಉತ್ತರ ಪ್ರದೇಶದಿಂದ ಆಸಾಮದ ವರೆಗಿನ ವಿಸ್ತಾರ ಪ್ರದೇಶದಲ್ಲಿ ಬಟಾಟೆಯ ಪ್ರಾಬಲ್ಯ ಹೆಚ್ಚು. ದಕ್ಷಿಣದಲ್ಲಿಯೂ ಸಾಕಷ್ಟು ಬಟಾಟೆ ಬೆಳೆಯುತ್ತಾರೆ. ಭಾರತದ ಹವೆ-ಮಣ್ಣುಗಳಿಗೆ ಹಲ ಶತಮಾನಗಳಿಂದ ಒಗ್ಗಿದ ದೇಶಿ ಜಾತಿಯ ಬಟಾಟೆಗೆ ರೋಗ ನಿರೋಧಕ ಶಕ್ತಿಯೂ ಹೆಚ್ಚಾಗಿದೆಯೆಂದು ಕೃಷಿತಜ್ಞರ ಅಭಿಪ್ರಾಯವಿದೆ.

ಬಟಾಟೆಯಲ್ಲಿರುವ ಒಂದು ಕೊರತೆಯೆಂದರೆ ಅದನ್ನು ದೀರ್ಘಕಾಲ ಕಾಪಾಡಿಡಲು ಸಾಧ್ಯವಿಲ್ಲದಿರುವುದು. ಇಂದಿನ ಪರಮಾಣು ಯುಗದಲ್ಲಿ, ಬಟಾಟೆಗೆ ಬರುವ ರೋಗಗಳಿಗೆ ಡಿಡಿಟಿ ಮೊದಲಾದ ಸಿದ್ಧೌಷಧಗಳು ಇರುವಂತೆ, ಅದನ್ನು ವರ್ಷಗಟ್ಟಳೆ ಕಾಪಾಡುವ ವಿಧಾನಗಳನ್ನೂ ಕಂಡುಹಿಡಿಯುತ್ತಿದ್ದಾರೆ. ಪರಮಾಣು ವಿಸರಣದಿಂದ ಬಟಾಟೆಗಳನ್ನು ಸಂಸ್ಕರಿಸಿದರೆ ಅವು ಉಗ್ರಾಣಗಳಲ್ಲಿ ಬೇಗನೆ ಮೊಳಕೆ ಬರುವುದಿಲ್ಲವೆಂದೂ ಎರಡು ವರ್ಷಗಳ ವರೆಗೆ ಅವುಗಳನ್ನು ಕಾದಿಡಬಹುದೆಂದೂ ಗೊತ್ತಾಗಿದೆ.



# ತಲೆಯ ಆಕಾರದಿಂದ ಗುಣಪರೀಕ್ಷೆ

ಶ್ರೀ ಕೆ. ವಿಜಯರಾಜ

ನಿಮ್ಮ ತಲೆಯ ಆಕೃತಿಯಿಂದ ನಿಮ್ಮ ಗುಣಾವಗುಣಗಳನ್ನು ಕಂಡುಹಿಡಿಯಬಹುದೆಂದರೆ ನೀವು ನಂಬುವಿರಾ ?

ಶಿರಃಸಾಮುದ್ರಿಕ ನಮ್ಮ ನಮ್ಮ ಬಲಾಬಲಗಳನ್ನು ತಿಳಿದುಕೊಳ್ಳಲು — ಇತರರ ಬಗ್ಗೆ ನಮಗೆಷ್ಟು ತಾಳ್ಮೆಯಿದೆಯೆಂಬುದನ್ನು ಅರಿತುಕೊಳ್ಳಲು— ಈ ಮನುಷ್ಯ ಕೇವಲ ನಟನೆ ಮಾಡುತ್ತಾನೆಯೋ ಇಲ್ಲವೇ ನಿಜವಾಗಿ ಹಾಗೆ ಇದ್ದಾನೆಯೋ— ಎಂಬುವುಗಳನ್ನು ತಿಳಿದುಕೊಳ್ಳಲು ಸಹಾಯವಾಗುತ್ತದೆ.

ಇದರ ಸಹಾಯದಿಂದ, ತಪ್ಪುಹಾದಿಗೆ ಹೋಗಲಿರುವ ಮಕ್ಕಳನ್ನು ತಂದೆ ತಾಯಿಗಳು ತಿದ್ದಲು ಅನುಕೂಲವಾಗುತ್ತದೆ.

ಶಿರಃಸಾಮುದ್ರಿಕವನ್ನು ಉಪಯೋಗಿಸಬೇಕಾದರೆ ಅದರ ಬಗ್ಗೆ ಚೆನ್ನಾಗಿ ಅಭ್ಯಾಸವಿರಬೇಕು. ತಲೆಯ ಎಲುಬುಗಳ ವಿಚಾರ, ಎಲುಬಿನ ಶಾಸ್ತ್ರ ಮತ್ತು ಬುರುಡೆ ರಚನಾಶಾಸ್ತ್ರ ಇವೆಲ್ಲದರ ಜ್ಞಾನ ಬೇಕು. ಈ ಶಾಸ್ತ್ರದ ಜ್ಞಾನವು ಅತಿ ಮನೋರಂಜಕವಿದೆ.

ಮಗುವು ಹುಟ್ಟಿದಾಗ ತಲೆಬುರುಡೆಯ ಎಲ್ಲ ಎಲುಬುಗಳೂ ಒಂದಕ್ಕೊಂದು ಸೇರಿಸಲ್ಪಟ್ಟಿರುವುದಿಲ್ಲ. ನೆತ್ತಿಯ ಮಧ್ಯದಲ್ಲಂತೂ ನಾಡಿಯ ಬಡಿತವನ್ನು ಸಹ ಕಾಣಬಹುದು. ಹುಟ್ಟಿದ ಕೆಲವಾರು ತಿಂಗಳ ನಂತರ ಈ ಜಾಗೆ ಭರ್ತಿಯಾಗುತ್ತದೆ. ಈ ಕಾಲದಿಂದ ಸಾಯುವವರೆಗೂ ತಲೆಬುರುಡೆಯ ಆಕಾರವು ಒಳಗಿರುವ ಮೆದುಳಿನ ಆಕಾರವೆನ್ನಬಹುದು.

ಶಿರಃಸಾಮುದ್ರಿಕದ ಪ್ರಕಾರ ಮೆದುಳಿನ ಮುಂಭಾಗದಲ್ಲಿ ಬುದ್ಧಿವಂತಿಕೆ, ಪಕ್ಕಗಳಲ್ಲಿ ಭಾವನೆಗಳು, ಕಿವಿಯ ಸುತ್ತಲೂ ಶಕ್ತಿ (Energy), ಅದರ ಹಿಂಗಡೆಯಲ್ಲಿ ಗೃಹವಿಚಾರಗಳು ಎಂದು ವಿಭಾಗಿಸಲ್ಪಟ್ಟಿದೆ. ಶಿರಃಸಾಮುದ್ರಿಕ ಶಾಸ್ತ್ರಜ್ಞನು ಒಂದು ತಲೆಯನ್ನು ಅಭ್ಯಸಿಸಲು ತೆಗೆದುಕೊಂಡಾಗ ಈ ಭಾಗಗಳ ಬೆಳವಣಿಗೆ ಹೇಗೆ ಆಗಿದೆ ಎಂಬುದನ್ನು ಮುಖ್ಯವಾಗಿ ಗಮನಿಸಬೇಕು. ( ಚಿತ್ರ ೧ ).



ಚಿತ್ರ ೧.

ತಲೆಯ ಗಾತ್ರವು ಬುದ್ಧಿವಂತಿಕೆಯನ್ನು ಸೂಚಿಸುವುದಿಲ್ಲ. ಸಣ್ಣ ತಲೆಯುಳ್ಳವರನೇಕರು ಹೆಚ್ಚು ಬುದ್ಧಿವಂತರಾಗಿರಬಹುದು. ಹಾಗೆಯೇ ದೊಡ್ಡ ತಲೆಯುಳ್ಳವರು ಶುಂಠರಿರಬಹುದು. ತಲೆಯ ಆಕಾರವು ಮನಸ್ಸಿನ ಶಕ್ತಿ ಎಷ್ಟಿರಬಹುದೆಂಬುದನ್ನು ತೋರಿಸುತ್ತದೆ. ಈ ಶಕ್ತಿ

ಲೂಯಿ ಬಾರ್ ಅವರ ಲೇಖದಿಂದ

ಯಾವ ದಿಕ್ಕಿನಲ್ಲಿದೆ ಎಂಬುದು ಆಯಾ ಭಾಗಗಳನ್ನು ಅಭ್ಯಾಸ ಮಾಡಿದಾಗ ತಿಳಿಯುತ್ತದೆ. ಯಾವ ಭಾಗವು ಹೆಚ್ಚು ಬೆಳೆದಿರುತ್ತದೆಯೊ, ಆ ದಿಕ್ಕಿನಲ್ಲಿ ಮನಸ್ಸಿನ ಶಕ್ತಿ ಹೆಚ್ಚಾಗಿದೆಯೆಂದು ನಿರ್ಧರಿಸಬೇಕು.

ನಿಮ್ಮ ಹಸ್ತವನ್ನು ಬೆರಳುಗಳು ಹಿಂಗಡೆ ಬರುವಂತೆ ನಿಮ್ಮ ತಲೆಯ ಮೇಲಿಟ್ಟುಕೊಳ್ಳಿ. ನಿಮ್ಮ ತಲೆ ಹಿಂದೆ ಎತ್ತರವಾಗಿದೆಯೋ ಅಥವಾ ಮುಂದೆಯೋ? ಹಸ್ತವು ಪೂರ್ತಿಯಾಗಿದ್ದಂತೆ ಕಾಣುತ್ತದೊ ಇಲ್ಲವೇ ಹಸ್ತದಲ್ಲಿ ಜಾಗವಿದ್ದಂತೆ ಕಾಣಿಸುತ್ತದೋ?

ತಲೆಯ ಮುಂಭಾಗ ಎತ್ತರವಾಗಿದ್ದಲ್ಲಿ (ಚಿತ್ರ ೨) ನೀವು ದಯಾಮಯರೂ ಸಹಾನುಭೂತಿಪರರೂ ನಿಃಸ್ವಾರ್ಥಿಗಳೂ ಆಗಿರುತ್ತೀರಿ. ಹಿಂಬದಿಯಲ್ಲಿ ಎತ್ತರವಾದರೆ ಸ್ವಾರ್ಥ ಹೆಚ್ಚಾಗಿರುತ್ತದೆ (ಚಿತ್ರ ೩). ಮಧ್ಯದಲ್ಲಿ ಎತ್ತರವಾಗಿದ್ದರೆ ಅಧಿಕಾರಿಗಳಿಗೆ ಯೋಗ್ಯ ಮರ್ಯಾದೆಯನ್ನು ಕೊಡುವ ಗುಣ ನಿಮಗಿರುತ್ತದೆ. ಅದಿಲ್ಲದೆ ಮಧ್ಯದಲ್ಲಿ ತಗ್ಗಾಗಿದ್ದರೆ, ಅಧಿಕಾರವನ್ನು ನೀವು ಸುಲಭವಾಗಿ ಗೌರವಿಸುವುದಿಲ್ಲ. ಅಂದರೆ ಅಗತ್ಯವಿದ್ದಾಗ ಇಲ್ಲವೇ ಯೋಗ್ಯ ದೃಷ್ಟಾಂತವಿದ್ದಾಗ ಮಾತ್ರ ಅಧಿಕಾರವನ್ನು ಗೌರವಿಸುತ್ತೀರಿ. ಬೇಗ ಮುಖ ಮುರಿಯುವ ಸ್ವಭಾವವೂ ಇರುತ್ತದೆ.



ಚಿತ್ರ ೨.
ಸಹಾನುಭೂತಿ, ದಯೆ, ನಿಃಸ್ವಾರ್ಥ

ತಲೆಯ ಹಿಂಭಾಗ ಹೆಚ್ಚು ಬಾಗಿದ್ದರೆ, ಅದು ತಾಯಿಯದಾಗಿದ್ದರೆ, ನಿಜವಾಗಿಯೂ ಉತ್ತಮವಾದದ್ದು. ಸಾಮಾಜಿಕ ಹಾಗೂ ಗೃಹ ವಿಚಾರಗಳಲ್ಲಿ ಇಂತಹ ಬುರುಡೆಯಿದ್ದವರು ಹೆಚ್ಚು ಆಸ್ಥೆಯುಳ್ಳವರಿರುತ್ತಾರೆ.

ಬುರುಡೆಯ ಹಿಂದೆ ಚಪ್ಪಟೆಯಾಗಿದ್ದರೆ, ಆತ ಲೋಕದಲ್ಲಿನ ಎಲ್ಲ ವಿಚಾರಗಳನ್ನು ತಿಳಿದುಕೊಳ್ಳಲು ಹೊರಡುತ್ತಾನೆ.

ವಿಶಾಲವಾದ ಮುಂಭಾಗವುಳ್ಳ ಬುರುಡೆ, ಹೆಚ್ಚು ಬುದ್ಧಿವಂತಿಕೆ ಹಾಗೂ ವೈವಿಧ್ಯದಿಂದ ಕೂಡಿರುತ್ತದೆ. ಹಾಗೆಯೇ ಹುಬ್ಬಿನ ಮೇಲುಗಡೆ ಪ್ರಶಸ್ತವಾಗಿರುವ ಬುರುಡೆಗೆ ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸುವ ಶಕ್ತಿ ಹೆಚ್ಚಿರುತ್ತದೆ. ಇಬ್ಬದಿಗೂ ಪ್ರಶಸ್ತವಾಗಿದ್ದರೆ ಆ ಮನುಷ್ಯನ ವಿಚಾರ ದೊಡ್ಡ ಪ್ರಶ್ನಾರ್ಥಕ ಚಿನ್ಹೆಯೇ (?). ಮುಂಭಾಗ ಗುಂಡಾಗಿದ್ದರೆ ಒಳ್ಳೆಯ ವಿಚಾರಿಯಾಗುತ್ತಾನೆ.



ಚಿತ್ರ ೩.
ಶುದ್ಧ ಸ್ವಾರ್ಥಿ, ಪ್ರಭಾವಯುತ, ಇತರರಿಗಾಗಿ ಸ್ವಲ್ಪವೂ ಯೋಚನೆ ಇಲ್ಲ.

ಒಬ್ಬ ಮನುಷ್ಯನ ಎರಡು ಕಿವಿಗಳ ಮಧ್ಯದ ಅಂತರವು ಹೆಚ್ಚಿದ್ದರೆ ಆತನು ಶಕ್ತಿಯುತವಾಗಿರುತ್ತಾನೆ; ಹಾಗೂ ಶೀಘ್ರ ಕೋಪಿ. ಚೆನ್ನಾಗಿ ಬೆಳೆದಿರುವ ಹಿಂತಲೆಯುಳ್ಳವರು ಎಲ್ಲರೊಡನೆಯೂ ಸುಲಭವಾಗಿ ಬೆರೆಯುತ್ತಾರೆ.

ತಲೆಯ ಮಧ್ಯ ಎತ್ತರವಿದ್ದರೆ ಅಂತಹ ಮನುಷ್ಯ ಇತರರನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾನೆ.

ನಿಮ್ಮ ಕೂಸಿನ ತಲೆಯು ಅಗಲವಿಲ್ಲದಿದ್ದರೆ, ಆತನ ದೇಹದ ಬಗ್ಗೆ ನೀವು ಹೆಚ್ಚು ಲಕ್ಷಿಸಬೇಕು. ಇಲ್ಲದಿದ್ದರೆ ಆತನಿಗೆ ಈ ಲೋಕದಲ್ಲಿ ಬಾಳುವ ಶಕ್ತಿ ಬರಲಾರದು.

ಆತನ ತಲೆಯ ಹಿಂಬದಿಯ ಮೇಲ್ಭಾಗ ಬಹಳ ಅಗಲವಿದ್ದರೆ (ಚಿತ್ರ ೪) ಆತನು ಅಂಜುಬುರುಕನಾಗುವುದರಿಂದ, ಆತನಿಗೆ ಧೈರ್ಯವಾಗಿ ಯಾವ ಸಮಸ್ಯೆಯನ್ನೂ ಎದುರಿಸಲು ಹೇಳಿಕೊಡಬೇಕು.

ಯಾವುದೇ ಒಂದು ನಿರ್ಧಾರಕ್ಕೆ ಬೇಗ ಬರಲಾರನಾದ್ದರಿಂದ ತಕ್ಷಣ ನಿರ್ಧಾರ ಕೈಕೊಳ್ಳುವ ಮನೋವೃತ್ತಿ ಬೆಳೆಸಲು ಪ್ರಯತ್ನಿಸಬೇಕು.



ಚಿತ್ರ ೪.
ನಿಧಾನಿ, ಅಂಜುಬುರುಕ, ಸಂಶಯ ಪ್ರಕೃತಿ

ಬುರುಡೆಯ ಮಧ್ಯೆ ಎತ್ತರವಾಗಿದ್ದರೆ ಹುಡುಗನು ಎಚ್ಚರಗೇಡಿಯಾಗುತ್ತಾನೆ. (ಚಿತ್ರ ೫) ಅತ್ಯಂತ ಚಟುವಟಿಕೆಯುಳ್ಳವನಾದರೂ ತಾಳ್ಮೆಯೆನ್ನುವುದು ಶೂನ್ಯ. ಅಂತಹವನಿಗೆ ತಾಳ್ಮೆ ಕಲಿಸಬಹುದು. ಎಚ್ಚರವಾಗಿ ಕೆಲಸಮಾಡುವುದನ್ನೂ ಕಲಿಸಲು ಪ್ರಯತ್ನಿಸಿ ತಿದ್ದಬಹುದು.

ಎರಡು ಕಣ್ಣುಗಳ ನಡುವಿನ ಅಂತರ ಹೆಚ್ಚಿದ್ದವರು ಬೇಗನೆ ಯಾವುದನ್ನೂ ಗ್ರಹಿಸುತ್ತಾರೆ. ಅದೇ ಅಂತರ ಕಡಿಮೆಯವರು ಸ್ವಲ್ಪ ಮೊದ್ದು, ಕಲಿಕೆಯಲ್ಲಿ ಹಿಂದೆ.



ಚಿತ್ರ ೫.
ಸ್ವಲ್ಪವೂ ತಾಳ್ಮೆ ಇಲ್ಲ, ಅತ್ಯಂತ ಚಪಲ, ಎಚ್ಚರಗೇಡಿ

ಹೀಗೆ ಶಿರಃಸಾಮುದ್ರಿಕವು ಮೆದುಳು ಹೇಗೆ ಕೆಲಸ ಮಾಡುತ್ತದೆಂಬುದನ್ನು ಸ್ಥೂಲವಾಗಿ ತಿಳಿಸುತ್ತದೆ. ಇದರಿಂದ ಮನಸ್ಸು ಹೇಗಿರಬಹುದೆಂದು ಊಹಿಸಲೂ ಸಾಧ್ಯ. ಜೀವನದಲ್ಲಿ ಇದನ್ನು ಹೆಗ್ಗುರುತಾಗಿ ಇಟ್ಟುಕೊಂಡು ಅದನ್ನು ರೂಪಿಸಿಕೊಳ್ಳಲು ಸಾಧ್ಯವಿದೆ. ಅದಕ್ಕಿಂತ ಹೆಚ್ಚಿನದೇನನ್ನೂ ಮಾಡಲು ಈ ಶಾಸ್ತ್ರ ಸಹಾಯಕಾರಿಯಾಗಿಲ್ಲ.

## ವ್ಯವಹಾರ ಮರ್ಮ

ಸ್ನೇಹಿತನಿಗೆ ಕಾಗದ ಪತ್ರವಿಲ್ಲದೆ ೭೫ ಸಾವಿರ ರೂಪಾಯಿ ಸಾಲ ಕೊಟ್ಟಿದ್ದ ಒಬ್ಬ ಸಜ್ಜನ ಎಷ್ಟು ದಿನವಾದರೂ ಹಣ ಬಾರದ್ದರಿಂದ ಮತ್ತು ಸ್ನೇಹಿತನಿಂದ ಸಾಲದ ಬಗ್ಗೆ ಚಕಾರ ಶಬ್ದವೂ ಬಾರದ್ದರಿಂದ ಕಂಗಾಲಾಗಿ ಸಂಗತಿಯನ್ನು ಇನ್ನೊಬ್ಬ ಮಿತ್ರನ ಮುಂದೆ ಪ್ರಸ್ತಾಪಿಸಿದ.

" ದಾವೆ ಮಾಡಲ್ಲ. ಝುಕ್ಕಿಸಿ ಕೊಡುತ್ತಾನೆ " ಎಂದ ಮಿತ್ರ.

" ಕಾಗದ ಪತ್ರಗಳೇ ಇಲ್ಲದಿರುವಾಗ ದಾವೆ ಮಾಡುವುದು ಹೇಗೆ ? "

ಜಾಣ ಸ್ನೇಹಿತ ವಿಚಾರಿಸಿ ಹೇಳಿದ : " ಹಾಗಿದ್ದರೆ ಅವನಿಗೊಂದು ಪತ್ರ ಬರೆ. ನೀನು ನನ್ನಿಂದ ತೆಗೆದುಕೊಂಡ ೭೫ ಸಾವಿರ ರೂಪಾಯಿಗಳನ್ನು ಕೂಡಲೆ ತಿರುಗಿ ಕೊಡು ಎಂದು ಅದರಲ್ಲಿ ಹೇಳು. "

" ಛೇ ಛೇ. ಸುಳ್ಳು ಹೇಳುವುದು ಬೇಡ. ನಾನು ಅವನಿಗೆ ಬರೇ ೨೫ ಸಾವಿರ ಕೊಟ್ಟಿದ್ದೇನೆ. "

" ನಿಜ. ೭೫ ಸಾವಿರ ಎಂದು ಬರೆದಾಗ ಆತ ನಾನು ತೆಗೆದುಕೊಂಡದ್ದು ೭೫ ಅಲ್ಲ ೨೫ ಸಾವಿರ ಎಂದು ತಿರುಗಿ ಬರೆಯುತ್ತಾನೆ. ಅದರ ಮೇಲಿನಿಂದ ದಾವೆ ಮಾಡಬಹುದು. "

ಸ್ನೇಹಿತನ ಮಾತಿಗೆ ಸಜ್ಜನ ತಲೆದೂಗಿದ.

ಅವರಿಗಾಗಿ ದೇಶ ವರ್ಷಕ್ಕೆ ೨೫೦ ಲಕ್ಷ ರೂಪಾಯಿ
ವೆಚ್ಚ ಮಾಡುತ್ತಿದೆ

# ಅಮೇರಿಕದ ಅಧ್ಯಕ್ಷರ ವೈಭವ

ಶ್ರೀ ಜಿ. ಸುಶೀಲೇಂದ್ರ

ಅಮೇರಿಕಾದ ಅಧ್ಯಕ್ಷರಾದ ಐಸೆನ್‌ಹೋವರ್ ರವರಿಂದ ಅಮೇರಿಕಾ ದೇಶಕ್ಕೆ ಒಂದು ವರ್ಷಕ್ಕೆ ಇಪ್ಪತ್ತು ಲಕ್ಷ ಪೌಂಡುಗಳು ಖರ್ಚಾಗುತ್ತವೆ ಎಂದು ಚಿಕಾಗೊ ಟ್ರಿಬ್ಯೂನ್ ಪತ್ರಿಕೆಯ ವಾಷಿಂಗ್‌ಟನ್ ಬ್ಯೂರೋವಿನ ಮುಖ್ಯಸ್ಥರಾದ ವಾಲ್ಟರ್ ಟ್ರೋಹನ್ ಲೆಕ್ಕಹಾಕಿದ್ದಾರೆ.

ಅಮೇರಿಕಾದ ಅಧ್ಯಕ್ಷರು ಜೀವನಮಾಡುವಷ್ಟು ವೈಭವದಿಂದ ಪ್ರಪಂಚದಲ್ಲಿ ಇನ್ನು ಯಾವ ವ್ಯಕ್ತಿಯೂ ಜೀವನ ಮಾಡುವುದಿಲ್ಲ ಎಂದು ವಾಲ್ಟರ್ ಟ್ರೋಹನ್ ಹೇಳುತ್ತಾರೆ. ಒಂದು ಸಮಯ, ಐಸೆನ್‌ಹೋವರ್ ಎಷ್ಟು ವೈಭವದಿಂದ ಜೀವನ ನಡೆಸುತ್ತಾರೋ ಅಷ್ಟೇ ವೈಭವದಿಂದ ಜೀವನ ನಡೆಸಲು ಕೆಲವು ಶ್ರೀಮಂತರಿಗೆ ಮಾತ್ರ ಸಾಧ್ಯವಾದರೂ ಅಧ್ಯಕ್ಷರಿಗೆ ಸಿಗುವಷ್ಟು ಮೇಲಿನ ಆದಾಯ ಇನ್ನು ಯಾರಿಗೂ ಸಿಗುವುದಿಲ್ಲ.

ಅಧ್ಯಕ್ಷರಿಗಾಗಿ ಒಂದು ವರ್ಷಕ್ಕೆ, ಅಮೇರಿಕಕ್ಕೆ ೫೦ ಲಕ್ಷ ಡಾಲರ್ ಖರ್ಚಾಗುತ್ತದೆ. ಸಂಬಳದ ರೂಪದಲ್ಲಿ, ಭತ್ತೆ ರೂಪದಲ್ಲಿ ಹಾಗೂ ಇನ್ನೂ ಅನೇಕ ಮೇಲು ಆದಾಯದ ರೂಪದಲ್ಲಿ ಅಧ್ಯಕ್ಷರಿಗೆ ವರ್ಷಕ್ಕೆ ೩,೫೦,೦೦೦ ಡಾಲರ್ ದೊರೆಯುತ್ತದೆ. ಇದರ ಜೊತೆಗೆ ಇನ್ನು ಯಾವ ಪ್ರಜೆಗೂ ಸಿಗದಷ್ಟು ಸೌಕರ್ಯ ಸೇವೆ ಸಲ್ಲಿಸಲ್ಪಡುತ್ತದೆ. (೧ ಡಾಲರಿಗೆ ಸುಮಾರು ೫ ರೂಪಾಯಿ).

ಇದಕ್ಕೋಸ್ಕರವೇ ಅನೇಕರು 'ಶ್ವೇತಭವನ' ( White House )ದಲ್ಲಿ ವಾಸಿಸುವ ಕನಸು ಕಾಣುತ್ತಾರೆ; ಅಧ್ಯಕ್ಷರಾಗಲು ಎಷ್ಟು ಸಲ ಚುನಾವಣೆಯಲ್ಲಿ ಸೋತರೂ ಪುನಃ ಸ್ಪರ್ಧಿಸಲು ಸಿದ್ಧರಾಗುತ್ತಾರೆ.

ಇಂದು ಬರೀ ಅಧ್ಯಕ್ಷರಿಗಾಗಿಯೇ ೫೦ ಲಕ್ಷ ಡಾಲರ್ ಖರ್ಚಾದರೆ, ಅಮೇರಿಕಾದ ಎರಡನೆಯ ಅಧ್ಯಕ್ಷ ಜಾನ್ ಆ್ಯಡಮ್ಸ್‌ರವರ ಕಾಲದಲ್ಲಿ, ೧೫೦ ವರ್ಷ ಹಿಂದೆ, ಪೂರ್ತಿ ಸರ್ಕಾರವನ್ನು ನಡೆಸುವುದಕ್ಕೇ ೫೦ ಲಕ್ಷ ಡಾಲರ್‌ಗಿಂತ ಕಮ್ಮಿ ಖರ್ಚಾಗುತ್ತಿತ್ತು. ಆ್ಯಡಮ್ಸ್‌ರವರಿಗೆ ಇದ್ದುದು ಒಬ್ಬನೇ ಒಬ್ಬ ಕಾರ್ಯದರ್ಶಿ.

ಈಗ ಶ್ವೇತಭವನ (ಅಮೇರಿಕದ ಅಧ್ಯಕ್ಷರ ವಸತಿ) ದಲ್ಲಿ ಅಧಿಕಾರಿಗಳ ಸಂಖ್ಯೆಯೇ ೨೭೦ ಕ್ಕೂ ಮೀರಿದೆ. ಅವರಿಗೆ ಸಂಬಳಸಾರಿಗೆ ಕೊಡುವುದಕ್ಕೇನೇ ೨೦ ಲಕ್ಷ ಡಾಲರ್ ಬೇಕಾಗುತ್ತದೆ. ಇದರ ಜೊತೆಗೆ 'ಶ್ವೇತಭವನ'ದ ಮನೆಗೆ ಸಂಬಂಧಪಟ್ಟಂತೆ ೭೨ ಜನ ಕೆಲಸಗಾರರಿದ್ದಾರೆ. ಇಷ್ಟೇ ಅಲ್ಲದೆ ಅದಕ್ಕೇ ಬೇರೆ ಪೋಲೀಸಿನವರೂ ಗುಪ್ತಚಾರರೂ ಇದ್ದಾರೆ. ಇವರೆಲ್ಲರಿಂದ ವರ್ಷಕ್ಕೆ ೧೦ ಲಕ್ಷ ಡಾಲರ್ ಖರ್ಚಾಗುತ್ತದೆ.

ಅಧ್ಯಕ್ಷರಿಗೆ ಮೇಲಿನ ಆದಾಯ, ವಿಶೇಷ ಅಧಿಕಾರಗಳಿಂದ ಬರುವ ಆದಾಯ ಅವರಿಗೆ ಕೊಡುವ ಸಂಬಳಕ್ಕಿಂತ ಹೆಚ್ಚಾಗಿದೆ. ಒಂದು ವರ್ಷಕ್ಕೆ ಅಧ್ಯಕ್ಷರ ಸಂಬಳ ೧,೦೦,೦೦೦ ಡಾಲರ್‌ಗಳು. ಅದು ಚೆಕ್‌ರೂಪದಲ್ಲಿ ಪ್ರತಿತಿಂಗಳೂ ಬರುತ್ತದೆ.

ಅಧ್ಯಕ್ಷರು ಸ್ವಂತ ಆದಾಯದ ಮೇಲೆ,

ಸಂಬಳದ ಮೇಲೆ ಆದಾಯಕರ ಕೊಡಬೇಕಾಗಿರುತ್ತದೆ. ಅಧ್ಯಕ್ಷರಾಗುವುದಕ್ಕೆ ಮುಂಚೆ ಐಸೆನ್‌ಹೋವರ್‌ರವರಿಗೆ, ಅವರ ಪದವಿಗೆ ತಕ್ಕಂತೆ ಸಂಬಳ ದೊರೆಯುತ್ತಿತ್ತು. ಅನಂತರ ಅವರು 'ಯುದ್ಧದ ನೆನಪುಗಳು' ಪುಸ್ತಕವನ್ನು ಪ್ರಕಟಿಸಿದ ಮೇಲೆ, ಆದಾಯ ಬರುವುದು ಜಾಸ್ತಿಯಾಯಿತು. ಅದೆಲ್ಲವನ್ನೂ ಅನೇಕ ಸ್ನೇಹಿತರ ಸಲಹೆಯಂತೆ ಬೇರೆ ಬೇರೆ ಉದ್ಯಮಗಳಲ್ಲಿ ಬಂಡವಾಳವಾಗಿ ಹಾಕಿದ್ದಾರೆ.

ಅಧ್ಯಕ್ಷರಿಗೆ ಸಂಬಳದ ಜೊತೆಗೆ ಒಂದು ವರ್ಷಕ್ಕೆ ಖರ್ಚಿನ ಭತ್ತೆ ಎಂಬುದಾಗಿ ೫೦,೦೦೦ ಡಾಲರ್ ಮತ್ತು ಪ್ರಯಾಣ ಭತ್ತೆ ೪೦,೦೦೦ ಡಾಲರ್ ದೊರೆಯುತ್ತದೆ.

ಅಧ್ಯಕ್ಷರೆಲ್ಲಿಯಾದರೂ ಹೋಗಬೇಕೆಂದರೆ ನೂರಾರು ವಿಮಾನಗಳು, ಮೋಟಾರ್ ಕಾರ್‌ಗಳು ಮತ್ತು ಇತರ ವಾಹನಗಳು ಬಂದು ನಿಲ್ಲುತ್ತವೆ. ಅಷ್ಟರಲ್ಲಿ ಯಾವುದನ್ನು ಬೇಕಾದರೂ ಅಧ್ಯಕ್ಷರು ಚುನಾಯಿಸಬಹುದು. ಅಧ್ಯಕ್ಷರು ಯಾವಾಗಲೂ ಪ್ರಯಾಣ ಮಾಡುವುದು ೩೦ ಲಕ್ಷ ಡಾಲರ್ ಬೆಲೆ ಬಾಳುವ ಕೊಲಂಬೈನ್ III ವಿಮಾನದಲ್ಲಿ.

ಅಧ್ಯಕ್ಷರ ಸೇವೆಗಾಗಿ ಅನೇಕ ಇತರ ವಿಮಾನಗಳೂ ಇಪ್ಪತ್ತು ಮೋಟಾರ್ ಕಾರುಗಳೂ ಒಂದು ಹೆಲಿಕಾಪ್ಟರ್ ವಿಮಾನ, ಒಂದು ಘಾರ್ಪ್ಟಿ ಕಾರ್, ಒಂದು ವಿಲಾಸದ ಹಡಗು, ಒಂದು ಸ್ವಂತ ರೈಲ್ವೆಗಾಡಿ ಸಿದ್ಧವಾಗಿರುತ್ತದೆ. ಬರೀ ವಿಮಾನಗಳನ್ನು ಯಾವಾಗಲೂ ಸರಿಯಾದ ಸ್ಥಿತಿಯಲ್ಲಿ ಇಟ್ಟಿರುವುದಕ್ಕೆ ಮತ್ತು ಅದನ್ನು ನಡೆಸುವ ಸಿಬ್ಬಂದಿಗೆ ವರ್ಷ ಒಂದಕ್ಕೆ ೩,೫೦,೦೦೦ ಡಾಲರ್ ವೆಚ್ಚವಾಗುತ್ತದೆ. ಅವರ ಹಡಗುಗಳನ್ನು ಸರಿಯಾಗಿ ಇಟ್ಟಿರುವುದಕ್ಕೆ ಮತ್ತು ಅದರ ಸಿಬ್ಬಂದಿಗೆ ಸಂಬಳ ಎಲ್ಲಾ ಸೇರಿ ವರ್ಷಕ್ಕೆ ೪೦,೦೦೦ ಡಾಲರ್‌ಗಿಂತ ಹೆಚ್ಚು ಖರ್ಚಾಗುತ್ತದೆ. ಶ್ವೇತಭವನದ ಕಾರುಗಳಿಗೆ ೫೦,೦೦೦ ಡಾಲರ್ ಹೆಚ್ಚು ಖರ್ಚಾಗುತ್ತದೆ.

ಅಧ್ಯಕ್ಷರಿಗೆ ಇನ್ನು ಯಾವುದಾದರೂ ವಿಮಾನ ಬೇಕಾದರೆ, ವಿಮಾನ ದಳದ ನಾಯಕನಿಗೆ ಹೇಳಿ ಕಳಿಸುತ್ತಾರೆ. ಹಡಗಿನಲ್ಲಿ ಪ್ರಯಾಣ ಮಾಡಬೇಕೆಂದು ಅನಿಸಿದರೆ ನೌಕಾದಳದ ನಾಯಕನಿಗೆ ಹೇಳಿ ಕಳಿಸುತ್ತಾರೆ.

ಭಾರತದ ಅಧ್ಯಕ್ಷರ ವಾರ್ಷಿಕ ಸಂಬಳ ರೂ. ೬೨,೦೦೦. ಇದಲ್ಲದೆ ವೆಚ್ಚದ ಭತ್ತೆಯೆಂದು ರೂ. ೪೫,೦೦೦ ಅವರಿಗೆ ದೊರೆಯುತ್ತದೆ.

ಅಧ್ಯಕ್ಷರ ಪ್ರವಾಸವೆಚ್ಚ ೧೯೫೪-೫೫ ರಲ್ಲಿ ರೂ. ೯೪,೩೬೩ ಇತ್ತು; ಅದು ೧೯೫೬-೫೭ ರಲ್ಲಿ ರೂ. ೧,೬೨,೦೦೦ ಕ್ಕೆ ಏರಿತು. ಹೀಗೆ ಸಂಬಳ, ವೆಚ್ಚದ ಭತ್ತೆ ಮತ್ತು ಪ್ರವಾಸ ವೆಚ್ಚವೆಂದು ೧೯೫೬-೫೭ ರಲ್ಲಿ ದೇಶವು ಅಧ್ಯಕ್ಷರಿಗಾಗಿ ಪ್ರತ್ಯಕ್ಷ ಸುಮಾರು ರೂ. ೨,೩೪,೨೦೦ ವೆಚ್ಚ ಮಾಡಿದಂತಾಯಿತು.

ಅಧ್ಯಕ್ಷರ ಕಚೇರಿಯಲ್ಲಿರುವ ಅಧಿಕಾರಿಗಳ ಮತ್ತು ಸೇವಕರ ಸಂಬಳ ೧೯೫೬-೫೭ ರಲ್ಲಿ ಸುಮಾರು ರೂ. ೧,೫೬,೦೦೦ ದಷ್ಟಿತ್ತು. ಅಧ್ಯಕ್ಷರ ನಿವಾಸವಾದ ರಾಷ್ಟ್ರಪತಿ ಭವನದ ಅಧಿಕಾರಿಗಳ ಸಂಬಳ ಭತ್ತೆ ಮೊದಲಾದ್ದು ಸೇರಿ ೧೯೫೬-೫೭ ರಲ್ಲಿ ರೂ. ೩,೪೪,೫೦೦ ರಷ್ಟಾಗಿತ್ತು. ಅಧ್ಯಕ್ಷರ ಮಿಲಿಟರಿ ಸೆಕ್ರೆಟರಿ, ಎ. ಡಿ. ಸಿ. ಅಂಗರಕ್ಷಕರೇ ಮೊದಲಾದವರ ಸಂಬಳವೇ ೧೯೫೬-೫೭ ರಲ್ಲಿ ರೂ. ೩,೯೫,೬೯೪ ಇತ್ತು. ಅವರ ಇತರ ವೆಚ್ಚಗಳನ್ನೂ ಸೇರಿಸಿದರೆ ಈ ಶಾಖೆಯ ವೆಚ್ಚ ೧೯೫೬-೫೭ ರಲ್ಲಿ ರೂ. ೧೨,೦೭,೩೦೦ ರಷ್ಟಾಯಿತು.

ಅಂತೂ ಭಾರತವು ತನ್ನ ರಾಷ್ಟ್ರಾಧ್ಯಕ್ಷರಿಗಾಗಿ ಮಾಡುವ ವೆಚ್ಚ ಇಂದು ಸುಮಾರು ರೂ. ೧೭,೮೭,೦೦೦ ದಷ್ಟಾಗಿದೆ. ಇದು ಇನ್ನೂ ಏರುತ್ತಿದೆ.

ಅಧ್ಯಕ್ಷರು ವಾಸಿಸುವ ಮನೆ 'ಶ್ವೇತ ಭವನ' ವಂತೂ ಬಹು ಪ್ರಖ್ಯಾತಿಯಾದದ್ದು. ಹದಿನೆಂಟು ಎಕರೆ ಜಾಗದಲ್ಲಿ ಈ ಶ್ವೇತ ಭವನವಿದೆ. ಈ ಜಾಗಕ್ಕೆ ಏನಿಲ್ಲ ಅಂದರೂ ೨೫೦ ಲಕ್ಷ ಡಾಲರ್ ಬೆಲೆಯಾಗುತ್ತದೆ. ಆ ಜಾಗದಲ್ಲಿ ಶ್ವೇತಭವನದ ಜೊತೆಗೆ ಇನ್ನೂ ಅನೇಕ ಅಧಿಕಾರಿಗಳ ಬಂಗಲೆಗಳಿವೆ. ಈ ಬಂಗಲೆಗಳನ್ನು ಸರಿಯಾಗಿ ಇಟ್ಟುಕೊಂಡಿರುವುದಕ್ಕೆ ಮತ್ತು ಅಲ್ಲಿನ ಜವಾನರ ಸಂಬಳ ಸೇರಿ ವರ್ಷಕ್ಕೆ ೪೦,೦೦,೦೦೦ ಡಾಲರಿಗಿಂತಲೂ ಹೆಚ್ಚು ಖರ್ಚಾಗುತ್ತದೆ.

ಅಧ್ಯಕ್ಷರಿಗೆ ಬೇಕಾಗುವುದೆಲ್ಲಾ ಬಿಟ್ಟಿಯಾಗಿ ಬರುತ್ತದೆ ಎಂದು ಯಾರೂ ಭಾವಿಸಬೇಡಿ. ಐಸೆನ್‌ಹೋವರ್‌ರವರಿಗೆ, ಅವರ ಪತ್ನಿಗೆ, ಹಾಗು ಶ್ವೇತಭವನದಲ್ಲಿರುವ ಜವಾನರ ಆಹಾರಕ್ಕೆ ಅವರು ಹಣ ಕೊಡಬೇಕು. ಅವರ ಮನೆಗೆ ಯಾರಾದರೂ ಅತಿಥಿಗಳು (ಸರ್ಕಾರದ ಅತಿಥಿಗಳನ್ನು ಬಿಟ್ಟು) ಬಂದರೆ ಅವರ ಖರ್ಚನ್ನು ಅಧ್ಯಕ್ಷರೇ ಜೇಬಿನಿಂದ ಕೊಡಬೇಕು. ಇಷ್ಟೂ ಸಾಲದು ಎಂದು ಐಸೆನ್‌ಹೋವರ್ ಇಬ್ಬರು ಜವಾನರನ್ನು ಸ್ವಂತ ಖರ್ಚಿನಿಂದ ಇಟ್ಟುಕೊಂಡಿದ್ದಾರೆ; ತಮ್ಮ ಸ್ವಂತ ವಿಷಯಕ್ಕೆ ಫೋನ್ ಉಪಯೋಗಿಸಿದರೆ, ಅದಕ್ಕೆ ಹಣ ಕೊಡಬೇಕು; ಲಾಂಡ್ರಿಗೆ ಬಟ್ಟೆ ಹಾಕಿದರೆ ಅದಕ್ಕೆ ಹಣ ಕೊಡಬೇಕು.

ಐಸೆನ್‌ಹೋವರ್ ಅಧ್ಯಕ್ಷ ಪದವಿಯಿಂದ ನಿವೃತ್ತಿ ಹೊಂದಿದರೂ ಅವರು ಚಕ್ರವರ್ತಿ ಭೋಗ ಅನುಭವಿಸುತ್ತಾರೆ. ಕಾಂಗ್ರೆಸ್‌ನಲ್ಲಿ ಒಂದು ವಿಧೇಯಕ ಚರ್ಚೆಯಲ್ಲಿದೆ. ಅದು ಅಂಗೀಕರಿಸಲ್ಪಟ್ಟರೆ, ಅದರಿಂದ ನಿವೃತ್ತ ಅಧ್ಯಕ್ಷರುಗಳಿಗೆ ವರ್ಷಕ್ಕೆ ೨೨,೫೦೦ ಡಾಲರ್ ವಿರಾಮ ವೇತನ ದೊರೆಯುತ್ತದೆ; ಒಂದು ಕಚೇರಿಯನ್ನು ಪುಕ್ಕಟೆಯಾಗಿ ಇಟ್ಟುಕೊಳ್ಳಬಹುದು; ವರ್ಷಕ್ಕೆ ೫೭,೦೦೦ ಡಾಲರ್ ಸಂಬಳ ಕೊಡುವಷ್ಟು ಸಿಬ್ಬಂದಿಯನ್ನು ನೇಮಿಸಿಕೊಳ್ಳಬಹುದು. ಇದರ ಜೊತೆಗೆ ಎಲ್ಲಿ ಬೇಕಾದರೂ ಅಂಚೆ ಇಲಾಖೆಯವರಿಗೆ ಹಣ ಕೊಡದೆ ಕಾಗದಗಳನ್ನು ಬರೆಯಬಹುದು.



## ವಿಶ್ವಾಸ

ಇತರರನ್ನು ನಂಬು, ಅಂದರೆ ಇತರರು ನಿನ್ನನ್ನು ನಂಬುವರು. ಅವರನ್ನು ಮಹತ್ತರವಾಗಿ ನಂಬು, ಅಂದರೆ ಅವರು ನಿಜವಾಗಿ ತಮ್ಮೊಳಗಿನ ಮಹಿಮೆಯನ್ನು ಪ್ರದರ್ಶಿಸುವರು.

— ಎಮರ್ಸನ್

ಕಂಡಕಂಡವರನ್ನೆಲ್ಲ ಒಳ್ಳೆಯವರೆಂದು ಹೇಳುವ ಜನರನ್ನು ಎಂದೂ ನಂಬಬೇಡ.

— ಸಿ. ಕಾಲಿನ್ಸ್

ಒಮ್ಮೊಮ್ಮೆ ನಂಬಿ ಕೆಟ್ಟರೂ ಚಿಂತೆಯಿಲ್ಲ, ನಂಬದಿರುವುದಕ್ಕಿಂತಲೂ ನಂಬಿ ಕೆಡುವುದು ಲೇಸು.

— ಜಾನ್ಸನ್

ಪ್ರೀತಿ ಪಾತ್ರರಾಗುವುದಕ್ಕಿಂತಲೂ ನಂಬಿಕೆಗೆ ಪಾತ್ರರಾಗುವುದು ಹೆಚ್ಚಿನ ಯೋಗ್ಯತೆ.

— ಜಾರ್ಜ್ ಮೆಕ್ಡೊನಾಲ್ಡ್

**ಕೆಲವೊಮ್ಮೆ ಡಾಕ್ಟರರು ವಿಚಿತ್ರ ಉಪಕರಣಗಳಿಂದ ನಮ್ಮನ್ನು ಪರೀಕ್ಷಿಸುತ್ತಾರೆ. ಅವುಗಳ ರಹಸ್ಯ ಇಲ್ಲಿದೆ**

# ಡಾಕ್ಟರರು ಉಪಯೋಗಿಸುವ ಯಕ್ಷಿಣಿಗಳು!

**ಗಂಗಾಧರ ಭಟ್ಟ**

ಏನಾದರೂ ಅಸ್ವಸ್ಥವಾಗಿದೆಯೆಂದು ನೀವು ಡಾಕ್ಟರರ ಹತ್ತಿರ ಹೋದರೆ ಅವರು ಮೊಟ್ಟಮೊದಲು ತಮ್ಮ ಕೊರಳಿಗೆ ಮಾಲೆ ಹಾಕಿಕೊಂಡ ಕವಲು ರಬ್ಬರು ನಳಿಗೆಯ ಕವಲುಗಳ ತುದಿಯನ್ನು ಕಿವಿಗೇರಿಸಿ ನಳಿಗೆಯ ಇನ್ನೊಂದು ತುದಿಯನ್ನು ನಿಮ್ಮ ಎದೆಗೋ ಬೆನ್ನಿಗೋ ಹಚ್ಚಿ ನೋಡುತ್ತಾರೆ. ಇದರ ರಹಸ್ಯವೇನು? ನಿಮ್ಮ ಒಳಗಿನ ಯಾವ ಗುಟ್ಟನ್ನು ಡಾಕ್ಟರರಿಗೆ ಹೇಳುತ್ತದೆ ಈ ಯಕ್ಷಿಣಿ?



ಡಾಕ್ಟರರ ಕೊರಳಿಗೆ ಸದಾ ಮಾಲೆ ಬಿದ್ದಿರುವ ಈ ರಬ್ಬರಿನ ಉಪಕರಣಕ್ಕೆ "ಸ್ಟೆಥೋಸ್ಕೋಪ್" ಎಂದು ಹೆಸರು. ಅದು ಡಾಕ್ಟರರಿಗೆ ನಿಮ್ಮ ಹಲವು ಗುಟ್ಟುಗಳನ್ನು ಹೇಳುತ್ತದೆ. ೧೮೧೬ರಲ್ಲಿ ಡಾ. ರೆನೆ ಥಿಯೋಫೈಲ್ ಲೀನೆಕ್ ಎಂಬವನು ಮೊದಲು ನಿರ್ಮಿಸಿದ ಸ್ಟೆಥೋಸ್ಕೋಪಿನ ಕಥೆಯ ಹಿಂದೆ ಒಂದು ಚಿಕ್ಕ ಸ್ವಾರಸ್ಯ ಘಟನೆ ಅಡಕವಾಗಿದೆ. ಎದೆಯೊಳಗಿನ ಆಗುಹೋಗುಗಳನ್ನು ಪರೀಕ್ಷಿಸಬೇಕಾದರೆ ಸ್ಟೆಥೋಸ್ಕೋಪು ಹುಟ್ಟುವ ಮೊದಲು ಡಾಕ್ಟರರು ತಮ್ಮ ಕಿವಿಯನ್ನೇ ಎದೆಗೆ ಹಚ್ಚಿ ಆಲಿಸಬೇಕಾಗುತ್ತಿತ್ತು. ಒಂದು ದಿನ ಡಾ ಲೀನೆಕ್ಕನಿಗೆ ಲಜ್ಜಾವತಿ ತರುಣಿಯೊಬ್ಬಳನ್ನು ಪರೀಕ್ಷಿಸುವ ಅಗತ್ಯವುಂಟಾಯಿತು. "ಎದೆಯ ಮೇಲಿನ ಬಟ್ಟೆ ತೆಗೆ" ಎಂದು ಆತ ರೂಢಿಯಂತೆ ಅವಳಿಗೆ ಹೇಳಿದ. ಅವಳು ಈ "ಅನುಚಿತ ಕಾರ್ಯಕ್ಕೆ" ಒಪ್ಪದೆ ರಂಪಾಟ ಮಾಡಿಬಿಟ್ಟಳು.

ಲೀನೆಕ್ಕನಿಗೆ ಆ ಕ್ಷಣದಲ್ಲಿ ಒಂದುಪಾಯ

ವಿವಿಧ ಮೂಲಗಳಿಂದ

ಹೊಳೆಯಿತು. ಅಲ್ಲಿಯೇ ಇದ್ದ ಒಂದು ಕಾಗದವನ್ನು ಸುರುಳಿ ಸುತ್ತಿ ಶಂಕ್ವಾಕಾರದ ನಳಿಗೆಯಂತೆ ಮಾಡಿ ಅದರ ಒಂದು ತುದಿಯನ್ನು ತರುಣಿಯ ಎದೆಗಿಟ್ಟು ಇನ್ನೊಂದು ತುದಿಯನ್ನು ತನ್ನ ಕಿವಿಗೆ ತಗಲಿಸಿಕೊಂಡು ಆಲಿಸತೊಡಗಿದ. ಹೀಗೆ ಹುಟ್ಟಿತು ಸ್ಟೆಥೋಸ್ಕೋಪ್.

ಸ್ಟೆಥೋಸ್ಕೋಪಿನಿಂದ ಡಾಕ್ಟರರು ನಿಮ್ಮ ಹೃದಯದ ಅವಸ್ಥೆಯನ್ನು ಊಹಿಸಬಲ್ಲರು. ಲುಬ್, ಡುಬ್-ಲುಬ್, ಡುಬ್-ಲುಬ್, ಡುಬ್—ಹೀಗೆ ಸಾಮಾನ್ಯವಾಗಿ ಹೃದಯದ ಬಡಿತದ ಶಬ್ದ ಇರುತ್ತದೆ. ಈ ಶಬ್ದ ತೀವ್ರವಾಗಿದ್ದರೆ ನಿಮ್ಮ ಹೃದಯಕೋಶ ಸರಿಯಾಗಿದೆ. ಬದಲಿಗೆ ಅದು ಮಂದವಾಗಿ ಡುಂ ಡುಂ ಎನ್ನುತ್ತಿದ್ದರೆ ಅದು ಡಾಕ್ಟರರನ್ನು ಚಿಂತೆಗೊಳಗು ಮಾಡುತ್ತದೆ. "ಸ್ವಿಶ್" ಎಂಬ ಸದ್ದು ಹೊರಟರೆ ಅದೂ ಅಪಶಕುನವೆಂದು ಡಾಕ್ಟರರು ಭಾವಿಸುತ್ತಾರೆ. ನಿಮ್ಮ ಹೃದಯದ ಯಾವುದೋ ಪಟಲವು ಜಖಂ ಆಗಿ, ಹೃದಯದಿಂದ ಹೊರತಳ್ಳಲ್ಪಟ್ಟ ಶುದ್ಧ ರಕ್ತವು ತಿರುಗಿ ಹೃದಯದೊಳಗೆ ನುಗ್ಗಿ ಬರುತ್ತಿದೆಯೆಂದು ಡಾಕ್ಟರರಿಗೆ ಅದರಿಂದ ಗೊತ್ತಾಗುತ್ತದೆ. ಬೇರೆ ಬೇರೆ ಹೃದಯ ರೋಗಗಳಿಂದ ಬೇರೆ ಬೇರೆ ತರದ ಶಬ್ದ ಬರುತ್ತಿದೆಂದು ವಿಜ್ಞಾನವು ಗೊತ್ತು ಹಚ್ಚಿದೆ

ಸ್ಟೆಥೋಸ್ಕೋಪು ನಿಮ್ಮ ಶ್ವಾಸಕೋಶಗಳ ಅವಸ್ಥೆಯನ್ನೂ ನಿವೇದಿಸುತ್ತದೆ. ಶ್ವಾಸಕೋಶಗಳು ಸರಿಯಾಗಿದ್ದರೆ ಮಂದ್ರವಾದ ಪಿಸುಗುಟ್ಟಿದಂಥ ಸದ್ದು ಅವುಗಳಿಂದ ಹೊರಡುತ್ತದೆ. ನ್ಯುಮೋನಿಯ ಮೊದಲಾದ ರೋಗಗಳಿಂದ ಪೀಡಿತವಾಗಿದ್ದರೆ, ಅಥವಾ ಹೃದಯಕೋಶ ಉಬ್ಬಿ ಅದು ಶ್ವಾಸಕೋಶಗಳನ್ನು ಒತ್ತುತ್ತಿದ್ದರೆ ಬರುವ ಸ್ವರ ತೀವ್ರವಾಗಿರುತ್ತದೆ. ಖಾಸ ಶ್ವಾಸ (ಅಸ್ತಮಾ) ಆಗಿದ್ದರೆ ಶಿಳ್ಳಿನಂಥ ಶಬ್ದ ಹೊರಡುತ್ತದೆ.

ರೋಗಿಗೆ ರಕ್ತದ ಒತ್ತಡವಾಗಿದೆಯೆಂಬ ಸಂಶಯ ಡಾಕ್ಟರನಿಗೆ ಬಂದರೆ ಆತ ತನ್ನ "ಸ್ಫಿಗ್ಮೋಮನೋಮೀಟರ"ನ್ನು ಹೊರತೆಗೆಯುತ್ತಾನೆ. ಅದು ರಕ್ತದ ಒತ್ತಡ ಎಷ್ಟಿದೆಯೆಂದು ತೋರಿಸುವ ಉಪಕರಣ.

ಪಂಪುಗಳಲ್ಲಿ ನೀರು ಹರಿಯಲು ಒತ್ತಡ ಬೇಕಾಗುವಂತೆ ಶರೀರದಲ್ಲಿ ರಕ್ತ ಸಂಚಾರವಾಗಬೇಕಾದರೂ ಒತ್ತಡ ಬೇಕಾಗುತ್ತದೆ. ಈ ಒತ್ತಡವನ್ನು ಹೃದಯವು ಒದಗಿಸುತ್ತದೆ.

ರಕ್ತದ ಒತ್ತಡದ ವಿಚಾರ ೧೭೩೩ ರ ವರೆಗೂ ಗೊತ್ತಿರಲಿಲ್ಲ. ಆ ವರ್ಷ ಸ್ಟೀಫನ್ ಹೇಲ್ಸನೆಂಬ ಪಾದ್ರಿ, ಕಸಾಯಿಖಾನೆಗೆ ಒಯ್ಯಲ್ಪಡುತ್ತಿದ್ದ ಒಂದು ಕುರಿಯ ಕಂಠದ ಶುದ್ಧ ರಕ್ತನಾಳವನ್ನು ಕತ್ತರಿಸಿ ಅದರಲ್ಲಿ ಉದ್ದವಾದ ಒಂದು ಗಾಜಿನ ನಳಿಗೆಯನ್ನು ತುರುಕಿದನು. ರಕ್ತ ಒಂಭತ್ತೂವರೆ ಅಡಿಯಷ್ಟು ಮೇಲೇರಿತು! ಅಷ್ಟು ಬಲವಾಗಿದೆ ರಕ್ತದ ಒತ್ತಡ. ಈ ರಕ್ತದ ಒತ್ತಡವನ್ನೆಲ್ಲ ಹೃದಯವು ತನ್ನ ಕುಗ್ಗುವಿಕೆ ಹಿಗ್ಗುವಿಕೆಗಳಿಂದ ಒದಗಿಸುತ್ತದೆ. ಇಂದಿನ ರಕ್ತದ ಒತ್ತಡ ಮಾಪಕವನ್ನು ೧೮೮೭ ರಲ್ಲಿ ಒಬ್ಬ ಜರ್ಮನ್ ಸಂಶೋಧಕನು ನಿರ್ಮಿಸಿದನು.

ರಕ್ತದ ಒತ್ತಡವನ್ನಳೆಯುವ ಉಪಕರಣವೂ ವಾತಾವರಣದ ಒತ್ತಡವನ್ನು ಅಳೆಯುವ ಉಪಕರಣದಂತೆ ಪಾರಜವುಳ್ಳ ನಳಿಗೆಯನ್ನು ಉಪಯೋಗಿಸುತ್ತದೆ. ಈ ನಳಿಗೆಗೆ ಒತ್ತಡದ ಪ್ರಮಾಣವನ್ನು ಸೂಚಿಸುವ ಗುರುತುಗಳಿವೆ. ಡಾಕ್ಟರರು ಮೊದಲು ಈ ಉಪಕರಣಕ್ಕಿರುವ ಚರ್ಮದ ಪಟ್ಟಿಯಿಂದ ನಿಮ್ಮ ತೋಳನ್ನು ಬಿಗಿದು ಚಿಕ್ಕ ಪಂಪಿನಿಂದ ಗಾಳಿ ಹಾಕುತ್ತಾರೆ. ಅದರಿಂದ ಪಟ್ಟಿ ಸಂಪೂರ್ಣ ಬಿಗಿಯಾಗಿ ತೋಳಿನ ರಕ್ತನಾಳದಲ್ಲಿ ರಕ್ತ ಹರಿಯುವುದು ನಿಂತುಹೋಗುತ್ತದೆ. ಆ ಮೇಲೆ ಅವರು ಪಟ್ಟಿಯನ್ನು ಮೆಲ್ಲನೆ ಸಡಿಲಾಗಗೊಟ್ಟು ಆ ರಕ್ತನಾಳದಲ್ಲಿ ಪುನಃ ರಕ್ತ ಹರಿಯತೊಡಗಿದ ಕೂಡಲೆ ಒತ್ತಡಮಾಪಕದಲ್ಲಿ ಪಾರಜ ಎಷ್ಟೆತ್ತರಕ್ಕೆ ಏರಿದೆಯೆಂದು ನೋಡುತ್ತಾರೆ. ಇದಕ್ಕೆ "ಸಿಸ್ಟೋಲಿಕ" ಒತ್ತಡ—ಅಂದರೆ ಹೃದಯವು ರಕ್ತವನ್ನು ಹೊರಗೊತ್ತುವಾಗಿನ ಒತ್ತಡ—ಎಂದು ಹೆಸರು.

ಆಮೇಲೆ ಕೈಪಟ್ಟಿಯನ್ನು ಇನ್ನಷ್ಟು ಸಡಿಲು ಬಿಟ್ಟು, ಹೃದಯದ ವಿಶ್ರಾಂತಿ ಕ್ಷಣದಲ್ಲಿ ಒತ್ತಡ

ಏಷ್ಟಿದೆಯೆಂದು ಗುರುತು ಹಾಕಿಕೊಳ್ಳುತ್ತಾರೆ. ವಿಶ್ರಾಂತಿಕ್ಷಣದ ಒತ್ತಡಕ್ಕೆ "ಡಯಾಸ್ಟೋಲಿಕ" ಒತ್ತಡವೆಂದು ಹೆಸರು.

ಆರೋಗ್ಯವಂತ ತರುಣನ ರಕ್ತದ ಒತ್ತಡವು ಹೃದಯ ಒತ್ತಿದಾಗ ಸುಮಾರು ೧೨೦ ಮತ್ತು ವಿಶ್ರಮಿಸಿದಾಗ ೮೦ ಇರುತ್ತದೆ. ಇದನ್ನು ೧೨೦/೮೦ ಎಂದು ಗುರುತಿಸಲಾಗುತ್ತದೆ.

ಎಲ್ಲ ವಯಸ್ಸಿನಲ್ಲಿ ಎಲ್ಲ ಜನರಲ್ಲಿ ರಕ್ತದ ಒತ್ತಡ ಒಂದೇ ತೆರನಾಗಿರುವುದಲ್ಲ. ನಾಲ್ಕು ವರ್ಷದ ಮಗುವಿನಲ್ಲಿ ಸಿಸ್ಟೋಲಿಕ ಒತ್ತಡ ೭೦ರ ಸುಮಾರಿಗಿರುತ್ತದೆ. ಪ್ರಬುದ್ಧರಲ್ಲಿ ಅದು ೧೧೦ ರಿಂದ ೧೫೦ರ ವರೆಗಿರಬಹುದು. ತಾತ್ಕಾಲಿಕವಾಗಿ ಒತ್ತಡ ಹೆಚ್ಚುವುದಾಗಲಿ ಕಡಿಮೆಯಾಗುವುದಾಗಲಿ ಚಿಂತಾಜನಕ ವಿಷಯವಲ್ಲ. ಈ ಏರಿಕೆ ಅಥವಾ ಇಳಿಕೆ ಶಾಶ್ವತವಾಗಿದ್ದರೆ ಆಗ ಯೋಚಿಸಬೇಕಾಗುತ್ತದಷ್ಟೇ.

ಪ್ರಾಯಪ್ರಬುದ್ಧರಲ್ಲಿ ರಕ್ತದ ಒತ್ತಡ ೧೧೦ ಕ್ಕಿಂತ ಕೆಳಗಿದ್ದರೆ ಅವರನ್ನು ಒಂದು ತರದ ತಂದ್ರಿ ಆವರಿಸುತ್ತದೆ. ಅವರು ಆಯಾಸಗೊಂಡವರಂತೆ, ಬುದ್ಧಿ ಮಾಂದ್ಯದಿಂದ ಬಾಳತೊಡಗುತ್ತಾರೆ. ಮಿದುಳಿಗೆ ಸಾಕಷ್ಟು ರಕ್ತ ಪೂರೈಕೆಯಾಗದಿರುವುದರಿಂದ ಬೆಳಿಗ್ಗೆ ಹಾಸಿಗೆಯಿಂದೇಳುವಾಗ ಅವರಿಗೆ ಬವಳಿ ಬರಬಹುದು. ಇವರಿಗೆ ತಮ್ಮ ಆರೋಗ್ಯದ ಚಿಂತೆ ಬಹಳ. ಆದರೆ ಹೆಚ್ಚಾಗಿ ಇಂಥವರು ಬೇಗನೆ ಸಾಯುವುದಿಲ್ಲ.

ರಕ್ತದ ಒತ್ತಡ ಕಡಿಮೆಯಾಗಿರುವುದು ಒಂದು ತರಹವಾದರೆ ರಕ್ತದ ಒತ್ತಡ ಮಿತಿಮೀರಿ ಇರುವುದು ಇನ್ನೊಂದು ತರಹ. ನಾವು ಸಾಮಾನ್ಯವಾಗಿ "ರಕ್ತದ ಒತ್ತಡ" ಎಂದು ಕರೆಯುವುದು ಈ ಮಿತಿಮೀರಿದ ಒತ್ತಡವನ್ನೇ.

ಮೀತಿಮೀರಿದ ರಕ್ತದ ಒತ್ತಡ ಯಾವ ಕಾರಣದಿಂದ ಬರುತ್ತದೆಂದು ಯಾರಿಗೂ ಗೊತ್ತಿಲ್ಲ. ಕೆಲ ವೇಳೆ ಮೂತ್ರಪಿಂಡಗಳ ರೋಗದಿಂದ, ಕೆಲ ವೇಳೆ ಪಿಚುಟರಿ ಗ್ರಂಥಿಯಲ್ಲಿ ಹುಣ್ಣು ಆಗುವುದರಿಂದ, ಬೇರೆ ಕೆಲ ವೇಳೆ ಆಡ್ರಿನಲ್ ಗ್ರಂಥಿಯ ದೋಷದಿಂದ ರಕ್ತದ ಒತ್ತಡ ಹೆಚ್ಚುತ್ತದೆ. ಆದರೆ ಇಂಥ ದೋಷಗಳಿಂದ ರಕ್ತದ ಒತ್ತಡ ಹೆಚ್ಚಿದ ಪ್ರಕರಣಗಳು ಸೇಕಡಾ ೧೦ ಕ್ಕಿಂತ ಹೆಚ್ಚಿಗೆ ಇಲ್ಲ. ಉಳಿದ ೯೦ ಪ್ರಕರಣಗಳಲ್ಲಿ ರಕ್ತದ ಒತ್ತಡದ ಕಾರಣವೇನೆಂಬುದು ಸಮಸ್ಯೆಯೇ ಆಗಿದೆ.

ಆದರೂ ರಕ್ತದ ಒತ್ತಡದ ರೋಗಿಯ ದೇಹದೊಳಗ ಏನೇನಾಗುತ್ತದೆಂದು ಡಾಕ್ಟರರಿಗೆ ತಕ್ಕಮಟ್ಟಿಗೆ ಗೊತ್ತಿದೆ. ಅವನ ದೇಹದ ವಿವಿಧ ಅಂಗಗಳಿಗೆ ರಕ್ತವನ್ನು ಮುಟ್ಟಿಸುವ ಮತ್ತು ಅಲ್ಲಿಂದ ಅಶುದ್ಧ ರಕ್ತವನ್ನು ಹೃದಯದತ್ತ ಕಳಿಸುವ ಸೂಕ್ಷ್ಮವಾದ ರಕ್ತನಾಳಗಳು ಗಟ್ಟಿಯಾಗಿ ಅವುಗಳೊಳಗೆ ರಕ್ತ ಸರಿಯಾಗಿ ಸಂಚರಿಸುವುದಕ್ಕೆ ಕಷ್ಟವಾಗುತ್ತದೆ. ಆಗ ಅವುಗಳ ಮೂಲಕ ರಕ್ತವನ್ನು ಹರಿಸಲು ಹೃದಯವು ಬಲವಾಗಿ ರಕ್ತವನ್ನು ಒತ್ತಬೇಕಾಗುತ್ತದೆ. ಇದೇ "ರಕ್ತದ ಒತ್ತಡ". ಸಾಮಾನ್ಯ ಪ್ರೌಢನಲ್ಲಿ ೧೫೦ ರೊಳಗಿರಬೇಕಾದ ಸಿಸ್ಟೋಲಿಕ ಒತ್ತಡವು ರಕ್ತದ ಒತ್ತಡದ ರೋಗಿಯಲ್ಲಿ ೩೦೦ ರ ವರೆಗೆ ಅಥವಾ ಅದಕ್ಕೂ ಮಿಕ್ಕಿ ಹೋಗಬಹುದು.

ಹೀಗಾದಾಗ ಹೃದಯಕ್ಕೆ ಕೆಲಸ ಹೆಚ್ಚಾಗಿ ಅದು ಉಬ್ಬಬಹುದು. ಅಥವಾ ಒತ್ತಡವನ್ನು ತಾಳಲಾರದೆ ರಕ್ತನಾಳಗಳು ಒಡೆಯಬಹುದು. ಕಣ್ಣಿನ ರಕ್ತನಾಳಗಳು ಹೀಗೆ ಒಡೆದರೆ ದೃಷ್ಟಿ ಕೆಡುವುದು. ಮಿದುಳಿನಲ್ಲಿ ಆದರೆ ಮೂರ್ಛೆ ಬರಬಹುದು.

ರಕ್ತದ ಒತ್ತಡದ ರೋಗಿಯ ರಕ್ತ ನಾಳಗಳ ಅವಸ್ಥೆ ಹೇಗಿದೆಯೆಂದರಿಯಲು ಕಣ್ಣುಗಳ ರಕ್ತನಾಳಗಳ ಪರೀಕ್ಷೆ ಉತ್ತಮ ಸಾಧನವಾಗಿದೆ. ಇದಕ್ಕಾಗಿ ಡಾಕ್ಟರರು ಅಫ್ಥಾಲ್ಮೊಸ್ಕೋಪ್ ಎಂಬ ಉಪಕರಣವನ್ನು ಉಪಯೋಗಿಸುತ್ತಾರೆ. ಅದರಲ್ಲಿ ನಡುವೆ ತೂತು ಇರುವ ಒಂದು ಚಿಕ್ಕ ಕನ್ನಡಿ ಇರುತ್ತದೆ. ಅದನ್ನು ತಲೆಗೆ ಕಟ್ಟಿಕೊಂಡು ಪರೀಕ್ಷಿಸಿದರೆ ಡಾಕ್ಟರರಿಗೆ ರೋಗಿಯ ಕಣ್ಣಿನ ರಕ್ತನಾಳಗಳ ಸ್ಥಿತಿಯ ಪರಿಚಯವಾಗುತ್ತದೆ.

ರೋಗಿಯ ಹೃದಯದ ಸ್ಥಿತಿ ತನ್ನ ಸ್ಟೆಥೋಸ್ಕೋಪಿನಿಂದ ಸರಿಯಾಗಿ ತಿಳಿಯದೆ ಹೋದರೆ ಡಾಕ್ಟರನು "ಇಲೆಕ್ಟ್ರೋ-ಕಾರ್ಡಿಯೋಗ್ರಾಂ"

ಎಂಬ ಉಪಕರಣಕ್ಕೆ ಶರಣು ಹೋಗಬೇಕಾಗುತ್ತದೆ. (ಇದು ಸಾಮಾನ್ಯವಾಗಿ ಎಲ್ಲ ಡಾಕ್ಟರರ ಕಡೆ ಇರುವುದಿಲ್ಲ. ತಜ್ಞರಲ್ಲಷ್ಟೇ ಇರುತ್ತದೆ.) ಜೀವಂತ ಹೃದಯದಿಂದ ವಿದ್ಯುತ್ತು ಹೊರಡುತ್ತಿರುತ್ತದೆ. ಇಲೆಕ್ಟ್ರೋಕಾರ್ಡಿಯೋಗ್ರಾಂ ಹೃದಯದಿಂದ ಹೊರಹೊಮ್ಮುವ ಈ ವಿದ್ಯುತ್ ಶಕ್ತಿಯನ್ನು ಗ್ರಹಿಸಿ ಫೋಟೋಗ್ರಾಫಿಕ್ ಕಾಗದದ ಮೇಲೆ ವಿದ್ಯುತ್ತಿನ ಅಲೆಗಳ ಏಳುಬೀಳುಗಳನ್ನು ಗುರುತು ಹಾಕುತ್ತದೆ. ಈ ಗುರುತುಗಳನ್ನು ಪರಿಶೀಲಿಸಿ ತಜ್ಞರಾದವರು ಹೃದಯದ ಸ್ಥಿತಿಯನ್ನು ಊಹಿಸಬಲ್ಲರು.

ಕೆಲವೇಳೆ ಡಾಕ್ಟರರು ರೋಗಿಯ ಮೂತ್ರ ಪರೀಕ್ಷೆ ಮಾಡಬೇಕೆನ್ನುವರು. ಮೂತ್ರ ಪರೀಕ್ಷೆ ಎಂದರೇನು?

ನಮ್ಮ ಮೂತ್ರಪಿಂಡಗಳಲ್ಲಿರುವ ೨೮೦ ಮೈಲುದ್ದದ ಸೂಕ್ಷ್ಮನಳಿಗೆಗಳು ರಕ್ತದಲ್ಲಿರುವ ಕಲ್ಮಷಗಳನ್ನು ಸೋಸುವವು. ರಕ್ತದಿಂದ ನೀರನ್ನು ಎಳೆದುಕೊಂಡು ಶುದ್ಧಮಾಡಿ ತಿರುಗಿ ರಕ್ತಕ್ಕೆ ಅದನ್ನು ಕೊಟ್ಟು ಕಳಿಸುವ ಮೂತ್ರಪಿಂಡಗಳು ಈ ಕಲ್ಮಷಗಳನ್ನೆಲ್ಲ ಸ್ವಲ್ಪಾಂಶ ನೀರಿನಲ್ಲಿ ಕರಗಿಸಿ ಮೂತ್ರಕೋಶಕ್ಕೆ ಕಳಿಸುವವು.

ಮೂತ್ರದ ಬಣ್ಣ ಹೀಗೆಯೇ ಇರಬೇಕೆನ್ನುವಂತಿಲ್ಲ. ಬರಿಗಣ್ಣಿಂದ ಅದರ ಪರೀಕ್ಷೆ ಮಾಡಿದರೆ ಏನೂ ತಿಳಿಯದು. ಅದಕ್ಕಾಗಿ ಡಾಕ್ಟರರು ಮೂತ್ರವನ್ನು ಪರೀಕ್ಷೆಗಾಗಿ ಪ್ರಯೋಗಶಾಲೆಗೆ ಕಳಿಸುವರು.

ಮೊದಲು ಪ್ರಯೋಗಶಾಲೆಯಲ್ಲಿ ಮೂತ್ರದ ವಿಶಿಷ್ಟ ಗುರುತ್ವವನ್ನು (ಅಂದರೆ ಅಷ್ಟೇ ಅಳತೆಯ ಸಾದಾ ನೀರಿಗಿಂತ ಮೂತ್ರವು ಎಷ್ಟು ಭಾರವಾಗಿದೆಯೆಂದು) ಕಂಡುಹಿಡಿಯುತ್ತಾರೆ. ಮೂತ್ರವು ಸಾದಾ ನೀರಿಗಿಂತ ಹೆಚ್ಚು ಭಾರವಾಗಿದ್ದಷ್ಟೂ ಒಳಿತೆಂದು ಭಾವಿಸಲಾಗುತ್ತದೆ. ಯಾಕೆಂದರೆ ಮೂತ್ರಪಿಂಡಗಳು ಸರಿಯಾಗಿ ಕೆಲಸಮಾಡಿ ಕಲ್ಮಷಗಳನ್ನು ಸರಿಯಾಗಿ ಹೊರದೂಡುತ್ತಿವೆಯೆಂದು ಅದು ತೋರಿಸುತ್ತದೆ.

ಅನಂತರ ಮೂತ್ರದಲ್ಲಿ ಆಲ್ಬುಮಿನ್ ದ್ರವ್ಯ ಇದೆಯೇ ಎಂದು ನೋಡುತ್ತಾರೆ. ಮೂತ್ರಪಿಂಡವು ಸಾಮಾನ್ಯವಾಗಿ ರಕ್ತದಿಂದ ಆಲ್ಬುಮಿನ್ ದ್ರವ್ಯವನ್ನು ತೆಗೆದು ಹೊರತಳ್ಳುವುದಿಲ್ಲ. ಮೂತ್ರದಲ್ಲಿ ಆಲ್ಬುಮಿನ್ ಇದ್ದರೆ ಮೂತ್ರಪಿಂಡವು ತನ್ನದಲ್ಲದ ಕೆಲಸ ಮಾಡುತ್ತದೆಂದೂ ಅದರಿಂದ ಅದಕ್ಕೇನೋ ಆಗಿದೆಯೆಂದೂ ಅರ್ಥ.

ಮೂತ್ರದಲ್ಲಿ ಸಕ್ಕರೆ ಹೆಚ್ಚಾಗಿದೆಯೇ ಎಂದೂ ಪರೀಕ್ಷಿಸುವರು. ಏಕೆಂದರೆ ಇದು ಮಧುಮೇಹದ ಸೂಚನೆ. ಪುರಾತನ ಗ್ರೀಕ ವೈದ್ಯರು ರೋಗಿಯ ಮೂತ್ರವನ್ನು ನಾಲಿಗೆಯಿಂದ ನೆಕ್ಕಿಯೇ ಈ ರೋಗದ ಪರೀಕ್ಷೆ ಮಾಡುತ್ತಿದ್ದರು! ಈಗ ಬೇರೆ ವಿಧಾನಗಳು ಗೊತ್ತಾಗಿವೆ. ಜಠರದ ಮೇದೋಜೀರಕ ಗ್ರಂಥಿಯಲ್ಲಿ ಇನ್ಸುಲಿನ್ ಎಂಬ ಒಂದು ದ್ರವ್ಯ ಹುಟ್ಟುತ್ತದೆ. ಈ ಗ್ರಂಥಿ ಕೆಟ್ಟು ಇನ್ಸುಲಿನ್ ಉತ್ಪತ್ತಿಯಾಗದಂತಾದರೆ ನಾವು ತಿಂದ ಸಕ್ಕರೆ ಪಚನವಾಗುವುದಿಲ್ಲ. ಆಗ ಸಕ್ಕರೆಯು ರಕ್ತದಲ್ಲಿ ಶೇಖರವಾಗಿ ಮೂತ್ರದಲ್ಲಿ ಹೊರದೂಡಲ್ಪಡುವುದು. ೧೯೨೨ರಲ್ಲಿ ಇನ್ಸುಲಿನ್ ದ್ರವ್ಯದ ಶೋಧವಾದಂದಿನಿಂದ ಮಧುಮೂತ್ರದಿಂದಾಗುವ ಮರಣಗಳಸಂಖ್ಯೆ ಇಳಿದಿದೆ.

ಕರುಳುಗಳಲ್ಲಿ ತಡೆಯಾಗಿದ್ದರೆ ಅಥವಾ ಜಠರದಲ್ಲಿ ಕ್ಯಾನ್ಸರ್ ಆಗಿದ್ದರೆ, ಮತ್ತು ಟೈಫಾಯ್ಡ್ ಮೊದಲಾದ ಇತರ ಕೆಲ ರೋಗಗಳಲ್ಲಿ ಮೂತ್ರದಲ್ಲಿ "ಇಂಡೀಕನ್" ಎಂಬ ಒಂದು ಪದಾರ್ಥ ಕಾಣಿಸುತ್ತದೆ. ರಕ್ತದ ಕೆಂಪುಕಣಗಳು ಮೂತ್ರದಲ್ಲಿ ಕಂಡುಬಂದರೆ ದೇಹದಲ್ಲಿ ಆಂತರಿಕ ರಕ್ತಸ್ರಾವವಾಗುತ್ತಿದೆಯೆಂದೂ ಕೀವಿನ ಕಣಗಳಿದ್ದರೆ ಒಳಗೆ ಏನೋ ವ್ರಣವಾಗಿದೆಯೆಂದೂ ಊಹಿಸಲಾಗುತ್ತದೆ.

ಇದಲ್ಲದೆ ಇನ್ನೂ ಅನೇಕ ತರದ ಪರೀಕ್ಷೆಗಳನ್ನು ಡಾಕ್ಟರರು ಮಾಡಬಹುದು. ಆದರೆ ಅವು ಅಪರೂಪವಾದವು. ಈ ಪರೀಕ್ಷೆಗಳು ವಿಶಿಷ್ಟ ರೋಗಗಳನ್ನೇ ತೋರಿಸುವುವೆಂದಲ್ಲ. ಅವು "ಹೊಗೆ"ಯನ್ನು ತೋರಿಸುತ್ತವಷ್ಟೇ: ಬೆಂಕಿ ಎಲ್ಲಿದೆಯೆಂದು ಹುಡುಕುವುದು ಡಾಕ್ಟರರ ಕೆಲಸ.

ಅಪಾಯ ಹಿಂಗಿದ ಮೇಲೆ ಅಲೋಪಥಿಗೆ
ಧಿಕ್ಕಾರವಿರಲಿ!

# ಹೋಮಿಯೋಪಥಿ ಡಾಕ್ಟರ್

"ಸಾಲಾಗಿ ನಿಲ್ಲಿರಿ. ಒಬ್ಬೊಬ್ಬರೇ ಬರ್ರಿ. ಗದ್ದಲ ಮಾಡಬೇಡಿರಿ"—ಉಪೇಂದ್ರ ಹೋಮಿಯೊ ಫಾರ್ಮಸಿಯ ಮಗ್ಗಲಿನ ಕೋಣೆಯಿಂದ ಧ್ವನಿ ಬರುತ್ತಿತ್ತು. ರೋಗಿಯನ್ನು ಮಲಗಿಸಿಕೊಂಡು ಎತ್ತಿನ ಗಾಡಿಯೊಂದು ಬಂದೊಡನೆ ಈ ಧ್ವನಿ ಕೇಳಬರುತ್ತಿತ್ತು. ಉಪೇಂದ್ರ ಡಾಕ್ಟರರಲ್ಲಿ ನಿತ್ಯವೂ ಇದೇ ರೀತಿಯಾಗಿ ರೋಗಿಗಳ ಗದ್ದಲ ಇರುತ್ತಿತ್ತು. ತಮ್ಮ ಪ್ರಕೃತಿಯನ್ನು ತಪಾಸಿಸಿಕೊಳ್ಳಲು ದೂರದೂರದಿಂದಲೂ ಜನ ಅವರಲ್ಲಿಗೆ ಬರುತ್ತಿದ್ದರು. ಇಂಟಂತೂ ಸಂತೆಯ ದಿನ. ಅಂದಮೇಲೆ ಕೇಳಬೇಕೇ?

ಯುದ್ಧಭೂಮಿಯಿಂದ ಮರಳಿ ಬಂದು ದವಾಖಾನೆ ತೆರೆದಿದ್ದ ಅಲೋಪಥಿಕ್ ಡಾಕ್ಟರ ಕ್ಯಾಪ್ಟನ್ ಚಟರ್ಜಿಯವರ ಒಳಿ ಯಾರಾದರೊಬ್ಬರು ಅಪ್ಪಿತಪ್ಪಿ ಹೋಗುತ್ತಿದ್ದರು. ಅನೇಕ ದಿನಗಳ ವರೆಗೆ ಔಷಧಿ ಕುಡಿದರೂ ಪ್ರಯೋಜನವಾಗದ್ದನ್ನು ಕಂಡು ಅಂಥವರು ಕೂಡ ಉಪೇಂದ್ರ ಡಾಕ್ಟರರ ಬಾಗಿಲಿಗೇ ಬರಬೇಕಾಗುತ್ತಿತ್ತು.

ರೋಗಿಗಳ ಸಮ್ಮುಖದಲ್ಲಿ ನಿಂತು ಉಪೇಂದ್ರ, ಡಾಕ್ಟರರು ಯೇಸು ಕ್ರಿಸ್ತನಂತೆ ಕೈ ಮೇಲಕ್ಕೆತ್ತಿ ಹೇಳುತ್ತಿದ್ದರು: "ನಂಬಿಗೆ ಇರಬೇಕು, ನಂಬಿಗೆ! ದೃಢ ವಿಶ್ವಾಸವಿದ್ದರೆ ನನ್ನ ಔಷಧಿಯ ಒಂದೇ ಒಂದು ಡೋಸ್ (ಗುಟುಕು) ದಿಂದ ರೋಗ ಓಡಿ ಹೋದೀತು. ನಂಬಿಗೆಯಿಲ್ಲದಿರುವಲ್ಲಿ ಆಶೆಯೂ ಇಲ್ಲವೆಂದು ಶಾಸ್ತ್ರದಲ್ಲಿ ಕೂಡ ಹೇಳಿದೆ."

ಡಾ. ಉಪೇಂದ್ರರ ದವಾಖಾನೆಯನ್ನು ಪ್ರವೇ



ಶಿಸಿದೊಡನೆ ಕನ್ನಡಿಯ ಚೌಕಟ್ಟಿನಲ್ಲಿ ಹಾಕಿಸಿಟ್ಟ ಎರಡು ವಾಕ್ಯಗಳು ಬಂದವರ ದೃಷ್ಟಿಗೆ ಬೀಳು-ತ್ತಿದ್ದವು: "ಶ್ರದ್ಧೆಯಿಲ್ಲದಿದ್ದರೆ ಔಷಧಿ ನಿರರ್ಥಕ" "ಔಷಧಿ ಸೇವಿಸುತ್ತಿರುವಾಗ ಧೂಮಪಾನ ನಿಷಿದ್ಧ ಮತ್ತು ಕುಂಕುಮವನ್ನು ಕೂಡ ಹಚ್ಚ ಲಾಗದು'' ಎಂಬವೇ ಆ ಎರಡು ವಾಕ್ಯಗಳಾಗಿದ್ದವು.

ಚೌಕೀದಾರ ಗಜಾಲನಿಗೆ ಡಾ. ಉಪೇಂದ್ರರ ಸ್ವಭಾವ ಗೊತ್ತಿರಲಿಲ್ಲ. ಚಟರ್ಜಿ ಡಾಕ್ಟರರ ನಿಂದೆಯನ್ನು ಮಾಡಿದರೆ ಡಾ. ಉಪೇಂದ್ರರು ಪ್ರಸನ್ನರಾಗುವರು ಎಂದಾತ ಭಾವಿಸಿದ. ಆತ ತನ್ನ ಹೆಂಡತಿಗೆ ಔಷಧ ಕೊಡಿಸಲೆಂದು ಬಂದಿದ್ದ. ಆದರೆ ಡಾಕ್ಟರರ ಫೀ ಕೊಡಲು ಅವನಿಗೆ ಮನ-ಸ್ಸಿರಲಿಲ್ಲ. ಉಪೇಂದ್ರ ಡಾಕ್ಟರರನ್ನು ಪ್ರಸನ್ನ ಗೊಳಿಸಲು ಅವನು, "ಇವಳನ್ನು ಚಟರ್ಜಿ ಡಾಕ್ಟರರಲ್ಲಿಗೆ ಕರೆದೊಯ್ದಿದ್ದೆ. ಏನು ಹೇಳಿದರಂತೀರಿ? 'ಬಹಳಷ್ಟು ಇಂಜೆಕ್ಶನ್ ಮಾಡಬೇಕು, ಬಹಳ ಖರ್ಚು ತಗಲೀತು. ಅದಕ್ಕಿಂತ ನೀನಿವಳನ್ನು ಉಪೇಂದ್ರ ಡಾಕ್ಟರರಲ್ಲಿಗೆ ಕರೆದೊಯ್ದು ಅವರ ನೀರನ್ನು ಕುಡಿಸಿದರೆ ಹೆಚ್ಚು ಒಳ್ಳೆಯದಾದೀತು' ಎಂದರು. ಕೇಳಿದಿರಾ ನಿಮ್ಮದು ನೀರಂತೆ! ಎಂಥ ಮೂರ್ಖ ಮನುಷ್ಯ!" ಎಂದ.

ಗಜಾಲನು ಹಣ ಕೊಡುವ ಮನುಷ್ಯನಲ್ಲ ಎಂದು ಕ್ಷಣಾರ್ಧದಲ್ಲಿ ಉಪೇಂದ್ರ ಡಾಕ್ಟರರು ಕಂಡುಕೊಂಡರು. ದವಾಖಾನೆಯಲ್ಲಿ ರೋಗಿಗಳು ತುಂಬಿದ್ದರು. ಎಲ್ಲರನ್ನೂ ಪರೀಕ್ಷಿಸಿ ಔಷಧಿ ಕೊಡುವ, ಧೂಮಪಾನ ಮಾಡಲಾಗದೆಂದು ತಾಕೀತು ಮಾಡುವ ಕಾರ್ಯವೆಂದರೆ ಸಾಮಾ-ನ್ಯವೇ? ಸ್ವಲ್ಪದರಲ್ಲಿ ಮುಗಿಯತಕ್ಕದ್ದೇ? ಉಸಿರಾಡಿಸಲು ಕೂಡ ಅವರಿಗೆ ಸಮಯವಿರಲಿಲ್ಲ. ಸುಮ್ಮನಿರುವಂತೆ ಗಜಾಲ ಚೌಕೀದಾರನಿಗೆ ಸೂಚಿಸಿ ಉಪೇಂದ್ರ ಡಾಕ್ಟರರು "ಭಂತೂ, ಏ ಭಂತೂ," ಎಂದು ಕೂಗಿದರು.

"ಬಂದ್ಡೆ ಅಪ್ಪಾ."

ಯಾವಳಾದರೂ ಸ್ತ್ರೀ ಪುಕ್ಕಟೆ ಔಷಧಿ ಕೇಳಲು ಬಂದಾಗ ಉಪೇಂದ್ರ ಡಾಕ್ಟರರು ಅವಳನ್ನು ತಮ್ಮ ಹೆಂಡತಿಯ ಹತ್ತರ ಕಳಿಸುತ್ತಿದ್ದರು. ಮನೆಯಲ್ಲಿ ದಿನವಿಡೀ ಹೋಮಿಯೋಪಥಿ ಔಷಧಿಗಳ ಚರ್ಚೆ ನಡೆಯುತ್ತಿದ್ದುದರಿಂದ ಡಾಕ್ಟರರ ಪತ್ನಿಗೂ ರೋಗ ಮತ್ತು ಔಷಧಿಗಳ ಹೆಸರುಗಳು ಪರಿಚಯವಾಗಿದ್ದವು. ಪುಕ್ಕಟೆ ಉಪಚಾರ ಪಡೆಯಲು ಬಂದವರನ್ನು ಭಂತೂ ಅವಳೆಡೆಗೆ ಕರತಂದಾಗ ಅವಳಿಗೂ ಡಾಕ್ಟರಣಿ ಬಾಯಿಯಾಗುವ ಸಂದರ್ಭ ದೊರೆತು ಸಂತೋಷವಾಗುತ್ತಿತ್ತು.

ಕಪಾಟಿನಿಂದ ಹೋಮಿಯೋಪಥಿ ಔಷಧಿ ಬಾಟ್ಲಿಗಳಿದ್ದ ಸಣ್ಣ ಪೆಟ್ಟಿಗೆಯನ್ನು ಭಂತುವಿನ ಕೈಲಿ ಕೊಟ್ಟು ಉಪೇಂದ್ರ ಡಾಕ್ಟರರು "ಚೌಕೀದಾರರ ಹೆಂಡತಿಯನ್ನು ನಿನ್ನ ತಾಯಿಯ ಹತ್ತರ ಕರೆದು ಕೊಂಡು ಹೋಗು" ಎಂದರು.

ಗಜಾಲ ಚೌಕೀದಾರನ ಭಾಷಣದಿಂದ ಉಪಸ್ಥಿತ ರೋಗಿಗಳಲ್ಲಿ ಡಾಕ್ಟರ ಚಟರ್ಜಿ ಮತ್ತು ಅಲೋಪಥಿಕ್ ಚಿಕಿತ್ಸಾ ಪದ್ಧತಿಗಳ ಬಗ್ಗೆ ಚರ್ಚೆಯೆದ್ದಿತು. ಆ ಚರ್ಚೆಯಲ್ಲಿ ದೇಹವನ್ನು ಕೊಯ್ಯುವದನ್ನು ಬಿಟ್ಟರೆ ಅಲೋಪಥಿಕ್ ಚಿಕಿತ್ಸೆಯಲ್ಲಿ ಮತ್ತೇನೂ ಇಲ್ಲವೆಂದು ನಿಷ್ಕರ್ಷೆಯಾಯಿತು. ಗಡ್ಡದ ಗೃಹಸ್ಥರೊಬ್ಬರು ನಡುವೆ ಬಾಯಿ ಹಾಕಿ, "ತಮ್ಮ ಬಳಿ ಇರುವ ಜ್ವರದ ಔಷಧಿ ಹೋಮಿಯೋಪಥಿ ಡಾಕ್ಟರರ ಹತ್ತಿರ ಇಲ್ಲ. ಅದಕ್ಕಾಗಿಯೆ ಹೋಮಿಯೋಪಥಿ ಡಾಕ್ಟರರ ಮನೆಯಲ್ಲಿ ಯಾರಿಗಾದರೂ ಜ್ವರ ಬಂದರೆ ಅವರು ಕೂಡಲೆ ಅಲೋಪಥಿ ಡಾಕ್ಟರರಿಗೆ ಶರಣು ಹೋಗುತ್ತಾರೆ. ಮಲೇರಿಯ ಜ್ವರ ಬಂದರೆ ಇಲ್ಲವೆ ಮಕ್ಕಳಿಗೆ ವಾಂತಿಯಾಗಲು ಸುರುವಾದರೆ ಹೋಮಿಯೋಪಥಿ ಡಾಕ್ಟರರು ತಮ್ಮ ಔಷಧಿಗಳನ್ನು ಒಮ್ಮಿಂದೊಮ್ಮೆ ಮರೆತು ಬಿಡುತ್ತಾರೆ ಎಂದು ಚಟರ್ಜಿ ಡಾಕ್ಟರರು ಹೇಳುತ್ತಿದ್ದರು" ಎಂದರು.

ಈ ಮಾತುಗಳು ಉಪೇಂದ್ರ ಡಾಕ್ಟರರ ಕಿವಿಗೆ ಬೀಳದೆ ಹೋಗಲಿಲ್ಲ. ಅವರು ಕೂಡಲೆ ಹೇಳಿದರು: "ನಾನು ಇಲ್ಲಿ ಡಾಕ್ಟರಿಕಿ ಮಾಡಹತ್ತಿ ಇಪ್ಪೊಂದು ವರ್ಷಗಳಾದವು. ನಾನು ನನ್ನ ಸಲುವಾಗಿ ಅಥವಾ ನನ್ನ ಮನೆಯವರ ಸಲುವಾಗಿ

ಅಲೋಪಥಿ ಡಾಕ್ಟರರ ಔಷಧಿ ತಂದಿದ್ದನ್ನು ಯಾರಾದರೂ ನೋಡಿದ್ದಾರೇನು? ಅದರ ಬದಲು ಕಲಕತ್ತೆಯ ದೊಡ್ಡ ದೊಡ್ಡ ಡಾಕ್ಟರರು ಕೂಡ ತಮ್ಮಲ್ಲಿ ಯಾರಿಗಾದರೂ ಅಸಾಧ್ಯ ರೋಗವಾದರೆ ನಮ್ಮ ಕಡೆಗೆ ಓಡಿ ಬರುತ್ತಾರೆ. ನಮ್ಮ ಒಂದೇ ಒಂದು ಗುಳಿಗೆ ರೋಗದ ಟೊಂಕವನ್ನು ಮುರಿದು ಹಾಕಿಬಿಡುತ್ತದೆ. ನೀವಂತೂ ಬಲ್ಲಿರಲ್ಲ ಈ ಮಾತನ್ನು!" ಕೊನೆಯ ಮಾತನ್ನು ಉಪೇಂದ್ರ ಡಾಕ್ಟರರು ದಯಾಳ ಸಾಹೇಬರನ್ನು ಉದ್ದೇಶಿಸಿ ಆಡಿದರು.

ದಯಾಳ ಸಾಹೇಬರು ತಮ್ಮ ಅಂಗಡಿಯ ಸಾಮಾನು ಖರೀದಿಗಾಗಿ ಮೇಲಿಂದ ಮೇಲ ಕಲ್ಕತ್ತೆಗೆ ಹೋಗುತ್ತಿದ್ದರು. ಆ ಊರಿನಲ್ಲಿ ಕಲ್ಕತ್ತೆಯ ತಜ್ಞರೆಂದರೆ ಅವರೊಬ್ಬರೇ ಆಗಿದ್ದರು. ಉಪೇಂದ್ರ ಡಾಕ್ಟರರ ಮಾತಿಗೆ ತಲೆಯಲ್ಲಾಡಿಸುವದರಲ್ಲಿಯೆ ತಮ್ಮ ಲಾಭವಿದೆಯೆಂದು ಗೊತ್ತಿದ್ದ ದಯಾಳ ಸಾಹೇಬರು "ಹಾದಿ" ಬಿಟ್ಟು ಮುಂದೆ ನಡೆದು ಆಲೋಪಥಿ ಟೀಕೆಯಲ್ಲಿ ಮೊದಲನೆ ನಂಬರು ಪಡೆದುಬಿಟ್ಟರು. ಉಳಿದವರೆಲ್ಲರಿಗೂ ಗೋಣು ಹಾಕದೆ ಗತ್ಯಂತರವಿರಲಿಲ್ಲ.

ಕೊನೆಯ ರೋಗಿಗೆ ಧೂಮಪಾನ ಮಾಡಕೂಡದೆಂದು ತಾಕೀತುಮಾಡಿ ಉಪೇಂದ್ರ ಡಾಕ್ಟರರು ಗಡಿಯಾರ ನೋಡಿಕೊಂಡರು. ೧॥ ಹೊಡೆದಿತ್ತು. ಇನ್ನು ಏಳದಿದ್ದರೆ ಮಧ್ಯಾಹ್ನದ ರೋಗಿಗಳು ಬರತೊಡಗುವರು. ಆಗ ಊಟ ಮಾಡಲೂ ತಮಗೆ ಸಮಯ ಸಿಗುವದಿಲ್ಲ ಎಂದುಕೊಂಡು ಅವರು ಎದ್ದರು.

ಮನೆಯೊಳಗೆ ಹೊಗುವ ಮೊದಲು ಮಗ್ಗಲಿನ ಧೂಮಪಾನ ಕೋಣೆಯಲ್ಲಿ ಇಣಿಕಿ ಹೊಮಿಯೊಪಥಿಯ ನಾಲ್ವರು ಏಕನಿಷ್ಠ ಸೇವಕರೊಂದಿಗೆ ಒಂದೆರಡು ಮಾತಾಡುವದು ಅವರ ನಿತ್ಯಕ್ರಮವಾಗಿತ್ತು. ಇಂದಾದರೂ ಅವರು ಆ ಕ್ರಮವನ್ನು ಹೇಗೆ ತಪ್ಪಿಸಿಯಾರು?

ಇಂದು ಧೂಮಪಾನ ಕೋಣೆಯಲ್ಲಿ ಪೋತದಾರ ಮಹಾಶಯರೊಬ್ಬರೇ ಇದ್ದರು. ಉಳಿದವರೆಲ್ಲ ಊಟಕ್ಕೆಂದು ತಮ್ಮ ತಮ್ಮ ಮನೆಗೆ ಹೋಗಿಬಿಟ್ಟಿದ್ದರು. ಪೋತದಾರ ಮಹಾಶಯರು ಊಟ ಮಾಡಿಕೊಂಡೇ ಬಂದಿದ್ದರು. ಹುಕ್ಕಾ ಅವರಿಗೆ ಸೇರುತ್ತಿರಲಿಲ್ಲವಾದ್ದರಿಂದ ಅವರು ತಮ್ಮ ಗುಡಗುಡಿಯನ್ನು ಕೈಲಿ ಹಿಡಿದುಕೊಂಡು ಬಂದಿದ್ದರು.

ಉಪೇಂದ್ರ ಡಾಕ್ಟರರೊಡನೆ ಮಾತಾಡಿದರೆ ಚಟರ್ಜಿ ಮಹಾಶಯರ ಉಲ್ಲೇಖವಾಗದೆ ಹೋಗುತ್ತಿರಲಿಲ್ಲ. ಇಂದು ಚಟರ್ಜಿ ಡಾಕ್ಟರರು ರೋಗ ನಿದಾನ ಮಾಡುವಾಗ ಎಲ್ಲಿ ಯಾವ ತಪ್ಪು ಮಾಡಿದರು ಎಂಬ ವಿಷಯ ಚರ್ಚೆಗೆ ಬಂದಿತು. ಅಷ್ಟರಲ್ಲಿ ಮನೆಯೊಳಗಿಂದ "ಏನ್ರಿ, ಕೇಳಿದಿರೇನು? ಕೇಳಿಸಿತೇನು? ಬೇಗ ಬರ್ರಿ. ಭಂತೂಗೆ ಏನಾಗಿದೆ ನೋಡಬನ್ನಿ. ಹ್ಯಾಗೆ ಮಾಡುತ್ತಾನೆ ನೋಡಿ" ಎಂಬ ಕೂಗು ಬಂದಿತು. ಸಂಗಡಲೇ ಸ್ತ್ರೀಯೊಬ್ಬಳ ಅಳುವಿನ ಧ್ವನಿಯೂ ಕೇಳಿ ಬಂತು. ಏನೋ ಅನಾಹುತವಾಗಿದೆಯೆಂದು ಉಪೇಂದ್ರ ಡಾಕ್ಟರರಿಗೆ ಅನಿಸಿತು.

ಅವರು ಗಾಬರಿಯಾಗಿ ಓಡುತ್ತಲೇ ಒಳಗೆ ಹೋದರು. ಅವರ ಬೆನ್ನ ಹಿಂದೆಯೇ ಪೋತದಾರ ಮಹಾಶಯರೂ ತಮ್ಮ ಗುಡಗುಡಿಯನ್ನೆತ್ತಿಕೊಂಡು ಬಂದರು ಭಂತೂ ತಾಯಿಯ ತೊಡೆಯ ಮೇಲೆ ತಲೆಯಿಟ್ಟು ನಿಶ್ಚಲನಾಗಿ ಬಿದ್ದುಕೊಂಡಿದ್ದನು. ಸಮೀಪದಲ್ಲಿಯೆ ಗಜಾಲ ಚೌಕೀದಾರನ ಹೆಂಡತಿ ನಿಂತುಕೊಂಡಿದ್ದಳು.

ಭಂತೂ ಕಣ್ಣು ಮುಚ್ಚಿಕೊಂಡಿದ್ದನು. ಅವನ ತಾಯಿ ಅಳುತ್ತಲೇ ಏನನ್ನೋ ಕೇಳುತ್ತಿದ್ದಳು. ಭಂತೂ ಮಾತ್ರ ಉತ್ತರ ಕೊಡುತ್ತಿರಲಿಲ್ಲ

"ಏನಾಯಿತು?" ಉಪೇಂದ್ರ ಡಾಕ್ಟರರು ಕೇಳಿದರು.

ಸಮೀಪದಲ್ಲಿಯೇ ಬಿದ್ದ ಹೊಮಿಯೊಪಥಿ ಔಷಧಿ ಬಾಟ್ಲಿಗಳ ಪೆಟ್ಟಿಗೆಯ ಕಡೆಗೆ ಕೈಮಾಡಿ ಡಾಕ್ಟರರ ಹೆಂಡತಿ ಹೇಳಿದರು ''ಭಂತೂ ಅದರಲ್ಲಿಯ ಅನೇಕ ಬಾಟ್ಲಿಗಳ ಔಷಧಿಯನ್ನು ಒಮ್ಮೆಲೆ ಕುಡಿದುಬಿಟ್ಟಿದ್ದಾನೆ. ಔಷಧಿ ಬಹಳ ಸಿಹಿಯಾಗಿದೆಂದು ಅವನು ಯಾವಾಗಲೂ ಹೇಳುತ್ತಿದ್ದ.''

"ಎಷ್ಟು ಬಾಟ್ಲಿಗಳ ಔಷಧಿ ಕುಡಿದಿದ್ದಾನೆ?

ಡಾಕ್ಟರರು ಕೇಳಿದರು.

"ನಾನೇನು ಎಣಿಸಿದ್ದೇನೆಯೆ ?"

ಡಾಕ್ಟರರು ಸ್ವತಃ ಬಾಟ್ಲಿಗಳನ್ನು ಎಣಿಸ ತೊಡಗಿದರು.

"ಭಂತೂ, ಏಳು ಬಾಟ್ಲಿಗಳ ಔಷಧಿ ಕುಡಿದೆಯೇನು ? ಯಾಕೆ ಮಾತಾಡುವದಿಲ್ಲ ? ಕಣ್ಣುಗಳನ್ನೇಕೆ ಮುಚ್ಚಿಕೊಂಡಿರುವಿ ?" ಉಪೇಂದ್ರ, ಡಾಕ್ಟರರು ಉದ್ವಿಗ್ನರಾಗಿ ಕೇಳಿದರು.

ಭಂತೂ ಮಾತಾಡಲಿಲ್ಲ. ಅವನ ತಾಯಿ "ಅಯ್ಯೋ, ನನ್ನ ಮಗನಿಗೆ ಏನಾಯಿತು ?" ಎಂದು ಅಳತೊಡಗಿದಳು.

ಪೋತದಾರ ಮಹಾಶಯರಿಗೆ ಅವಳ ದುಃಖ ನೋಡಿ ತಡೆಯುವದಾಗಲಿಲ್ಲ. ಅವರು ಭಂತೂವಿನ ಬಳಿಗೆ ಬಂದರು. ಭಂತೂನ ತಾಯಿ ಎದ್ದು ಬದಿಗೆ ಸರಿದು ನಿಂತಳು.

ಪೋತದಾರ ಮಹಾಶಯರು ಭಂತೂನ ಕಿವಿಯ ಹತ್ತರ ಬಾಯಿ ಒಯ್ದು "ಹೆದರಬೇಡ ಭಂತು, ಖರೇ ಹೇಳಿಬಿಡು. ನಿನ್ನ ಅಪ್ಪ, ಅಮ್ಮ ಇಬ್ಬರೂ ಇಲ್ಲಿಲ್ಲ. ಹೊರಗೆಹೋಗಿದ್ದಾರೆ. ಔಷಧಿಗಳನ್ನೆಲ್ಲ ಚಲ್ಲಿಕೊಟ್ಟೆಯಾ ? ಯಾರೂ ನಿನ್ನ ಮೇಲೆ ಸಿಟ್ಟಿಗೇಳುವದಿಲ್ಲ. ಖರೇ ಹೇಳು" ಎಂದರು.

ಆದರೆ ಭಂತೂ ಹೂಂ ಹಾಂ ಎನ್ನಲಿಲ್ಲ. ಆತ ಕೈಕಾಲು ಸೆಟೆಸಿಕೊಂಡು ಹಾಗೆಯೆ ನಿಶ್ಚಲನಾಗಿ ಬಿದ್ದುಕೊಂಡಿದ್ದ. ಅವಡುಗಚ್ಚಿದ್ದ ಆತನ ಬಾಯಿಯನ್ನು ತೆರೆಯುವದು ಕೂಡ ಸಾಧ್ಯವಾಗಲಿಲ್ಲ.

ಭಂತೂನ ತಾಯಿ ಪಾಪ! ಎಷ್ಟೊತ್ತಿನ ವರೆಗೆ ಮಗನ ಕಷ್ಟವನ್ನು ಸಹಿಸಿಕೊಂಡಳು. "ಸುಮ್ಮನೆ ಪ್ರಶ್ನೆ ಕೇಳುತ್ತ ಕುಳಿತಿದ್ದೀರಲ್ಲ. ಔಷಧಿಯ ವಿಷ ನಿವಾರಣೆಗಾಗಿ ಏನಾದರೂ ಮಾಡಿರಿ" ಎಂದವಳು ಕೂಗಿಕೊಂಡಳು.

ನಾನು ಓಡುತ್ತ ಹೋಗಿ ಚಟರ್ಜಿ ಡಾಕ್ಟರರನ್ನು ಕರೆದುಕೊಂಡು ಬರುತ್ತೇನೆ" ಪೋತದಾರ ಮಹಾಶಯರು ಹೇಳಿದರು.

ಮಗನ ಸ್ಥಿತಿ ಕಂಡು ಕಂಗಾಲಾಗಿದ್ದ ಉಪೇಂದ್ರ ಡಾಕ್ಟರರಾಗಲಿ ಅವರ ಹೆಂಡತಿಯಾಗಲಿ ಪೋತದಾರ ಮಹಾಶಯರಿಗೆ ವಿರೋಧ ಮಾಡುವ ಸ್ಥಿತಿಯಲ್ಲಿರಲಿಲ್ಲ. ಹೊರಗೆ ಜನರ ಗದ್ದಲ ಸೇರಿತು. ಹುಡುಗನಿಗೆ ವಾಂತಿ ಮಾಡಿಸಿರಿ ಎಂದು ಕೆಲವರು ಹೇಳಿದರು. ಅವನಿಗೆ ಉಪ್ಪಿನ ನೀರು ಕುಡಿಯಲು ಕೊಡಿರಿ ಎಂದು ಇನ್ನು ಕೆಲವರು ಅಂದರು.

ಡಾಕ್ಟರರು ಮಗನ ನಾಡಿ ನೋಡತೊಡಗಿದರು. ಅವರ ಪತ್ನಿ ದೇವರಲ್ಲಿ ಪ್ರಾರ್ಥನೆ ಮಾಡಿಕೊಳ್ಳತೊಡಗಿದರು. ಗಜಾಲ ಚೌಕೀದಾರನ ಹೆಂಡತಿಗೆ ಒಂದು ಮಾತು ನೆನಪಿಗೆ ಬಂತು. ಕುಂಕುಮದಿಂದ ಔಷಧಿಯ ಪ್ರಭಾವ ನಷ್ಟವಾಗುತ್ತದೆಂದು ಡಾಕ್ಟರರೂ ಡಾಕ್ಟರಿಣಿಬಾಯಿಯೂ ಹೇಳಿರಲಿಲ್ಲವೆ? ಈ ಮಾತನ್ನು ಅವಳು ಭಂತೂನ ತಾಯಿಗೆ ಜ್ಞಾಪಿಸಿಕೊಟ್ಟಳು. ಭಂತೂನ ತಾಯಿ ಕೂಡಲೆ ಒಳಗೆ ಹೋಗಿ ಕುಂಕುಮ ತಂದು ಮಗನ ಹಣೆಗೆ ಹಚ್ಚಿದಳು.

ಮೊದಲು ಉಪೇಂದ್ರಡಾಕ್ಟರರಿಗೆ ಈ ಕೃತಿಯ ಅರ್ಥವಾಗದಿದ್ದರೂ ಒಂದೆರಡು ನಿಮಿಷಗಳಲ್ಲಿ ಹೆಂಡತಿ ಮಗನಿಗೆ ಕುಂಕುಮ ಹಚ್ಚಿದ್ದರ ಗುಟ್ಟು ಗೊತ್ತಾಯಿತು. ಅದರಂತೆ ಹೊಮಿಯೊಪಥಿ ಔಷಧಿಯ ಪ್ರಭಾವ ನಷ್ಟಮಾಡುವ ಇನ್ನೊಂದು ವಿಧಾನವೂ ನೆನಪಿಗೆ ಬಂತು. ಪೋತದಾರ ಮಹಾಶಯರು ಬಿಟ್ಟು ಹೋಗಿದ್ದ ಗುಡಗುಡಿಯನ್ನು ಹೊತ್ತಿಸಿ ಅವರು ಅದರ ಹೊಗೆಯನ್ನು ಸೇದಿಕೊಂಡು ಭಂತೂನ ಬಾಯಲ್ಲಿ ಬಿಡತೊಡಗಿದರು.

"ಹೊಗೆ ಸರಿಯಾಗಿ ಬಾಯಿಯೊಳಗೆ ಹೋಗುತ್ತಿಲ್ಲ. ಒಂದು ಚಮಚೆ ತಂದು ಭಂತೂನ ಬಾಯಿ ಬಿಡಿಸಿರಿ" ಎಂದು ಕೂಡಿದವರಲ್ಲಿ ಒಬ್ಬ ಮುದುಕಿ ಹೇಳಿದರು.

ಅಷ್ಟರಲ್ಲಿ ಪೋತದಾರ ಮಹಾಶಯರ ಧ್ವನಿ ಕೇಳಿಸಿತು : "ಸರಿಯಿರಿ. ಚಟರ್ಜಿ ಡಾಕ್ಟರರು ಬಂದಿದ್ದಾರೆ. ಹೊಟ್ಟೆಯೊಳಗಿಂದ ಹೊಮಿಯೊಪಥಿ ಔಷಧಿ ಹೊರಗೆ ತೆಗೆಯಲು ಅವರು ಒಂದು ಪಂಪಿನ ಯಂತ್ರವನ್ನೂ ತಂದಿದ್ದಾರೆ."

ಅದೇ ಹೊತ್ತಿಗೆ ಒಮ್ಮಿಂದೊಮ್ಮೆ ಭಂತೂ ಕಣ್ಣು ತೆರೆದ. ಹೊಟ್ಟೆಯೊಳಗಿಂದ ಔಷಧಿ ಹೊರಗೆ ತೆಗೆಯುವ ಯಂತ್ರದ ಸುದ್ದಿ ಕೇಳಿ ಅವನು ಗಾಬರಿಯಾಗಿ ಹೋಗಿದ್ದ. ಔಷಧಿ ಬಾಟ್ಲಿಗಳನ್ನು ಗಟಾರದಲ್ಲಿ ಬಿಸಾಡಿದ್ದಕ್ಕೆ ತಂದೆ ಇನ್ನು ಬಯ್ಯುವದಿಲ್ಲ, ಹೊಡೆಯುವದಿಲ್ಲವೆಂಬುದೂ ಅವನಿಗೆ ಇಷ್ಟರಲ್ಲಿ ನಂಬಿಗೆಯಾಗಿತ್ತು. ಹೊಡೆದರೂ ಎಷ್ಟೆಂದು ಹೊಡೆದಾರು? ಚಟರ್ಜಿ ಡಾಕ್ಟರರಂತೆ ಹೊಟ್ಟೆಕೊಯ್ದು ಪಂಪು ಹಾಕುವದಿಲ್ಲವಷ್ಟೇ- - - ?

ಅಂತೇ ಆತ ಒಮ್ಮೆಲೆ ಕಣ್ಣು ತೆರೆದಿದ್ದ. ಅಷ್ಟೇ ಅಲ್ಲ, ಆತ " ಅಪ್ಪಾ, ಗುಡಗುಡಿ ನನ್ನ ಹತ್ತರ ಕೊಡಿರಿ. ನಾನೇ ಹೊಟ್ಟೆಯೊಳಗೆ ಹೊಗೆ ತುಂಬಿಕೊಳ್ಳುತ್ತೇನೆ " ಎಂದ.

ಹೊಗೆ ಗಂಟಲಿಗೆ ಸಿಕ್ಕು ಬಂದ ಕೆಮ್ಮು ನಿಂತೊಡನೆ ಉಪೇಂದ್ರ ಡಾಕ್ಟರರು ಸಮಾಧಾನದ ಉಸಿರು ಬಿಟ್ಟರು. ಮಗ ಪೂರ್ಣ ಎಚ್ಚತ್ತದ್ದನ್ನು ಕಂಡ ಬಳಿಕ ಅವರ ಸ್ವಾಭಿಮಾನ ಜಾಗೃತವಾಯಿತು.

ಅವರು ಎದೆಯುಬ್ಬಿಸಿ ಹೇಳಿದರು: "ಚಟರ್ಜಿ ಡಾಕ್ಟರರನ್ನು ಕರೆತರಲು ಹೇಳಿದರಾರು? ಅವರು ಒಳಗೆ ಬರುವ ಶ್ರಮವಹಿಸಬಾರದು."

ಮೂಲ : ಎಸ್. ಭಾದುರಿ

# ಇದುವೇ ಜೀವ, ಇದು ಜೀವನ

ಮಿರಜ-ಅರಸೀಕೆರೆ ಪ್ಯಾಸೆಂಜರ ಗಾಡಿ ಹುಬ್ಬಳ್ಳಿಯನ್ನು ಬಿಡುವುದಕ್ಕೆ ಇನ್ನೂ ಹತ್ತು ಮಿನಿಟುಗಳಿದ್ದವು. ನಾನು ಕುಳಿತ ಡಬ್ಬಿಯಲ್ಲಿ ಎಳ್ಳು ಹಾಕಲು ಸ್ಥಳವಿದ್ದಿಲ್ಲ. ನಾನು ಕುಳಿತ ಡಬ್ಬಿಯ ಕಿಡಿಕಿಯ ಬಳಿ ಒಬ್ಬ ಟೊಣಪ ಪ್ಲಾಟ್‌ಫಾರ್ಮಿನ ಮೇಲೆ ಬಂದು ನಿಂತು, ಎದುರಿಗಿನ ಶೆಲ್ಫಿನ ಮೇಲಿದ್ದ ಗಂಟು ತೋರಿಸಿ ಅದನ್ನು ತೆಗೆದು ಕೊಡಲು ಹೇಳಿದ. ಹೊಸ ಪ್ಯಾಸೆಂಜರನೊಬ್ಬ ಒಳನುಗ್ಗುವ ಪೀಡೆ ತಪ್ಪಿತೆಂದು ನಾನು ಗಂಟನ್ನು ತೆಗೆದುಕೊಟ್ಟೆ. ಅವನು ಅದನ್ನು ಕಸಿದುಕೊಂಡಂತೆ ತೆಗೆದುಕೊಂಡು ಓಡತೊಡಗಿದ.

ಅಷ್ಟರಲ್ಲಿ ನನ್ನ ಎದುರಿಗಿನ ಸೀಟಿನ ಆಚೆ ತುದಿಯಲ್ಲಿ ಕುಳಿತ ಹೆಣ್ಣುಮಗಳು, "ನನ್ನ ಗಂಟು ಹೋಯಿತು" ಎಂದು ನನ್ನ ಹೆಸರಿನಿಂದ ಶಂಖವಾದ್ಯ ಪ್ರಾರಂಭಿಸಿದಳು. ಗಾಡಿಯಲ್ಲಿ ಕುಳಿತವರು ನನ್ನ ಅಧಿಕ ಪ್ರಸಂಗವನ್ನು ಟೀಕಿಸತೊಡಗಿದರು. ನನಗೆ ಏನು ಮಾಡಬೇಕೆಂದು ತೋಚದೆ ದಿಙ್ಮೂಢನಾಗಿ ಕುಳಿತಾಗ ಗಂಟನೊಡನೆ ಓಡುತ್ತಿದ್ದ ಟೊಣಪನನ್ನು ಕಂಡು ರೇಲ್ವೆ ಪೋಲೀಸನೊಬ್ಬನು ಅವನನ್ನು ಹಿಡಿದು ನಮ್ಮ ಡಬ್ಬಿಯತ್ತ ಎಳೆತಂದ.

"ಗಂಟನ್ನು ಯಾಕೆ ಒಯ್ದಿ?" ಎಂದು ಕೇಳಿದಾಗ ಅವನು, "ಯಪ್ಪಾ, ಇಕೀ (ಈಕೆ) ನನ್ನ ಗೂಡು ಬಾಳೇವು (ಬಾಳುವೆ) ಮಾಡಾಕ ಒಲ್ಲೆ ಅಂತ ಡಾವಣಗೇರಿಗೆ ಓಡಿ ಹೊಂಟಾಳ್ರಿ. ಗಂಟು ಒಯ್ದರೆ ತಾನೇ ಬರ್ತಾಳು ಅಂತ ಹಿಂಗ ಮಾಡಿದ್ನ್ರಿ" ಎಂದು ಹೇಳಿದ್ದು ಕೇಳಿ ಇಡೀ ಡಬ್ಬಿಯಲ್ಲಿ ನಗೆಗಡಲು ಉಕ್ಕಿತು.

—ಎನ್ಕೆ, ಬೆಳಗಾವಿ

ನಮ್ಮಣ್ಣನ ಮದುವೆಯ ಕೊನೆಯ ಅಂಕ ಮಾತ್ರ ಉಳಿದಿತ್ತು. ಹೊರಟು ನಿಂತ ತನ್ನ ಕಾಲೇಜು ಗೆಳೆಯರಿಗೆಲ್ಲ ತನ್ನ ನವ ವಧುವಿನ ಪರಿಚಯ ಮಾಡಿಕೊಡಬೇಕೆಂದು ಅಣ್ಣ ಹೆಂಡತಿಗೆ ಕರೆಕಳಿಸಿ ಬರಮಾಡಿಕೊಂಡ. ಮದುವೆಯಾಗಿ ಇಪ್ಪತ್ತನಾಲ್ಕು ತಾಸು ಕಳೆದಿಲ್ಲ, ಅಣ್ಣ ಅರವಿಂದನ ಈ ರೀತಿಯು ಅಷ್ಟೇನೆ ಬಂದದ್ದು ವಧೂ ಪಕ್ಷದವರಿಗೆ ಚೆನ್ನಾಗಿ ಕಾಣಿಸಲಿಲ್ಲ. ಹುಡುಗಿಯೊಬ್ಬಳನ್ನೇ ಕಳಿಸಲೊಲ್ಲದೆ ಅವಳ ತಂದೆಯವರು ತಮ್ಮ ಹೆಂಡತಿ ಮತ್ತು ಇತರ ಕೆಲ ಬಳಗದವರೊಡನೆ ವಧುವನ್ನು ಕರೆದುಕೊಂಡು ನಮ್ಮ ಬೀಡಾರಕ್ಕೆ ಬಂದರು. ಹಿಂಡು ಬಳಗದವರನ್ನು ಕಟ್ಟಿಕೊಂಡು ಬಂದದ್ದಕ್ಕೆ ನಮ್ಮಣ್ಣ ಮಾವನನ್ನೊಮ್ಮೆ ಕೆಂಗಣ್ಣಿನಿಂದ ನೋಡಿ ಲಜ್ಜಾಮೂರ್ತಿಯಂತಿದ್ದ ಹೆಂಡತಿಗೆ ಗೆಳೆಯರ ಪರಿಚಯ ಮಾಡಿಕೊಡಲು ಉಪಕ್ರಮಿಸಿದ.

ಇದು ಮುಗಿದಿತ್ತಷ್ಟೇ, ಕೆಂಪು ವಾಯಿಲ್ ಸೀರೆಯುಟ್ಟುಕಣ್ಣಿಗೆ ಗೋಗಲ್ ಹಾಕಿಕೊಂಡ ನೀಳ ಆಕಾರದ ನವ ತರುಣಿಯೊಬ್ಬಳು ಸರಸರನೆ ಅಲ್ಲಿಗೆ ಬಂದು, ಎಲ್ಲರ ಎದುರಲ್ಲಿಯೇ ಅರವಿಂದಣ್ಣನನ್ನು ತಬ್ಬಿಕೊಂಡು, "ಪ್ರಿಯತಮಾ, ಮರೆತೇಬಿಟ್ಟೆಯಾ?" ಎಂದು ಸುರಿದಳು.

ಎಲ್ಲರ ಮುಖ ಒಮ್ಮೆಲೆ ಗಂಭೀರವಾಯಿತು. ಅರವಿಂದನ ಮಾವನ ಮುಖ ಗಂಟ

ಕ್ಕಿತು. ಅತ್ತೆ ಹೌಹಾರಿ ಹೋದರು. ನಮ್ಮತ್ತಿಗೆ ನೆಲಕ್ಕೆ ಕುಸಿದು ಹೋಗುವವಳಂತಿದ್ದಳು. ಅರವಿಂದನ ಮೈ ಬೆವರಿತು, ನಾಲಗೆ ಒಣಗಿತು. ಬಂದವಳು ಅಷ್ಟಕ್ಕೆ ಬಿಡದೆ ಅರವಿಂದನ ಕೈಯಲ್ಲಿ ಕೈ ಹಾಕಿದಳು.

ವಾತಾವರಣ ಕಾವೇರಿ ಇನ್ನೇನು ಸ್ಫೋಟವಾಗಬೇಕು, ಅಷ್ಟರಲ್ಲಿ ಕಾಲೇಜಿನ ಗೆಳೆಯರು ಒಮ್ಮೆಲೇ ಬಿದ್ದುಬಿದ್ದು ನಗತೊಡಗಿದರು. ಬಂದಿದ್ದ ಯುವತಿ ಮತ್ತಾರಿರದೆ ಅಣ್ಣನ ಗೆಳೆಯ ವಾಸುವೇ ಆಗಿದ್ದನು.

ಮಾವಂದಿರ ಮುಖದಲ್ಲಿ ನಗೆ ಮೂಡಿತು, ಅತ್ತೆ ನಿಟ್ಟುಸಿರು ಬಿಟ್ಟರು. ಅತ್ತಿಗೆಯ ಮುಖದಲ್ಲಿ ನಗೆ ಮಿಂಚಿ ಕಪೋಲಗಳು ಗುಲಾಬಿ ಬಣ್ಣಕ್ಕೆ ತಿರುಗಿ ಅವಳು ತಟ್ಟನೇ ಒಳಗೆ ಓಡಿ ಹೋದಳು.

—ಪ್ರಭಾಕರ ಪುರಾಣಿಕ,
ಧಾರವಾಡ

ನಮ್ಮವರಿಗೆ ತಿಂಗಳಿಗೆ ಎರಡು ವಾರ ರಾತ್ರಿ ಪಾಳಿ. ಮನೆಗ ಬರುವಾಗ ರಾತ್ರಿ ಮೂರು ಹೊಡೆದಿರುತ್ತದೆ. ನಾನು ಭದ್ರವಾಗಿ ಬಾಗಿಲು ಮುಚ್ಚಿಕೊಂಡು ಮಲಗಿರುತ್ತೇನೆ. ಅವರು ಬಂದು ಬಾಗಿಲು ಬಡಿದು ಹೆಸರು ಹಿಡಿದು ಕೂಗಿದ ಮೇಲೆ ಎದ್ದು ಹೋಗಿ ಬಾಗಿಲು ತೆರೆಯುವುದು ರೂಢಿ.

ಈಚೆಗೆ ಊರಲ್ಲಿ ಕಳ್ಳಕಾರರ ಪುಂಡಾಟಕೆಯ ವರ್ತಮಾನಗಳ ಸಂಗಡ "ಒದರವ್ವ'' ಎಂಬ ಅನಿಷ್ಟ ದೇವತೆ ರಾತ್ರಿ ಬಂದು ಬಾಗಿಲು ಬಡಿದು ಹೆಸರು ಹಿಡಿದು ಕೂಗುತ್ತಾಳೆ, ಓ ಎಂದವರು ಸಾಯುತ್ತಾರೆ ಎಂಬ ಸುದ್ದಿ ಹಬ್ಬಿತ್ತಲ್ಲ. ಆವಾಗ ನಮ್ಮವರಿಗೆ ಮತ್ತೆ ರಾತ್ರಿ ಪಾಳಿಯ ಸರದಿ ಬಂದಿತ್ತು. ಸಾಲದ್ದಕ್ಕೆ ನಮ್ಮ ಸ್ವಲ್ಪ ದೊಡ್ಡವರಾದ ಮಕ್ಕಳು ಅಜ್ಜನ ಮನೆಗೆ ಹೋಗಿದ್ದರು. ನಾನು ಒಂಟಿಯಾಗಿ ಮನೆಯಲ್ಲಿ ಉಳಿಯಬೇಕಾಯಿತು.

ಒಂದು ರಾತ್ರಿ ಮನೆಯ ಪ್ರತಿಯೊಂದು ಬಾಗಿಲೂ ಭದ್ರವಾಗಿದೆಯೆಂದು ಖಂಡಿತ ಮಾಡಿಕೊಂಡು ನಾನು ಮಲಗಿದೆ. ಊರ ಸುದ್ದಿಗಳ ದೆಸೆಯಿಂದ ಒಂದು ಕಣ್ಣು ತೆರೆದುಕೊಂಡೇ ನಿದ್ದೆ ಹೋಗಿದ್ದೆನೆನ್ನಬಹುದು. ಸಾಸಿವೆಕಾಳು ಬಿದ್ದರೂ ಅದು ಬಾಂಬಿನ ಸ್ಫೋಟದಷ್ಟು ಗಟ್ಟಿಯಾಗಿ ಕೇಳಿಸುವ ಹಾಗಿತ್ತು ನನ್ನ ಮನಃಸ್ಥಿತಿ. ಎರಡು ಗಂಟೆಗೆ ಎಲ್ಲೋ ತುಸು ಕಣ್ಣು ಆಲಸ್ಯವಾಯಿತು.

"ಡಬ್-ಡಬ್-ಡಬ್!'' ನನ್ನನ್ನು ಬಡಿದೆಬ್ಬಿಸಿದಂತಾಯಿತು. ಎದುರಿಗೆ ರೇಡಿಯಂ ಮುಳ್ಳಿನ ಗಡಿಯಾರ ೨.೧೫ ತೋರಿಸುತ್ತಿತ್ತಷ್ಟೆ. ಇವರಂತೂ ಇಷ್ಟು ಬೇಗ ಬರುವವರಲ್ಲ....ಮತ್ತೆ ಡಬ್-ಡಬ್-ಡಬ್! ನನಗೆ ಗಾಬರಿಯಾಯಿತು. ಇವರಾದರೆ ಹೆಸರು ಹಿಡಿದು ಕೂಗುತ್ತಾರೆ. ಇದು ಯಾರೋ ಕಳ್ಳರಿರಬೇಕು. ಏನು ಮಾಡಲಿ? ತಲೆಬಾಗಿಲು ಅಗಳಿ ಸಾಕಷ್ಟು ಬಲವಾಗಿರಲಿಲ್ಲೆಂದು ನನಗೆ ನೆನಪಾಯಿತು. ಗಟ್ಟಿಯಾಗಿ ಒದ್ದರೆ ತೆರೆದು ಬಿಟ್ಟೀತು!

ನಾನು ಅಂಗೈಯಲ್ಲಿ ಜೀವ ಹಿಡಿದುಕೊಂಡು ಸ್ವಿಚ್ ಒತ್ತಿದೆ— ನಾನಿರುವ ಕೋಣೆಯ ದೀಪವಲ್ಲ, ಅಡಿಗೆ ಕೋಣೆಯದು. ಈ ಕೋಣೆಯಲ್ಲಿ ದೀಪ ಬಿದ್ದರೆ ನಾನೆಲ್ಲಿ ಕಳ್ಳರಿಗೆ ಕಾಣಿಸಿ ಅವರು ನುಗ್ಗುವರೋ ಎಂದು. ಹಾಸಿಗೆಯಲ್ಲಿ ಎದ್ದು ಕುಳಿತು ಕಂಡಕಂಡ ದೇವರನ್ನು ಧ್ಯಾನಿಸತೊಡಗಿದೆ.

ಐದೈದು ನಿಮಿಷಕ್ಕೊಮ್ಮೆ ಡಬ್-ಡಬ್ ಸದ್ದು. ನಿಮಿಷಗಳನ್ನು ಯುಗಗಳಂತೆ ಕಳೆಯುತ್ತ ಕುಳಿತೆ. ಮೂರು ಗಂಟೆಗೆ ಇವರು ಚಿತ್ತೈಸಿ ಬಾಗಿಲು ಬಡಿದು ಹೆಸರು ಹಿಡಿದು ಕೂಗಿದಾಗ ನನಗೆ ಜೀವ ಬಂದಂತಾಯಿತು. ಒದರವ್ವನಲ್ಲೆಂದು ಖಾತ್ರಿ ಮಾಡಿಕೊಂಡು ಬಾಗಿಲು ತೆರೆದೆ.

ಇವರು ಒಳಗೆ ಬಂದ ಕೂಡಲೆ ನಡುಗುತ್ತ ಸಂಗತಿಯನ್ನು ಹೇಳಿದೆ.

"ಹುಚ್ಚಿ ನೀನು!" ಎಂದರು ನಮ್ಮವರು. "ಬಾಗಿಲ ಬಳಿ ಯಾವುದೋ ನಾಯಿ ಮಲಗಿತ್ತು. ಅದರ ಮೈ ತುರಿಸುತ್ತಿರಬೇಕು. ಹಿಂಗಾಲಿನಿಂದ ಕರೆದುಕೊಳ್ಳುವಾಗ ಅದರ ಪೆಟ್ಟು ಬಾಗಿಲಿಗೆ ಬಿದ್ದು ಸದ್ದಾಗುತ್ತಿತ್ತು. ನೀನು ಪುಕ್ಕಿ ಕಳ್ಳರೆಂದು ತಿಳಿದಿ. ನಾನು ಇದೇ ಅದನ್ನೋಡಿಸಿ ಬಾಗಿಲು ಬಡಿದೆ" ಎಂದರು.

—ಶ್ರೀಮತಿ ಸುಚೇತಾಬಾಯಿ, ಹುಬ್ಬಳ್ಳಿ

ನನ್ನ ತಂದೆ ಟ್ಯಾಕ್ಸ್ ಇನಸ್ಪೆಕ್ಟರರ್ (ಮನರಂಜನಕರ ವಸೂಲಿ ಮಾಡುವವರು) ಆಗಿದ್ದರಿಂದ ನನಗೆ ಪುಕ್ಕಟೆಯಾಗಿ ನಾಟಕನೋಡಲು ಸಿಗುತ್ತಿತ್ತು.

ಒಮ್ಮೆ ಒಂದು ಸಾಮಾಜಿಕ ನಾಟಕ ನೋಡಲು ಹೋಗಿದ್ದೆ. ಒಂದು ದೃಶ್ಯದಲ್ಲಿ ಇಬ್ಬರು ಕಳ್ಳರು ನಾಯಕನ ಮನೆಯಲ್ಲಿ ಪ್ರವೇಶಿಸಿ ಆತನನ್ನು ಕಟ್ಟಿಹಾಕಿ ಒಡವೆ ವಸ್ತಗಳನ್ನು ಕದ್ದುಕೊಂಡು ಹೋದರು. ಕಳ್ಳರು ರಂಗದ ಬಲಪಕ್ಕದಲ್ಲಿ ಹಾಯ್ದು ಮರೆಯಾದರು. ಅವರು ಹೋದನಂತರ ನಾಯಕ ಹೇಗೋ ತನ್ನ ಕಟ್ಟುಗಳನ್ನು ಬಿಡಿಸಿಕೊಂಡು ಪೋಲೀಸರಿಗೆ ಕಳವಿನ ಸಮಾಚಾರ ತಿಳಿಸಿದ.

ಪೋಲೀಸರು ಬಂದರು. "ಎಷ್ಟು ಜನ ಬಂದಿದ್ದರು? ಅವರು ಯಾವ ಕಡೆ ಹೋದರು?" ಎಂದು ಪೋಲೀಸ ಸಬ್ ಇನಸ್ಪೆಕ್ಟರರು ನಾಯಕನನ್ನು ಕೇಳಿದರು.

ನಾಟಕದ ಕಥೆಯಲ್ಲಿ ತಲ್ಲೀನನಾಗಿ ಹೋಗಿದ್ದ ನನಗೆ ಸಬ್ ಇನಸ್ಪೆಕ್ಟರರ ಎರಡನೆ ಪ್ರಶ್ನೆ ಕಿವಿಗೆ ಬಿದ್ದೊಡನೆ ತಡೆಯುವದಾಗದೆ ಕುಳಿತಲ್ಲಿಂದ ಎದ್ದು ನಿಂತು "ಬಲ ಪಕ್ಕದಿಂದ ಓಡಿಹೋದರು" ಎಂದು ಆ ಕಡೆ ಬೊಟ್ಟು ಮಾಡಿ ತೋರಿಸಿದೆ.

ನನ್ನ ಅಕ್ಕಪಕ್ಕದಲ್ಲಿ ಕುಳಿತವರು ನನ್ನನ್ನು ದುರುಗಟ್ಟಿ ನೋಡಿ ಬಳಿಕ ಖೊ ಖೋ ಎಂದು ನಕ್ಕರು. ಒಂದು ನಿಮಿಷ ಹುಚ್ಚನಂತಾದ ನನಗೆ ಮರುಕ್ಷಣದಲ್ಲಿ ನನ್ನ ಮೂರ್ಖತನದ ಅರಿವಾಯಿತು. ಮತ್ತೇನೂ ಮಾಡಲಾರದೆ ನಾನೂ ಅವರೊಂದಿಗೆ ನಕ್ಕು ಬಿಟ್ಟೆ.

— ಎಚ್. ಜಿ. ರಾವ್

## ಸಂಪ್ರದಾಯಗಳು

ಸಂಪ್ರದಾಯಗಳು ದೀಪದ ಕಂಬಗಳಂತೆ. ಚತುರರು ಅವನ್ನು ತಮ್ಮ ಮಾರ್ಗದರ್ಶನಕ್ಕಾಗಿ ಉಪಯೋಗಿಸುವರು. ಕುಡುಕರು ತಮ್ಮ ಅಸ್ಥಿರತೆಗೆ ಅವುಗಳಿಂದ ಆಸರೆಯನ್ನು ಪಡೆಯುವರು.

—ವೈಕೌಂಟ್ ಹೈಲ್‌ಶಾಂ



ಖುಸ್ರುವಿನ ಗೋರಿ

**ಚಕ್ರವರ್ತಿ ಅಕಬರನ ಮೆಚ್ಚಿನ ಮೊಮ್ಮಗ, ವಿದ್ಯಾ-ಗುಣ ಸಂಪನ್ನ—ಆದರೆ ವಿಧಿ ಅವನನ್ನು ಎಂಥ ಕಷ್ಟಕ್ಕೆ ಸಿಲುಕಿಸಿತು !**

# ರಾಜಕುಮಾರ ಖುಸ್ರು

**ವಿ. ಎಸ್. ನರವಣೆ**

ಇತಿಹಾಸವೆಂದೂ ಸೋತವರ ಮೇಲೆ ಎಳ್ಳಷ್ಟು ಕನಿಕರ ತೋರಿಸಿಲ್ಲ. ಅದು ಅವರನ್ನು ತಿರಸ್ಕಾರದಿಂದ ಕಂಡು ಮುಂದೆ ಸಾಗುತ್ತದೆ'' ಎಂದು ಸ್ಟೀಫನ್ ತ್ಸ್ವೈಕ್ ಹೇಳಿದ್ದಾನೆ ಆದರೆ ಎಂದಾದರೊಮ್ಮೆ ನಾವು ಈ ಪರಾಜಿತರ ಕಥೆಯನ್ನು ಅವಲೋಕಿಸಿದಾಗ ಗೆಲುವಿನ ಮಗ್ಗಲಲ್ಲೇ ಸೋಲಿರುವದನ್ನೂ ಕೀರ್ತಿ ಕಾಮಿನಿಯ ಕಣ್ಣುಮುಚ್ಚಾಲೆಯ ವಿಲಾಸವನ್ನೂ ಕಾಣಬಹುದಾಗಿದೆ.

ವೈಭವಶಾಲಿ ಸಾಮ್ರಾಟ ಜಹಾಂಗೀರನ, ತಾಜಮಹಲನ್ನು ಕಟ್ಟಿಸಿದ ಕೀರ್ತಿಶಾಲಿ ಶಾಹಜಾನನ ಹೆಸರನ್ನು ಯಾರು ಕೇಳಿಲ್ಲ! ಆದರೆ ಜಹಾಂಗೀರನ ಬದಲು ಚಕ್ರವರ್ತಿಯಾಗಬಹುದಾಗಿದ್ದ ಅಕಬರನ ಮೊಮ್ಮಗ ರಾಜಕುಮಾರ

" ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ "ದಿಂದ

ಖುಸ್ರುವಿನ ಹೆಸರನ್ನು ನೆನೆದುಕೊಳ್ಳುವವರೆಷ್ಟು ಮಂದಿ ಇದ್ದಾರೆ? ಖುಸ್ರು ಯಶಸ್ವಿಯಾಗಿದ್ದರೆ ಜಹಾಂಗೀರನಾಗಲಿ, ಶಾಹಜಹಾನನಾಗಲಿ ಮೊಗಲ ಸಿಂಹಾಸನವನ್ನೇ ಏರುತ್ತಿರಲಿಲ್ಲ. ಮೊಗಲ ಇತಿಹಾಸದಲ್ಲಿ ಖುಸ್ರುವಿನ ಸ್ಥಾನ ಹಿಂದಿನದು. ಇತಿಹಾಸಕಾರರು ಅವನನ್ನು ಮೂಲೆಗೊತ್ತಿದ್ದಾರೆ. ಆದರೆ ಖುಸ್ರುವಿನ ಜೀವನ ಒಂದು ಅದ್ಭುತರಮ್ಯ ದುರಂತ ಕಥೆಯಾಗಿದೆ. ಮಹಾ ಘಟನೆಗಳು ಕೂಡ ಎಷ್ಟೊಂದು ಕ್ಷುಲ್ಲಕ ಕಾರಣಗಳನ್ನು ಅವಲಂಬಿಸಿರುತ್ತವೆ ಎಂಬುದಕ್ಕೆ ಖುಸ್ರುವಿನ ಜೀವನ ಒಂದು ಉತ್ಕೃಷ್ಟ ಉದಾಹರಣೆಯಾಗಿದೆ.

ಕೆಲವರು "ಮುಟ್ಟಿದ್ದೆಲ್ಲ ಚಿನ್ನ" ವಾದರೆ ಇನ್ನು ಕೆಲವರು ಚಿನ್ನ ಮುಟ್ಟಿದರೂ ಮಸಿಯಾಗುತ್ತದೆ. ರಾಜಕುಮಾರ ಖುಸ್ರುವಿನ ಕೈ ಮ:ಸಿ-ಕೈ. ಜೀವನದ ಪ್ರತಿ ಹೆಜ್ಜೆಗೂ ಮುಗ್ಗರಿಸುವದು ಅವನ ಹಣೆಬರಹವಾಗಿತ್ತು. ಆತನ ಸ್ಪರ್ಶದಿಂದ ನಾಶವಾಗದ ವಸ್ತುವಿರಲಿಲ್ಲ. ತಪ್ಪು ಸಲಹೆ ಕೊಡದವರ ಹಿತೋಕ್ತಿಯನ್ನು ಆತ ಕೇಳುತ್ತಿರಲಿಲ್ಲ.

ಹಾಗಿದ್ದರೂ ಅವನಲ್ಲಿ ಜನಾದರ, ಜನಪ್ರೇಮಗಳನ್ನು ಗಳಿಸುವ ಗುಣಗಳಿದ್ದವು. ಆತನ ಸ್ಥಾನದಲ್ಲಿರುವವನಲ್ಲಿ ಇರಬೇಕಾದ ಸದ್ಗುಣಗಳೂ ಸಾಮರ್ಥ್ಯವೂ ಅವನಲ್ಲಿದ್ದವು. ಕ್ರೌರ್ಯವೇ ಮನೆಮಾತಾಗಿದ್ದ ಆ ಕಾಲದಲ್ಲಿ ಖುಸ್ರು ದಯಾಳುವಾಗಿದ್ದ. ಮೋಸವೇ ನೀತಿಯಾಗಿದ್ದ ಆ ಕಾಲದಲ್ಲಿ ಆತ ತನ್ನವರಿಗೆ ನಿಷ್ಠಾವಂತನಾಗಿದ್ದ. ಅಂಕೆಯಿಲ್ಲದ ವಿಲಾಸಜೀವನ ನಡೆಸುವ ಆ ಕಾಲದಲ್ಲಿ ಆತ ಏಕಪತ್ನೀವ್ರತಸ್ಥನಾಗಿದ್ದ. ಆತ ಶೂರನಾಗಿದ್ದ, ವಿದ್ಯಾವಂತನಾಗಿದ್ದ, ಬುದ್ಧಿಶಾಲಿಯಾಗಿದ್ದ. ಆದರೆ ಇಷ್ಟೆಲ್ಲ ಗುಣಸಂಪನ್ನನಾಗಿದ್ದರೂ ತನ್ನ ಅಜ್ಜ ಅಕಬರನ ಕೊನೆಗಾಲದ ದಿನಗಳನ್ನು ಕಷ್ಟಮಯವಾಗಿ ಮಾಡಿದ. ತನ್ನ ತಾಯಿಯ ಆತ್ಮಹತ್ಯೆಗೆ ಕಾರಣನಾದ. ಗುರು ಅರ್ಜುನ ಸಿಂಗರ ಸಾವಿಗೆ ಹೊಣೆಯಾದ. ತನ್ನ ಮಿತ್ರರು ಅಪಾರ ಕಷ್ಟಕ್ಕೊಳಗಾದದ್ದನ್ನು ಆತ ನೋಡಿದ. ಸ್ವತಃ ಸೆರೆಸಿಕ್ಕು, ಹಿಂಸೆಗೊಳಗಾಗಿ, ಕಣ್ಣು ಕೀಳಿಸಿಕೊಂಡು, ಪರಿತಪಿಸಿ ಕೊನೆಗೆ ದುರ್ಮರಣವನ್ನಪ್ಪಿದ.

ಖುಸ್ರುವಿನ ಕಥೆಯ ಪ್ರಕರಣಗಳು ಒಂದಕ್ಕಿಂತ ಒಂದು ಹೆಚ್ಚು ಕರುಣಾಜನಕವಾಗಿವೆ.

* * *

ಅಕಬರನ ಕಾಲ ರಾಜಕೀಯ ವಿವಾಹಗಳ ಕಾಲವಾಗಿತ್ತು. ರಜಪೂತರೊಡನೆ ದೃಢಸ್ನೇಹದ ಸಂಬಂಧವನ್ನು ಬೆಳೆಸಿಕೊಳ್ಳುವದಕ್ಕಾಗಿ ಅಕಬರನು ತನ್ನ ಮಗ ಸಲೀಮನಿಗೆ (ಜಹಾಂಗೀರ) ರಾಜಾ ಭಗವಾನದಾಸನ ಮಗಳು ಮಾನಬಾಯಿಯನ್ನು ಲಗ್ನ ಮಾಡಿದ. ಸಲೀಮನಿಗೆ ಮಾನಬಾಯಿಯಲ್ಲಿ ಸುಲ್ತಾನುನ್ನೀಸಾ ಬೇಗಂ ಎಂಬ ಮಗಳೂ ಖುಸ್ರು ಎಂಬ ಮಗನೂ ಆದರು. ಖುಸ್ರು ಲಾಹೋರದಲ್ಲಿ ೧೫೮೭, ಅಗಸ್ಟ ೬ರಂದು ಜನ್ಮಿಸಿದ.

ಖುಸ್ರು ಮುದ್ದಾಗಿ, ಎಲ್ಲರ ಪ್ರೀತಿಗೆ ಪಾತ್ರನಾಗಿ ಬೆಳೆದ. ಆತನಿಗೆ ಪರ್ಶಿಯನ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಲಭ್ಯವಿರುವ ಎಲ್ಲ ಉಚ್ಚ ಶಿಕ್ಷಣವನ್ನು ಕೊಡಿಸಲಾಯಿತು. ಅಬುಲ್ ಫಜಲ್ ಮತ್ತು ಶಿವದತ್ತ ಭಟ್ಟಾಚಾರ್ಯರು ಅವನ ಗುರುಗಳಾಗಿದ್ದರು. ಆತನಿಗೆ ಯೋಗ್ಯ ಶಾರೀರಿಕ ಮತ್ತು ನೈತಿಕ ಶಿಕ್ಷಣವೂ ಕೊಡಲ್ಪಟ್ಟಿತು. ಖುಸ್ರು ನೀತಿವಂತ, ಶೂರ ತರುಣನಾಗಿ ಬೆಳೆದ.

ಅಕಬರನ ಬಾಲ್ಯಸ್ನೇಹಿತನೂ ಸಲಹೆಗಾರನೂ ಆದ ಅಜೀಜ ಕೋಕಾನ ಮಗಳೊಡನೆ ಖುಸ್ರುವಿನ ಲಗ್ನವಾಯಿತು. ಖುಸ್ರು ಮತ್ತು ಅವನ ಹೆಂಡತಿಯಲ್ಲಿ ಪವಿತ್ರವಾದ ಪ್ರೇಮ ಬೆಳೆದು ಬಂದಿತು. ಜಹಾಂಗೀರನ ಹೆಂಡತಿ ನೂರ್ ಜಹಾನಳು ತನಗೆ ಮೊದಲಿನ ಗಂಡನಿಂದ ಹುಟ್ಟಿದ ಮಗಳನ್ನು ಕೊಡಲು ಬಯಸಿದರೂ ಖುಸ್ರು ಒಪ್ಪಲಿಲ್ಲ. ಹೆಂಡತಿಯ ಮೇಲಿನ ಅವನ ಪ್ರೇಮ ಅಷ್ಟು ಗಾಢವೂ ದಿವ್ಯವೂ ಆಗಿದ್ದಿತು.

ಲಗ್ನವಾದಾಗ ಖುಸ್ರು ಎಲ್ಲರಿಗೆ ಬೇಕಾದವನಾಗಿದ್ದ. ತಾಯಿಯ ಕಡೆಯಿಂದ ಅವನು ರಾಜಾ

ಮಾನಸಿಂಹನ ಸಂಬಂಧಿಕನಾಗಿದ್ದ. ರಾಜಾ ಮಾನಸಿಂಗ ಅಕಬರನ ಅತ್ಯಂತ ವಿಶ್ವಾಸಿಕ ಸೇನಾಪತಿ. ಖುಸ್ರುವಿನ ಮಾವ ಅಜೀಜ ಕೋಕಾ ಎಂದರೆ ಭಾರತದ ಭಾವಿ ಚಕ್ರವರ್ತಿಗಳ ಶಿಲ್ಪಿ ಎಂದು ಜನ ಭಾವಿಸುತ್ತಿದ್ದರು.

ವಿಲಾಸಿ ಜೀವನದಲ್ಲಿ ಮಗ್ನನಾಗಿ ಆಗಾಗ ಮದ್ಯಪಾನದಿಂದ ಮತ್ತನಾಗಿರುತ್ತಿದ್ದ ಜಹಾಂಗೀರನಿಗಿಂತಲೂ ಅವನ ಮಗ ಖುಸ್ರುವೇ ಸಿಂಹಾಸನವನ್ನೇರುವದು ಒಳಿತು ಎಂದು ಅಕಬರನ ದರ್ಬಾರಿನ ಜನರು ಆಡಿಕೊಳ್ಳತೊಡಗಿದರು. ಇದರಿಂದ ಖುಸ್ರುವಿನ ಹೃದಯದಲ್ಲಿ ಚಕ್ರವರ್ತಿಯಾಗುವ ಹಂಬಲ ಹುಟ್ಟಿತು.

ಕ್ರಮೇಣ ಆತ ತನ್ನ ತಂದೆಗೆ ವಿರೋಧವಾಡತೊಡಗಿದ. ಖುಸ್ರುವಿನ ಮಾವ ಕೂಡ ಖುಸ್ರುವಿಗೆ ಉತ್ತೇಜನವಿತ್ತನೇ ಹೊರತು ತಂದೆಯನ್ನು ವಿರೋಧಿಸುವದು ಒಳಿತಲ್ಲವೆಂದು ಹೇಳಲಿಲ್ಲ. ಪರಿಸ್ಥಿತಿ ವಿಕೋಪಕ್ಕೆ ಹೋಗಲು ಖುಸ್ರುವಿನ ತಾಯಿ ಮಾನಬಾಯಿಗೆ ಅದು ಅಸಹ್ಯವಾಯಿತು. ಜಹಾಂಗೀರನಲ್ಲಿ ಏಕನಿಷ್ಠೆಯಿಂದಿದ್ದ ಅವಳಿಗೆ ತನ್ನ ಮಗ ತಂದೆಯನ್ನು ಧಿಕ್ಕರಿಸುವದು ಸಹನವಾಗದೆ ಅವಳು ಖುಸ್ರುವನ್ನು ಬಲವಾಗಿ ಖಂಡಿಸಿ ಬೈದು ಉಪದೇಶಮಾಡಿದಳು. ಆದರೆ ಖುಸ್ರು ತನ್ನ ನಡತೆಯನ್ನು ತಿದ್ದಿ ಕೊಳ್ಳದ್ದನ್ನು ಕಂಡು ಹತಾಶಳಾದ ಅವಳು ಅಧಿಕಪ್ರಮಾಣದಲ್ಲಿ ಅಫುವನ್ನು ತಿಂದು ೧೬೦೪, ಮೇ ೧೬ ರಂದು ಪ್ರಾಣ ನೀಗಿದಳು. ಜಹಾಂಗೀರ ಬಹುಕಾಲ ಈ ಪತ್ನೀ ವಿಯೋಗದ ದುಃಖದಿಂದ ಚೇತರಿಸಿಕೊಳ್ಳಲಿಲ್ಲ. ಕೆಲಕಾಲ ಈ ಸಾವು ತಂದೆ-ಮಕ್ಕಳನ್ನು ಒಂದುಗೂಡಿಸಿತೆನ್ನಬಹುದು. ಆದರೆ ರಾಜಕಾರಣಿಗಳು ಮನಸ್ಸು ಮಾಡಿದರೆ ಹರಿದು ಹಾಕಲಾರದ ಬಂಧನವಾದರೂ ಯಾವುದಿದೆ?

* * *

ಅಕಬರನ ಆಳಿಕೆಯ ಕೊನೆಯ ವರ್ಷದಲ್ಲಿ ಜಹಾಂಗೀರ ಮತ್ತು ಖುಸ್ರುವಿನ ನಡುವೆ ಮೊದಲನೆಯ ಬಹಿರಂಗ ಘರ್ಷಣೆ ನಡೆಯಿತು. ಅದೇ ಬೇನೆಯಿಂದೆದ್ದ ಅಕಬರನ ಮನೋರಮಿಸಲೆಂದು ಆನೆಯ ಕಾಳಗವೊಂದನ್ನು ಏರ್ಪಡಿಸಿದ್ದರು. ದ್ವಂದ್ವ ಯುದ್ಧಕ್ಕೆ ತಂದ ಆನೆಗಳಲ್ಲಿ ಒಂದು ಖುಸ್ರುವಿನ "ಅಪೂರ್ವ" ಮತ್ತು ಇನ್ನೊಂದು ಜಹಾಂಗೀರನ "ಗಿರಾಂಬರ". ಪದ್ಧತಿಯಂತೆ ಪ್ರತಿಸ್ಪರ್ಧಿಗಳಲ್ಲಿ ಒಂದು ತೀರ ದುರ್ಬಲವೆಂದು ತೋರಿದರೆ ಅದರ ಸಹಾಯಕ್ಕೆಂದು ಮೂರನೆಯ ಆನೆಯೊಂದನ್ನು ಕಣಕ್ಕೆ ತಂದಿದ್ದರು.

"ಗಿರಾಂಬರ"ದೆದುರು "ಅಪೂರ್ವ"ದ ಆಟ ಸಾಗದಂತಾಗಲು ಕಾದಿಟ್ಟ ಆನೆಯನ್ನು ರಣಕ್ಕಿಳಿಸಿದರು. ಆಗ ಜಹಾಂಗೀರನ ಅಭಿಮಾನಿಗಳು "ಕಾಳಗ ಮುಗಿದಿದೆ. ಸಹಾಯಕ ಆನೆ ಬೇಡ" ಎಂದು ಕೂಗಿದರು. ಎದ್ದ ಗದ್ದಲದಲ್ಲಿ ಭ್ರಮೆಗೊಂಡು ಅಪೂರ್ವ ಮತ್ತು ಸಹಾಯಕ ಆನೆ ಕಣಬಿಟ್ಟು ಓಡಿದವು. ತನ್ನ ಆನೆ ಸೋತದ್ದರಿಂದ ಖತಿಗೊಂಡ ಖುಸ್ರು ಅಕಬರನ ಬಳಿಗೆ ಹೋಗಿ ತನ್ನ ತಂದೆಯನ್ನು ಮನಸ್ವಿಯಾಗಿ ನಿಂದಿಸಿದ

ಅಕಬರನಿಗೆ ತುಂಬ ದುಃಖವಾಯಿತು. ಇಂಥ ಸಣ್ಣಪುಟ್ಟ ಮಾತಿಗಾಗಿ ತಂದೆ-ಮಕ್ಕಳು ಈ ರೀತಿ ವ್ಯವಹರಿಸಿದರೆ ತಾನು ೫೦ ವರ್ಷಗಳ ಅವಿರತ ಶ್ರಮದಿಂದ ಕಟ್ಟಿದ ಸಾಮ್ರಾಜ್ಯದ ಗತಿಯೇನು ಎಂದು ಅವನಿಗೆ ಚಿಂತೆಯಾಯಿತು. ಆತ ಚಿಂತೆಯಿಂದ ಮತ್ತೆ ಹಾಸಿಗೆ ಹಿಡಿದ.

ಖುಸ್ರುವಿನ ಬೆಂಬಲಿಗರು ಈಗ ಬಹಿರಂಗಕ್ಕೆ ಬಂದರು. ಅಜೀಜ ಕೋಕಾ ಮತ್ತು ರಾಜಾ ಮಾನಸಿಂಗರು ಸರದಾರರ ಸಭೆಯೊಂದನ್ನು ಕರೆದು ಚಂಚಲ ಸ್ವಭಾವದ ಜಹಾಂಗೀರನ ಬದಲು ಖುಸ್ರುವನ್ನು ಯುವರಾಜನೆಂದು ಘೋಷಿಸಬೇಕೆಂದು ಸೂಚಿಸಿದರು. ಜಹಾಂಗೀರನ ಸ್ಥಿತಿ ಕಠಿಣವಾಯಿತು. ಆತ ಆಗ್ರಾದಿಂದ ಅಲಹಾಬಾದಕ್ಕೆ ಪಲಾಯನ ಮಾಡಲು ಸಿದ್ಧನಾದ. ಆದರೆ ಅಷ್ಟರಲ್ಲಿ ಜಹಾಂಗೀರನ ದೈವ ಅವನ ನೆರವಿಗೆ ಬಂತು. ಪರಂಪರಾಗತ ಪದ್ಧತಿಯನ್ನು ಬಿಟ್ಟು ತಂದೆಗೆ ಸಿಗಬೇಕಾದ ಪಟ್ಟವನ್ನು ಮಗನಿಗೀಯಲು ಪ್ರಭಾವಶಾಲಿಗಳಾದ ಸೈಯ್ಯದ

ಜನರು ಸಿದ್ಧರಿಲ್ಲವೆಂಬ ಸುದ್ದಿ ಬರಲು ಸರದಾರರು ಜಹಾಂಗೀರನಿಂದ ಆತನಿಗೆ ವಿರುದ್ಧವಾಗಿ ವರ್ತಿಸಿದವರನ್ನು ಶಿಕ್ಷಿಸುವದಿಲ್ಲ ಎಂಬ ವಚನ ತೆಗೆದುಕೊಂಡು ಅವನನ್ನೇ ಸಿಂಹಾಸನಾಧಿಕಾರಿಯೆಂದು ಒಪ್ಪತಕ್ಕದ್ದೆಂದು ನಿರ್ಧರಿಸಿದರು.

ಜಹಾಂಗೀರ ಅದರಂತೆ ವಚನವಿತ್ತ. ಸಾಯುವದಕ್ಕೆ ತುಸು ಹೊತ್ತು ಮುಂಚೆ ಅಕಬರನು ಸಾಮ್ರಾಜ್ಯದ ಅಧಿಕಾರಸೂತ್ರವನ್ನು ಜಹಾಂಗೀರನ ಕೈಗೊಪ್ಪಿಸಿದ.

* * *

ಈ ದುರಂತ ಕಥೆಯಲ್ಲಿ ಅತ್ಯಂತ ಹೃದಯಸ್ಪರ್ಶಿ ಭಾಗವೆಂದರೆ ತನ್ನ ಅವಿಧೇಯ ಮಗನಲ್ಲಿ ಜಹಾಂಗೀರ ಇಟ್ಟಿದ್ದ ಅಕುಟಿಲಪ್ರೇಮವೇ ಆಗಿದೆ. ಜಹಾಂಗೀರನು ಖುಸ್ರುವಿನ ಸಹಕಾರಿಗಳನ್ನು ಕ್ಷಮಿಸಿದ್ದಲ್ಲದೆ ತುಂಬಿದ ಸಭೆಯಲ್ಲಿ ಮಗನನ್ನು ಅಪ್ಪಿಕೊಂಡು ಆಗ್ರಾದಲ್ಲಿರುವ ತನ್ನ ಮಹಲನ್ನು ದುರಸ್ತಿ ಮಾಡಿಸಿಕೊಳ್ಳಲೆಂದು ಖುಸ್ರುವಿಗೆ ಒಂದು ಲಕ್ಷ ರೂಪಾಯಿಗಳನ್ನು ಕೊಟ್ಟನು.

ಮಗ ಹಿತ್ತಾಳಿ ಕಿವಿಯವ ಎಂದು ಗೊತ್ತಿದ್ದ ಜಹಾಂಗೀರ ಖುಸ್ರುವಿನ ಮೇಲೆ ಕಣ್ಣಿಟ್ಟುಕೊಂಡೇ ಇದ್ದ. ಹೊಸ ವಿದ್ರೋಹದ ಸುದ್ದಿ ಅವನ ಕಿವಿಗೆ ಬಿತ್ತು. ನಿಜವಾಗಿ ಖುಸ್ರುವನ್ನು ಜಹಾಂಗೀರ ಸೆರೆಯಾಳಿನಂತೆ ಕಂಡಿರಲಿಲ್ಲ. ಆದರೆ ತಾನು ಓಡಿಹೋಗಿ ಸ್ವತಂತ್ರನಾಗದಿದ್ದರೆ ಸಾಯುವವರೆಗೂ ತಾನು ಬಂದಿಯಂತಿರಬೇಕಾದೀತು ಎಂದು ಖುಸ್ರು ಭಾವಿಸಿಕೊಂಡ. ಬಂಡೇಳುವಂತೆ ಆತನ ಸಹಕಾರಿಗಳು ಆತನನ್ನು ಪ್ರೋತ್ಸಾಹಿಸಿದರು. ೧೬೦೬, ಎಪ್ರಿಲ್ ೬ರಂದು ಅಕಬರನ ಗೋರಿಯ ದರ್ಶನದ ನೆಪಮಾಡಿ ಮನೆಯಿಂದ ಹೊರಬಿದ್ದ ಖುಸ್ರು ಕೆಲ ತಾಸುಗಳಲ್ಲಿಯೆ ಮಥುರಾ ನಗರವನ್ನು ತಲುಪಿದ. ಬಂಡಾಯ ಪ್ರಾರಂಭವಾಯಿತು.

ಖುಸ್ರುವಿನ ಅನುಯಾಯಿಗಳ ಸಂಖ್ಯೆ ಹೆಚ್ಚಿತು. ಮೊಗಲ ಸೈನ್ಯದ ತೋಫುಖಾನೆಯ ಸೇನಾಪತಿ ಮತ್ತು ಲಾಹೋರದ ದಿವಾನ ಅಬ್ದುರ್ ರಹಮಾನರು ಖುಸ್ರುವಿನ ಪಕ್ಷವನ್ನು ಸೇರಿಕೊಂಡರು. ಬಂಡುಗಾರರು ಮೊಗಲ ಬಾದಶಾಹನ ಲಾಯದಿಂದ ಕುದುರೆಗಳನ್ನು ಅಪಹರಿಸಿಕೊಂಡು ಅನೇಕ ಕಡೆಗಳಲ್ಲಿ ಬೊಕ್ಕಸಗಳನ್ನು ಲೂಟಿ ಮಾಡಿದರು. ಆದರೆ ಸಾಮಾನ್ಯ ಪ್ರಜೆಗಳ ನಿಷ್ಠೆ ಸಿಂಹಾಸನದಿಂದ ಕದಲಲಿಲ್ಲ. ಜಹಾಂಗೀರ ದಕ್ಷಿಣ ದಿಕ್ಕಿನಿಂದ ಬಂಡುಗಾರರ ಮೇಲೆ ಆಕ್ರಮಣ ಮಾಡಿದಾಗ ಖುಸ್ರುವಿಗೆ ಗೆಲುವಿನ ಆಶೆ ಹಾರಿತು. ಭೈರವಾಲದಲ್ಲಿ ಖುಸ್ರು ಪೂರ್ಣ ಪರಾಜಿತನಾಗಿ ಕಾಬೂಲಕ್ಕೆ ಓಡಿಹೋಗುತ್ತಿದ್ದಾಗ ಸಿಕ್ಕಿಬಿದ್ದನು. ಅವನನ್ನು ಲಾಹೋರಿಗೆ ಹಿಡಿದು ತಂದರು.

ಬಂಡುಗಾರರನ್ನು ಉಗ್ರವಾಗಿ ಶಿಕ್ಷಿಸಿದರೂ ಜಹಾಂಗೀರ, ಖುಸ್ರುವಿನಲ್ಲಿ ದಯೆಯನ್ನೇ ತೋರಿದ. ಮಗನನ್ನು ಒಯ್ದು ಸೆರೆಮನೆಯಲ್ಲಿಟ್ಟ. ಮಗನ ಮೇಲೆ ಬಂದ ಸಿಟ್ಟಿಗಿಂತಲೂ ಮಗನ ದುರ್ಬುದ್ಧಿ ಕಂಡು ಜಹಾಂಗೀರನಿಗೆ ಆದ ದುಃಖ ಮಿಗಿಲಾಗಿತ್ತು. ಆತ ಎಷ್ಟೋ ಸಲ ಅಳುತ್ತ ಸಭೆಯಿಂದ ಎದ್ದುದೂ ಉಂಟು. ಆದರೆ ಅವನ ಸಲಹೆಗಾರರು ಬಂಡಾಯವನ್ನು ಸಮೂಲ ನಾಶ ಮಾಡಬೇಕಾದ ಅಗತ್ಯವನ್ನು ಬಿಂಬಿಸಿದಾಗ ಜಹಾಂಗೀರ ಬೇಡಿತೊಡಿಸಿದ ಖುಸ್ರುವಿನ ಮೆರವಣಿಗೆಯನ್ನು ಬೀದಿಯಲ್ಲಿ ಸ್ವಲ್ಪ ದೂರ ಮಾತ್ರವಾದರೂ ಮಾಡಿಸಬೇಕಾಯಿತು.

ಆದರೆ ಈ ಬಂಡಾಯದ ಘೋರ ಪರಿಣಾಮವಾದದ್ದು ಬೇರೆ ರೀತಿಯಲ್ಲಿಯೇ. ಶೀಖರ ಧರ್ಮಗುರು ಅರ್ಜುನ ಸಿಂಗನು ಲಾಹೋರ ದಾಳಿಯ ಕಾಲದಲ್ಲಿ ಖುಸ್ರುವಿಗೆ ಧನ ಸಹಾಯವನ್ನಿತ್ತು ಆಶೀರ್ವದಿಸಿದ್ದನು. ಬಂಡಾಯ ಹತ್ತಿಕ್ಕಲ್ಪಟ್ಟ ನಂತರ ಅರ್ಜುನ ಸಿಂಗನ ಮೇಲೆ ಒಳಸಂಚಿನ ಆರೋಪ ಹೊರಿಸಲ್ಪಟ್ಟು ಆತನಿಗೆ ಬಹುದೊಡ್ಡ ದಂಡವನ್ನು ವಿಧಿಸಲಾಯಿತು. ತನಗೂ ರಾಜಕೀಯಕ್ಕೂ ಸಂಬಂಧವಿಲ್ಲ; ಬಂಡುಗಾರನೆಂದು ಖುಸ್ರುವಿಗೆ ತಾನು ಸಹಾಯಮಾಡಿರದೆ ಕೇವಲ ತೊಂದರೆಗೊಳಗಾಗಿ ತನ್ನ ಸಹಾಯ ಯಾಚಿಸಿದವನಿಗೆ ಸಹಾಯಮಾಡಿದೆ; ಬೇರೆ ಯಾರಾದರೂ

ಅಂಥ ಪರಿಸ್ಥಿತಿಯಲ್ಲಿ ಯಾಚಿಸಿದರೆ ಇನ್ನಾದರೂ ತಾನು ಸಹಾಯ ಮಾಡುವವನೇ ಎಂದು ಹೇಳಿ ಅರ್ಜುನಸಿಂಗ ದಂಡ ತೆರಲು ನಿರಾಕರಿಸಿದ. ಅರ್ಜುನ ಸಿಂಗನ ಮರಣದ ನಿಜ ಕಾರಣವನ್ನು ನಿರ್ಣಯಿಸುವದು ಸಾಧ್ಯವಿಲ್ಲ. ಆದರೆ ದಂಡ-ವಸೂಲಿಗಾಗಿ ನೇಮಿಸಲ್ಪಟ್ಟ ಅಧಿಕಾರಿಗಳು ಅವನನ್ನು ಚಿತ್ರಹಿಂಸೆಗೆ ಗುರಿ ಮಾಡಿದ್ದರಿಂದ ಅವನು ಸತ್ತಿರಬೇಕು. ಇದರಿಂದ ಜಹಾಂಗೀರ ರಾಜಕಾರಣದಲ್ಲಿ ಒಂದು ಮಹಾಪ್ರಮಾದ ಗೈದಂತಾಯಿತು. ಶೀಖರು ಮೊಗಲರ ಈ ಅನ್ಯಾಯದ ಕೃತಿಯನ್ನೆಂದೂ ಮರೆಯಲಿಲ್ಲ. ಇದರಿಂದ ಶಾಂತಿಯುತವಾದ ಧಾರ್ಮಿಕ ಪಂಥವೊಂದು ಕಡುಗಲಿ ಪಂಥವಾಗುವಂತಾಯಿತು. ಮುಂದೆ ನೂರು ವರ್ಷಗಳ ನಂತರ ಅದು ಮೊಗಲ ಸಾಮ್ರಾಜ್ಯದ ನೆಲಗಟ್ಟನ್ನೇ ನಡುಗಿಸಿತು.

ಜಹಾಂಗೀರ ಖುಸ್ರುವನ್ನು ಕ್ಷಮಿಸಿ ಸುಧಾರಿಸಿಕೊಳ್ಳಲು ಅವನಿಗೆ ಅವಕಾಶ ಕೊಡಲು ಸಿದ್ಧನಿದ್ದರೂ ಖುಸ್ರುವಿನ ಜೀವನ ಬದಲಾಗಲಿಲ್ಲ. ಮರುವರ್ಷ ಜಹಾಂಗೀರ ಕಾಬೂಲದಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಖುಸ್ರುವಿನ ಬೆಂಬಲಿಗರು ಜಹಾಂಗೀರನನ್ನು ಬೇಟೆಗೆ ಹೋದಲ್ಲಿ ಕೊಲ್ಲುವ ಹಂಚಿಕೆ ಹಾಕಿದರು. ಆದರೆ ಅದೂ ವಿಫಲವಾಯಿತು. ಸಂಚುಗಾರರಿಗೆ ಉಗ್ರ ಶಿಕ್ಷೆಯಾಯಿತು. ಖುಸ್ರುವನ್ನು ಕುರುಡನನ್ನಾಗಿ ಮಾಡಲಾಯಿತು. ಕೆಲ ಇತಿಹಾಸಕಾರರು ಖುಸ್ರುವಿನ ಕಣ್ಣುಗಳು ಕೀಳಲ್ಪಡಲಿಲ್ಲ, ಜಹಾಂಗೀರ ಅವನ ರೆಪ್ಪೆಗಳನ್ನು ಹೊಲಿಸಿದ್ದ ಮಾತ್ರ ಎನ್ನುತ್ತಾರೆ. ಆದರೆ ಅದರಿಂದ ಖುಸ್ರುವಿನ ಸುಂದರ ಮುಖ ವಿದ್ರೂಪವಾಯಿತು.

ಖುಸ್ರುವಿನ ದುರ್ದೈವ ಅವನ ಜನಪ್ರಿಯತೆಯನ್ನು ಮತ್ತಷ್ಟು ಹೆಚ್ಚಿಸಿತು. ಹಿಂದು-ಮುಸ್ಲಿಮರಿಬ್ಬರೂ ಅವನ ಭವಿತವ್ಯದ ಬಗ್ಗೆ ಚಿಂತಾತುರರಾದರು.

*   *   *

೧೬೧೩ ರಲ್ಲಿ ಚಕ್ರವರ್ತಿ ಜಹಾಂಗೀರನ ಅನುಗ್ರಹ ಸಂಪಾದನೆಯ ಕೊನೆಯ ಅವಕಾಶ ಖುಸ್ರುವಿಗೆ ಸಿಕ್ಕಿತು. ದಸರಾ ಉತ್ಸವದ ನಿಮಿತ್ತದಿಂದ ಅರಮನೆಯು ಕೆಲ ಸ್ತ್ರೀಯರು ತಂದೆ-ಮಕ್ಕಳ ಭೆಟ್ಟಿ ಮಾಡಿಸಿದರು. ಖುಸ್ರುವಿನ ಕಣ್ಣಿನ ಉಪಚಾರಕ್ಕಾಗಿ ತಜ್ಞ ವೈದ್ಯರು ನೇಮಕವಾದರು. ಅವನ ಮೇಲಿನ ನಿರ್ಬಂಧ ಸಡಿಲಾಯಿತು. ತಮ್ಮ ಪ್ರಿಯ ರಾಜಕುಮಾರ ತಮ್ಮನ್ನು ಆಳಬಹುದು ಎಂದು ಜನ ಸಂತೋಷಗೊಂಡರು. ಆದರೆ ಒಂದು ಚಿಕ್ಕ ಘಟನೆ ಎಲ್ಲವನ್ನೂ ಬುಡಮೇಲು ಮಾಡಿತು.

ಮಗನ ಕಷ್ಟವನ್ನು ಕಂಡು ಮರುಗಿದ ಜಹಾಂಗೀರನು ಒಂದು ದಿನ ಅವನನ್ನು ರಾಜ-ಸಭೆಗೆ ಕರೆಸಿಕೊಂಡನು. ಆದರೆ ಅಲ್ಲಿ ಖುಸ್ರು ವಿನೀತನಾಗಿ ನಡೆದುಕೊಳ್ಳಲಿಲ್ಲ. ಅವನ ಉದ್ಧಟತನವನ್ನು ಕಂಡು ಜಹಾಂಗೀರನಿಗೆ ರೇಗಿತು. "ಶತಮೂರ್ಖ!" ಎಂದು ಬಯ್ದು ಮಗನನ್ನು ಮೊದಲಿನಂತೆಯೆ ಬಂಧನದಲ್ಲಿರಿಸಿದನು. ಖುಸ್ರು ಕೈಗೆ ಬರಲಿದ್ದ ಹಿಂದುಸ್ತಾನದ ರಾಜ ಮುಕುಟವನ್ನು ಕಾಲಿನಿಂದೊದ್ದು ಕಳೆದುಕೊಂಡನೆಂದು ಇತಿಹಾಸಕಾರ ಹೇಳಿದ್ದಾನೆ.

ಈ ಹೊತ್ತಿಗೆ ರಾಜಾ ಮಾನಸಿಂಗ ಸತ್ತಿದ್ದನು. (೧೬೧೪). ಖುಸ್ರುವಿನ ಮಾವ ಅಜೀಜ ಕೋಕಾನ ವರ್ಚಸ್ಸು ಕುಗ್ಗಿತ್ತು. ಮುಂದೆ ಶಾಹಜಹಾನನೆಂದು ಬಿರುದಾಂಕಿತನಾಗಲಿದ್ದ ರಾಜಕುಮಾರ ಖುರ್ರಮನ ಕೀರ್ತಿ ಹಬ್ಬತೊಡಗಿತ್ತು. ದಕ್ಷಿಣದಲ್ಲಿ ಆತ ನಡೆಸಿದ ದಂಡಯಾತ್ರೆ ಅವನಿಗೆ ಹೆಸರು ತಂದಿತು. ತನ್ನ ಸೋಲಿಗೂ ಗೆಲುವಿನ ಬಣ್ಣ ಬಳಿಯುವ ಚಾಕಚಕ್ಯ ಖುರ್ರಮನಲ್ಲಿದ್ದು-ದರಿಂದ ಆತ ಬೇಗನೆ ಬೆಳಕಿಗೆ ಬಂದನು.

ಅಲ್ಲದೆ ಜಹಾಂಗೀರನ ನೂತನ ಮಡದಿ ನೂರ್‌ಜಹಾನಳು ಗಂಡನನ್ನು ಅಂಗೈಯಲ್ಲಿಟ್ಟು-ಕೊಂಡಿದ್ದಳು. ವಸ್ತುತಃ ಅವಳೇ ಮೊಗಲ ಸಾಮ್ರಾಜ್ಯದ ಅಧಿಪತಿಯಾಗಿದ್ದಳು.

ಇವೆಲ್ಲ ಘಟನೆಗಳಿಂದ ಖುಸ್ರು ಹಿನ್ನೆಲೆಗೆ ಬಿದ್ದ. ಅವನು ಸೆರೆಮನೆಯಲ್ಲಿ ಕೊಳೆಯುತ್ತಿದ್ದರೂ ಅವನು ಬದುಕಿರುವಷ್ಟು ದಿನ ಖುರ್ರಮನಿಗೆ ರಾಜ್ಯ ಸಿಗುವ ನಂಬಿಕೆಯಿರಲಿಲ್ಲ. ಖುಸ್ರು ಅಣಿರಾಯ

ನೆಂಬ ನಂಬಿಕೆಯ ರಜಪೂತನ ಕಾವಲಿನಲ್ಲಿದ್ದನು. ಅವನನ್ನು ಅಣಿರಾಯನ ಕೈಯಿಂದ ತಪ್ಪಿಸಿ ಖುರ್ರಮನ ಮಾವ ಅಸಫಖಾನನ ವಶಕ್ಕೊಪ್ಪಿಸುವಂತೆ ಮಾಡಲು ಖುರ್ರಮನ ಪಕ್ಷದವರು ಬೇಕಾದಷ್ಟು ಹೆಣಗಿದರು. ಒಮ್ಮೆಯಂತೂ ಕುಡಿದು ಭ್ರಮೆಯಲ್ಲಿದ್ದ ಜಹಾಂಗೀರನಿಂದ ಅವರು ಖುಸ್ರುವನ್ನು ಖುರ್ರಮನ ವಶಕ್ಕೆ ಒಪ್ಪಿಸಲು ಒಪ್ಪಿಗೆಯನ್ನು ಕೂಡ ಪಡೆದರು. ಹಿಂದುವಿನ ಅಧೀನದಲ್ಲಿರುವದಕ್ಕಿಂತ ತನ್ನ ಸ್ವಂತ ತಮ್ಮನ "ರಕ್ಷಣೆ"ಯಲ್ಲಿರುವದು ಯೋಗ್ಯವೆಂದು ಅವರ ವಾದವಾಗಿತ್ತು. ಆದರೆ ಅಣಿರಾಯನು ರಾಜಕುಮಾರನನ್ನು ಅಸಫ ಖಾನನಿಗೆ ಒಪ್ಪಿಸಲು ನಿರಾಕರಿಸಿದನು. ಮರುದಿನ ಅಮಲು ಇಳಿದ ಮೇಲೆ ಜಹಾಂಗೀರನಿಗೆ ಇದರಿಂದ ಸಂತೋಷವೇ ಆಗಿ ಅಣಿರಾಯನನ್ನು ಪ್ರಶಂಸಿಸಿದನು.

ಆದರೆ ಖುಸ್ರುವಿನ ಈ ಸುದೈವ ಕ್ಷಣಿಕವಾಗಿತ್ತು. ಆರೋಗ್ಯ ಕೆಟ್ಟು ನಿರ್ಬಲನಾಗಿದ್ದ ಜಹಾಂಗೀರನು ಖುರ್ರಮನ ಬೆಂಬಲಿಗರ ಒತ್ತಾಯಕ್ಕೆ ಮಣಿಯಲೇ ಬೇಕಾಯಿತು. ಇನ್ನೊಮ್ಮೆ ದಕ್ಷಿಣ ದಂಡ ಯಾತ್ರೆಗೆ ಹೊರಡಬೇಕಾದರೆ ಖುಸ್ರು ತನ್ನ ಮಾವನ ವಶಕ್ಕೆ ಬರಬೇಕೆಂದು ಖುರ್ರಮನು ಪಟ್ಟು ಹಿಡಿದು ಕುಳಿತನು. ಇಲ್ಲದಿದ್ದರೆ ತಾನಿಲ್ಲದಾಗ ಅವನು ತನ್ನ ವಿರುದ್ಧ ಹೊಸ ಒಳಸಂಚುಗಳನ್ನು ನಡೆಸಬಹುದೆಂದು ಬಹಿರಂಗವಾಗಿಯೇ ಹೇಳಿದನು.

ಖುಸ್ರುವನ್ನು ಅಸಫಖಾನನ ವಶಕ್ಕೊಪ್ಪಿಸಿದಾಗ ದೇಶದಲ್ಲಿ ಹಬ್ಬಿದ ದುಃಖವನ್ನು ಸರ್ ಥಾಮಸ್ ರೋ ಬಣ್ಣಿಸಿದ್ದಾನೆ: "ಇಡೀ ದರಬಾರದಲ್ಲಿ ಪಿಸು ಮಾತು ಕೇಳಿ ಬರುತ್ತಿದೆ. ಸರದಾರರು ವಿಷಣ್ಣರಾಗಿದ್ದಾರೆ. ಜನಜಂಗುಳಿ ಆಕ್ರೋಶ ಮಾಡುತ್ತಿದೆ. ಜನಾನಾದ ಸ್ತ್ರೀಯರು ಅತ್ತು ಕರೆದು ಚಕ್ರವರ್ತಿಯ ಕ್ರೌರ್ಯವನ್ನು ಹಳಿಯುತ್ತಿದ್ದಾರೆ. ರಾಜಕುಮಾರ ಸತ್ತರೆ ನೂರು ಜನ ರಮಣಿಯರು ಚಿತಾರೋಹಣ ಮಾಡುವರೆಂದು ಅವರನ್ನುತ್ತಿದ್ದಾರೆ. ರಾಜ ಅವರನ್ನು ಸಮಾಧಾನಪಡಿಸಲು ನೂರ್ ಜಹಾನಳನ್ನು ಕಳಿಸಿದರೆ ಅವರು ಅವಳನ್ನು ಶಪಿಸುತ್ತಿದ್ದಾರೆ. . ."

ಆದರೆ ಇದಾವುದೂ ಪ್ರಯೋಜನಕ್ಕೆ ಬರಲಿಲ್ಲ. "ಕುರಿಮರಿ ಕಟುಕನ ರಕ್ಷಣೆಗೆ ಒಪ್ಪಿಸಲ್ಪಟ್ಟಿತ್ತು." ಬೇಗನೆ ಅಸಫಖಾನನು ಖುಸ್ರುವನ್ನು ಭಾವಿ ಶಾಹಜಹಾನನ ವಶಕ್ಕೊಪ್ಪಿಸಿದ. ಶಾಹಜಹಾನ ತನ್ನ ಬಂಧುಪ್ರೇಮದ ಪರಿಚಯವನ್ನು ಧಾರಾಳವಾಗಿ ಕೊಡತೊಡಗಿದ. ದಕ್ಷಿಣದಲ್ಲಿ ಶಾಹಜಹಾನನ ದಂಡು ಹೋದಲ್ಲೆಲ್ಲ ಅಂಧ ಖುಸ್ರು ಸೆರೆಯಾಳಾಗಿ ಅವನೊಡನೆ ಸಾಗಬೇಕಾಯಿತು. ಆರು ವರ್ಷಗಳ ಅನನ್ವಿತ ಕಷ್ಟಗಳಿಂದ ರಾಜಕುಮಾರನ ಆರೋಗ್ಯ ಹಾಳಾಗಿ ಹೋಗಿ ಕೊನೆಗೆ ಬರ್ಹಾಂಪುರದಲ್ಲಿ ಖುಸ್ರು ಜ್ವರಪೀಡಿತನಾಗಿ ಪ್ರಾಣಬಿಟ್ಟ. ಅಲಹಾಬಾದದಲ್ಲಿ ಅವನ ತಾಯಿ ಮಾನಬಾಯಿ ಮತ್ತು ಭಗಿನಿ ಸುಲ್ತಾನುನ್ನೀಸಳ ಗೋರಿಗಳ ಬಳಿ ಖುಸ್ರುವನ್ನು ಹೂಳಿ ಗೋರಿ ಕಟ್ಟಿದರು.

ಯಮುನಾ ನದಿಯಿಂದ ಅರ್ಧ ಮೈಲಿನೊಳಗೆ ಕೆಂಗಲ್ಲಿನಿಂದ ಕಟ್ಟಿದ ಈ ಮೂರು ಗೋರಿಗಳು ರಾಜಕುಮಾರ ಖುಸ್ರುವಿನ ದುರಂತ ಕಥೆಗೆ ಸಾಕ್ಷಿಯಾಗಿ ನಿಂತಿವೆ. ಮುಖ್ಯ ಗೋರಿಯೊಳಗೆ ಖಕಾನಿ ಮೊದಲಾದ ಪರ್ಶಿಯನ್ ಕವಿಗಳ ಪದ್ಯಗಳನ್ನು ಅಮೃತಶಿಲೆಯ ಮೇಲೆ ಕೆತ್ತಿದ್ದಾರೆ. ಅವುಗಳಲ್ಲೊಂದು ಹೀಗನ್ನುತ್ತದೆ:

**" ಗುಲಾಬಿ ಗಿಡವಿದ್ದಲ್ಲೆಲ್ಲ**
**ತರಗೆಲೆಗಳೂ ಉದುರಿರುವವು ;**
**ಆದರೆ ಕೋಗಿಲೆ ಮಾತ್ರ**
**ಬಾಳಿನ ಹೂದೋಟದ ಈ ಪರಿಯನು**
**ಮರೆತು ಹಾಡುತಿತ್ತು. "**



ಅದು ೧೫೦೦ ಮೈಲುದ್ದವಿದೆ, ೩೦ ಅಡಿಗಳ
ವರೆಗೆ ಎತ್ತರವಿದೆ: ಕಟ್ಟಿದ್ದೊ? ೨೨೦೦ ವರ್ಷಗಳ ಹಿಂದೆ!

# ಚೀನದ "ದೊಡ್ಡ ಗೋಡೆ"

ಶ್ರೀಧರ

ಇಷ್ಟು ದೊಡ್ಡ ಗೋಡೆ ಪ್ರಪಂಚದಲ್ಲಿ ಇನ್ನಾವುದೂ ಇಲ್ಲ. ಅದು ಎಷ್ಟು ದೊಡ್ಡದೆನ್ನುವ ಕಲ್ಪನೆ ನಿಮಗೆ ಕೊಡುವುದು ಕಠಿಣ. ಯಾಕೆಂದರೆ ಗೋಡೆಯೆಂದ ಕೂಡಲೆ ನಿಮಗೆ ಮನೆಯ ಗೋಡೆ ನೆನಪಾಗಬಹುದು. ಅಥವಾ ಇದು ಮನೆಯ ಗೋಡೆಯಲ್ಲ, ಕೋಟೆಯ ಗೋಡೆಯೆಂದರೆ ನೀವು ನೋಡಿರುವ ಯಾವುದಾದರೂ ಒಂದು ಹಳೆಯ ಊರಿನ ಕೋಟೆಯ ಗೋಡೆಯು ನೆನಪಾಗಬಹುದು. ಆದರೆ ಅಂಥ ಗೋಡೆಗೂ ಚೀನದೇಶದ ಈ "ದೊಡ್ಡ ಗೋಡೆ"ಗೂ ಬಹಳ ವ್ಯತ್ಯಾಸವಿದೆ.

ನಿಮಗೆ ತಿಳಿದಿರುವ ಕೋಟೆಯ ಗೋಡೆಗಳು ಒಂದು ಊರನ್ನು ಸುತ್ತುಗಟ್ಟಿದರೆ ಈ ಗೋಡೆಯು ಒಂದು ದೇಶವನ್ನೇ ಆವರಿಸಿದೆ. ಆ ದೇಶವೇನು ಸಾಮಾನ್ಯ ದೇಶವೇ? ನಮ್ಮ ಹಿಂದುಸ್ಥಾನದ ಹಾಗೆ ಚೀನ ದೇಶವೂ ಬಹು ದೊಡ್ಡ ದೇಶ. ಅದರ ವಿಸ್ತೀರ್ಣವೂ ೧॥ ಲಕ್ಷ ಚದುರ ಮೈಲಿ. ಇಂಥ ದೇಶಕ್ಕೆ ಈ ಗೋಡೆಯು ಪಶ್ಚಿಮ ಈಶಾನ್ಯ ಮತ್ತು ಉತ್ತರ ದಿಕ್ಕಿನ ಮೇರೆಗಳಲ್ಲಿ ಒಂದಾಗಿದೆ. ತಿಬೇಟಿನಿಂದ ಪ್ರಾರಂಭವಾಗಿ ಉತ್ತರಕ್ಕೆ ಪೀಕಿಂಗಿನ ವರೆಗೂ ಹೋಗಿ ಅಲ್ಲಿಂದ ಮುಂದೆ ಹಳದೀ ಸಮುದ್ರದ ವರೆಗೂ ಹಬ್ಬಿದೆ. ನೀವು ವಿಮಾನದಲ್ಲಿ ಕುಳಿತು ಆಕಾಶದಲ್ಲಿ ಅದಷ್ಟು ಮೇಲಕ್ಕೆ ಹೋದರೆ ಭೂಮಿಯ ಮೇಲೆ ಕಟ್ಟಕಡೆಗೆ ನಿಮಗೆ ಕಾಣಿಸುವ ಮನುಷ್ಯನ ಕೈಮಾಡವೆಂದರೆ ಈ ಪ್ರಕಾರ. ಫ್ರೆಂಚ್ ಲೇಖಕನಾದ ವಾಲ್ತೇರನು ಹೇಳಿದ ಹಾಗೆ ಈಜಿಪ್ತಿನ ಪಿರಮಿಡ್ಡುಗಳನ್ನು ಈ ಗೋಡೆಗೆ ಹೋಲಿಸಿದರೆ ಅವು ಕ್ಷುದ್ರವಾದ ಆಟದ ಸಾಮಾನುಗಳ ಹಾಗೆ ಕಾಣಿಸುವುವು.

ಮನುಷ್ಯನು ಕಟ್ಟಿದ ಕಟ್ಟಡಗಳಲ್ಲೆಲ್ಲಾ ಇದೇ ಅತ್ಯಂತ ಉದ್ದವಾದದ್ದು. ಇದರ ಉದ್ದಳತೆ ಸುಮಾರು ೧,೫೦೦ ಮೈಲಿ. ನಮ್ಮ ದೇಶದಲ್ಲಿ ಇದನ್ನು ತಂದು ಉತ್ತರ ದಕ್ಷಿಣವಾಗಿಟ್ಟರೆ ಕನ್ಯಾಕುಮಾರಿಯಿಂದ ಹಿಮಾಲಯದ--ವರೆಗೂ ವ್ಯಾಪಿಸುವುದು. ಅಥವಾ ಹಿಮಾಲಯದ ಮೇಲೆ ಪೂರ್ವ ಪಶ್ಚಿಮವಾಗಿಟ್ಟರೆ ಅದರಷ್ಟೇ ಉದ್ದವಾಗಿರುವುದು. ಇದಕ್ಕೆ ನಾವು ಕೃತಕ ಹಿಮಾಲಯವೆನ್ನಬಹುದು. ಉದ್ದದಲ್ಲಿ ಮಾತ್ರ ಈ ಹೋಲಿಕೆ. ಅಗಲ ಮತ್ತು ಎತ್ತರದಲ್ಲಿ ಇದಕ್ಕೂ ಹಿಮಾಲಯಕ್ಕೂ ಬಹಳ ವ್ಯತ್ಯಾಸವಿದೆ. ಆದರೆ ಇತರ ಗೋಡೆಗಳಿಗಿಂತ ಈ ಗೋಡೆಯು ಅಗಲದಲ್ಲಿಯೂ ಎತ್ತರದಲ್ಲಿಯೂ ದೊಡ್ಡದಾಗಿದೆ. ತಳದಲ್ಲಿ ಇದರ ಅಗಲ ಸುಮಾರು ೨೫ ಅಡಿ.

ಮೇಲೆ ಹೋಗುತ್ತ ಹೋಗುತ್ತ ಇದರ ಅಗಲ ೧೫ ಅಡಿಗೆ ಇಳಿದಿದೆ. ಈ ಗೋಡೆಯ ಎತ್ತರ ೧೫ ರಿಂದ ೩೦ ಅಡಿಗಳ ವರೆಗೆ ಇದೆ. ಕೆಲವು ಕಡೆ ಬೆಟ್ಟಗಳ ಮೇಲೆ ಈ ಗೋಡೆಯು ಹಾದು ಹೋಗುವಾಗ ಸಮುದ್ರ ಮಟ್ಟಕ್ಕೆ ೫ ಸಾವಿರ ಅಡಿಯಷ್ಟು ಎತ್ತರದಲ್ಲಿದೆ. ಚೀನೀಯರಿಗೆ ಗೋಡೆಗಳಲ್ಲಿ ಬಹಳ ವಿಶ್ವಾಸ. ಈ ದೊಡ್ಡಗೋಡೆ ಮತ್ತು ಅದಕ್ಕೆ ಸಂಬಂಧಪಟ್ಟ ಇತರ ಗೋಡೆಗಳನ್ನೆಲ್ಲಾ ಒಂದು ಸಾಲಿನಲ್ಲಿಟ್ಟರೆ ಭೂಮಧ್ಯರೇಖೆಯಷ್ಟು ಉದ್ದವಾಗುವುದಂತೆ.

ಈ ಗೋಡೆಯನ್ನು ಕಟ್ಟಿಸಿದ್ದು ಉತ್ತರದಿಂದ ಚೀನಾಕ್ಕೆ ಬರುವ ಶತ್ರುಗಳನ್ನು ತಡೆಯುವುದಕ್ಕೆ. ಅಂತೆಯೇ ಈ ಗೋಡೆಯ ಉದ್ದಕ್ಕೂ ಕೋಟೆ ಕೊತ್ತಲಗಳಿವೆ. ಮೊದಲಿಗೆ ಇಂಥ ಕೋಟೆಗಳು ೪೦ ಸಾವಿರ ಇದ್ದವು. ಈಗ ೩೦ ಸಾವಿರ ಉಳಿದಿವೆ. ಇವೂ ಬಿದ್ದುಹೋಗುವ ಸ್ಥಿತಿಯಲ್ಲಿವೆ. ಈ ಕೋಟೆಗಳಲ್ಲಿ ಕಾವಲುಗಾರರು ಇರುತ್ತಿದ್ದರು. ಶತ್ರುಗಳ ದಾಳಿಬರುವ ಸೂಚನೆ ಕಂಡ ಕೂಡಲೆ ಕೋಟೆಯ ಮೇಲೆ ಬೆಂಕಿಹಾಕಿ ಸುತ್ತಮುತ್ತಲಿನ ಜನರಿಗೆ ಎಚ್ಚರಿಕೆಯನ್ನು ಕೊಡುತ್ತಿದ್ದರು. ಆಗ ಜನರು ಒಂದು ಕೋಟೆಯಲ್ಲಿ ಸುರಕ್ಷಿತರಾಗಿರುತ್ತಿದ್ದರು.

ಈ "ದೊಡ್ಡ ಗೋಡೆ"ಯನ್ನು ಯಾವ ರೀತಿ ಕಟ್ಟಿದರೆಂಬುದನ್ನು ಈಗ ತಿಳಿದುಕೊಳ್ಳೋಣ. ಗೋಡೆಗಿಂತಲೂ ಮೊದಲು ಹಿಂದಿನ ರಾಜರು ಕೋಟೆಗಳನ್ನು ಕಟ್ಟಿದ್ದರು. ಆ ಮೇಲೆ ಈ ಕೋಟೆಗಳನ್ನು ಗೋಡೆಗಳಿಂದ ಸೇರಿಸಿದರು. ಕ್ರಿ. ಪೂ. ೪೦೦ ರಲ್ಲಿ ಮೊದಲು ಕೋಟೆಗಳನ್ನು ಕಟ್ಟಿದ್ದು. ಗೋಡೆಯ ಕಟ್ಟುವಿಕೆಯು ಪ್ರಾರಂಭವಾಗಿದ್ದು ೧೫೦ ವರ್ಷಗಳ ನಂತರ.

ಚೀನೀಯರ ಕಟ್ಟುವ ರೀತಿಗೂ ಪಾಶ್ಚಾತ್ಯರ ಕಟ್ಟುವ ರೀತಿಗೂ ವ್ಯತ್ಯಾಸವಿದೆ. ಪಾಶ್ಚಾತ್ಯರ ಕಟ್ಟಡಗಳು ಸುತ್ತುಮುತ್ತಲಿನ ಸನ್ನಿವೇಶಗಳನ್ನು ಎಣಿಕೆಗೆ ತೆಗೆದುಕೊಳ್ಳುವುದಿಲ್ಲ. ಚೀನೀಯರ ಕಟ್ಟಡಗಳು ಸನ್ನಿವೇಶವನ್ನು ಹೊಂದಿಕೊಂಡಿರುತ್ತವೆ. ಹಾಗು ಸನ್ನಿವೇಶದ ಮುಖ್ಯ ಲಕ್ಷಣಗಳು ಎದ್ದು ಕಾಣುವಂತೆ ಮಾಡುತ್ತವೆ. "ದೊಡ್ಡ ಗೋಡೆ"ಯನ್ನು ಕಟ್ಟಿದ ರೀತಿಯು ಈ ಪದ್ಧತಿಗೆ ಒಳ್ಳೆಯ ಉದಾಹರಣೆಯಾಗಿದೆ. ಗೋಡೆಯನ್ನು ಕಟ್ಟಿರುವ ದಾರಿಯಲ್ಲಿ ಬೆಟ್ಟಗಳೂ ಕಣಿವೆಗಳೂ ದೊಡ್ಡ ದೊಡ್ಡ ಹೊಳೆಗಳೂ ಬಂದಿವೆ. ಇವುಗಳ ಮೇಲೆಲ್ಲಾ ಗೋಡೆಯನ್ನು ಕಟ್ಟುವುದು ಸಾಮಾನ್ಯವಾದ ಕೆಲಸವಲ್ಲ. ಸಮುದ್ರ ಮಟ್ಟಕ್ಕೆ ಐದು ಸಾವಿರ ಅಡಿ ಎತ್ತರದಲ್ಲಿರುವ ಬೆಟ್ಟಗಳ ಮೇಲೆ ದೊಡ್ಡ ದೊಡ್ಡ ಬಂಡೆಗಳನ್ನು ಸಾಗಿಸಿರುವುದನ್ನು ನೋಡಿದರೆ ಎಂಥವರಿಗಾದರೂ ಆಶ್ಚರ್ಯವಾಗದೆ ಇರಲಾರದು. ಈ ಬಂಡೆಗಳ ಮೇಲೆ ಇಟ್ಟಿಗೆಗಳನ್ನೂ ಅವುಗಳ ಮೇಲೆ ಮಣ್ಣನ್ನೂ ಹಾಕಿ ಗೋಡೆಯನ್ನು ಕಟ್ಟಿದ್ದಾರೆ. ಮರುಭೂಮಿಯಲ್ಲಿ ಈ ಗೋಡೆಯನ್ನು ಕಟ್ಟುವುದಕೆ ಬೇರೆ ತರಹದ ಅಡಚಣೆಗಳಿದ್ದವು. ಮರುಭೂಮಿಯ ಉಸುಕು ತುಂಬಿದ ಗಾಳಿಯು ಗೋಡೆಯನ್ನೇ ಕೆಡವುವಷ್ಟು ರಭಸದ್ದಿರುತ್ತದೆ. ಈ ಗಾಳಿಯ ರಭಸವನ್ನು ತಡೆಯುವುದಕ್ಕೆ ಮೂರು ಗೋಡೆಗಳನ್ನು ಮೊದಲು ಕಟ್ಟಿ ಆಮೇಲೆ ಮುಖ್ಯವಾದ ಗೋಡೆಯನ್ನು ಕಟ್ಟಿದ್ದಾರೆ. ಒಟ್ಟಿನಲ್ಲಿ ಈ ಗೋಡೆಯು ಒಂದು ಕಲ್ಲಿನ ಬಿಳಿಯ ಘಟಸರ್ಪದ ಹಾಗಿರುವುದು. ಈ ಘಟಸರ್ಪಕ್ಕೆ ಯಾವ ತಡೆಯೂ ಇಲ್ಲ. ನದಿಗಳನ್ನು ದಾಟಿದೆ, ಪರ್ವತಗಳನ್ನು ಏರಿದೆ, ಕಣಿವೆಗಳಲ್ಲಿ ನುಗ್ಗಿದೆ, ಮರುಭೂಮಿಯ ಸೆಕೆಗೂ ಬೆಟ್ಟದ ಮೇಲಿನ ಛಳಿಗೂ ಇದು ಅಂಜಿಲ್ಲ.

ಈ ಗೋಡೆಯು ಪೂರ್ವ ಮತ್ತು ಪಶ್ಚಿಮ ಕೊನೆಯ ಭಾಗವನ್ನು ಸೂಚಿಸುವುದಕ್ಕೆ ಎರಡು ಶಾಸನಗಳಿವೆ. ಒಂದರಲ್ಲಿ "ದೇವರು ಸಮುದ್ರ ಹಾಗು ಪರ್ವತಗಳನ್ನು ಮಾಡಿದ್ದಾನೆ" ಎಂದೂ ಇನ್ನೊಂದರಲ್ಲಿ ''ಇದು ಸರ್ವರಕ್ಷಕವಾದ ಗೋಡೆ'' ಎಂದೂ ಇದೆ.

"ದೊಡ್ಡ ಗೋಡೆ"ಯನ್ನು ಕಟ್ಟಿಸಿದವನು

ಶಿವ್ಹಾಂಗ್‌ತಿ ಎಂಬ ಸಾಮ್ರಾಟನು ಎಂದರೆ ತಪ್ಪಾಗಲಾರದು. ಇವನು ಕ್ರಿ. ಪೂ. ೨೨೧ ರಿಂದ ೨೧೦ ರ ವರೆಗೆ ಆಳಿದನು. ಇವನ ಕಾಲಕ್ಕೆ ಮುಂಚೆ ಎಷ್ಟೋ ಕಡೆ ಕೋಟೆಗಳೂ ಕೆಲವು ಕಡೆ ಗೋಡೆಗಳೂ ಇದ್ದವು, ಮತ್ತು ಇವನ ನಂತರ ಬಂದ ಬೇರೆ ವಂಶದವರು ಈ ಗೋಡೆಯನ್ನು ಸಂಪೂರ್ಣ ಮಾಡಿದರು. ಆದರೂ ಗೋಡೆ ಕಟ್ಟಬೇಕಾದ ಮಾರ್ಗವನ್ನು ಗುರುತುಹಾಕಿದವನು ಇವನೇ. ಮತ್ತು ಅದರ ಬಹು ಭಾಗವನ್ನು ಕಟ್ಟಿಸಿದ್ದೂ ಇವನೇ. ಆದ್ದರಿಂದ ಇದರ ಯಶಸ್ಸು ಇವನಿಗೇ ಸಲ್ಲತಕ್ಕದ್ದಾಗಿದೆ. ಈ ಗೋಡೆಯನ್ನು ಕಟ್ಟುವುದಕ್ಕೂ ಇವನ ಇತರ ಚಟುವಟಿಕೆಗಳಿಗೂ ನಿಕಟ ಸಂಬಂಧವಿರುವುದರಿಂದ ಅವುಗಳನ್ನು ಇಲ್ಲಿ ಸಂಕ್ಷೇಪವಾಗಿ ಹೇಳುವ ಅಗತ್ಯವಿದೆ.

ಪಾಶ್ಚಾತ್ಯ ಇತಿಹಾಸಕಾರರು ಶಿವ್ಹಾಂಗ್‌ತಿಯನ್ನು ಚೀನಾದ ಅಲೆಗ್ಝಾಂಡರ್ ಅಥವಾ ನೆಪೋಲಿಯನ್ ಎಂದು ಕರೆಯುತ್ತಾರೆ. ಆ ರಾಜರ ಹಾಗೆಯೇ ಇವನೂ ಅನೇಕ ದೇಶಗಳನ್ನು ಗೆದ್ದನು. ಇವನನ್ನು ಯುದ್ಧದಲ್ಲಿ ಎದುರಿಸಲು ಶತ್ರುಗಳು ಅಂಜುತ್ತಿದ್ದರು. ಇವನು ಯುದ್ಧದಲ್ಲಿ ಎಷ್ಟು ನಿಪುಣನಾಗಿದ್ದನೆಂದರೆ ಒಂದು ಸಲವಾದರೂ ಇವನನ್ನು ಯಾರೂ ಸೋಲಿಸಿರಲಿಲ್ಲ. ಹಿಂದುಸ್ಥಾನದಲ್ಲಿಯ ಚಂದ್ರಗುಪ್ತ ಮೌರ್ಯನು ಇವನನ್ನು ಹೋಲುವ ರಾಜ. ಚಂದ್ರಗುಪ್ತನ ಹಾಗೆ ಶಿವ್ಹಾಂಗ್‌ತಿಯೂ ಚೀನದ ಬೇರೆ ಬೇರೆ ಭಾಗಗಳನ್ನು ಗೆದ್ದು ಒಂದು ಸಾಮ್ರಾಜ್ಯವನ್ನು ಕಟ್ಟಿದನು. ಚಂದ್ರಗುಪ್ತನು ಹೇಗೆ ಹಿಂದುಸ್ಥಾನದ ಮೊದಲನೆಯ ಸಮ್ರಾಟನೋ ಹಾಗೆಯೇ ಶಿವ್ಹಾಂಗ್‌ತಿಯೂ ಚೀನದೇಶದ ಮೊದಲನೆಯ ಸಾಮ್ರಾಟನು. ಶಿವ್ಹಾಂಗ್‌ತಿ ಎಂದರೆ ಮೊದಲನೆಯ ಸಾಮ್ರಾಟ ಎಂದೇ ಅರ್ಥ. ಮುಂದೆ ಬರುವವರು ಎಲ್ಲಿ ತನಗೆ ಈ ಬಿರುದನ್ನು ಕೊಡುವುದಿಲ್ಲವೋ ಎಂದು ತಾನೇ ಈ ಬಿರುದನ್ನು ತನ್ನ ಹೆಸರನ್ನಾಗಿ ಮಾಡಿಕೊಂಡ ಹಾಗೆ ಕಾಣುತ್ತದೆ.

ಇವನ ಆಳ್ವಿಕೆಗೆ ಮುಂಚೆ ಚೀನಾದಲ್ಲಿ ಪಾಳೆಯಗಾರರು ಸಾವಿರಾರು ರಾಜ್ಯಗಳನ್ನು ಕಟ್ಟಿದ್ದರು. ಅವರನ್ನೆಲ್ಲ ಇವನು ಸದೆಬಡಿದು ಚೀನಕ್ಕೆ ಒಂದು ಸರ್ಕಾರವನ್ನು ಸ್ಥಾಪಿಸಿದನು. ಚೀನದೇಶದಲ್ಲೆಲ್ಲ ಒಂದೇ ತರಹ ನಾಣ್ಯಚಲಾವಣೆಯನ್ನೂ ಒಂದೇ ತರಹ ಕಾಯದೆಯನ್ನೂ ಜಾರಿಗೆ ತಂದನು. ಹೀಗೆ ಏಕೀಕೃತವಾದ ಚೀನಾದೇಶವು ಒಡೆಯದೆ ಇರಲು ಒಂದು ಮುಖ್ಯ ಅವಶ್ಯಕತೆಯೆಂದರೆ ಶತ್ರುಗಳ ದಾಳಿಯನ್ನು ತಪ್ಪಿಸುವುದು. ಈ ಉದ್ದೇಶದಿಂದ ಶಿವ್ಹಾಂಗ್‌ತಿಯು “ದೊಡ್ಡ ಗೋಡೆ”ಯನ್ನು ಕಟ್ಟಿದನು. ಇದೂ ಅಲ್ಲದೆ ಇವನಿಗೆ ಈಜಿಪ್ಟಿನ ಫ್ಯಾರೋಗಳ ಹಾಗೆ ಅದ್ಭುತ ಕಟ್ಟಡಗಳನ್ನು ಕಟ್ಟುವ ಆಶೆಯಿತ್ತು. ತನ್ನ ರಾಜಧಾನಿಯಲ್ಲಿ ೧೦ ಸಾವಿರ ಜನರು ಕೂಡುವಂತಹ ಒಂದು ಸಭಾಗೃಹವನ್ನು ಕಟ್ಟಿಸಿದನು. ಆಕಾಶದಲ್ಲಿ ನಕ್ಷತ್ರಗಳು ಹೊಳೆಯುವ ಹಾಗೆ ಅತಿ ವಿಸ್ತೀರ್ಣವಾದ ಉದ್ಯಾನವನದಲ್ಲಿ ತನ್ನ ರಾಣಿಯರಿಗೆ ಅರಮನೆಗಳನ್ನು ಕಟ್ಟಿಸಿದನು. ಇಂಥ ಆಶ್ಚರ್ಯಕರವಾದ ಕಟ್ಟಡಗಳನ್ನು ಕಟ್ಟಿಸಿದ ನಂತರ ಎಲ್ಲಕ್ಕೂ ಮಿಗಿಲಾದ ಒಂದು ಕಟ್ಟಡವನ್ನು ಕಟ್ಟಬೇಕೆಂದು ಆಲೋಚಿಸಿದನು. ಭೂಮಿಯ ಸುತ್ತಳತೆಯ ಇಪ್ಪತ್ತನೆಯ ಒಂದು ಭಾಗದಷ್ಟು ಉದ್ದವಾದ ಒಂದು ಗೋಡೆಯನ್ನು ಕಟ್ಟಬೇಕೆಂಬುದೇ ಆ ಆಲೋಚನೆ.

ತನ್ನ ಹೆಸರು ಶಾಶ್ವತವಾಗಿರಲೆಂಬುದು ಅವನ ಉದ್ದೇಶವಾಗಿರಬಹುದು. ಜನಗಳು ಮಾತ್ರ ಬೇರೆ ಕಾರಣಗಳನ್ನು ಹೇಳುತ್ತಾರೆ. ಉತ್ತರದಿಂದ ದೇಶಕ್ಕೆ ಅಪಾಯ ಬರುತ್ತದೆಂದು ಇವನಿಗೆ ಕನಸು ಬಿತ್ತಂತೆ. ಇವನಿಗೆ ಕನಸು ಮತ್ತು ಶಕುನಗಳಲ್ಲಿ ನಂಬಿಕೆಯಿದ್ದುದರಿಂದ ಈ ಗೋಡೆಯನ್ನು ಕಟ್ಟಿಸಿದನಂತೆ. ಆದರೆ ಬರಿಯ ಒಂದು ಕನಸಿನ ಪರಿಣಾಮವಾಗಿಯೇ ಇಷ್ಟು ದೊಡ್ಡ ಗೋಡೆಯನ್ನು ಕಟ್ಟಿಸಿರುವುದು ಅಸಂಭವ. ನಮ್ಮ ದೇಶದಲ್ಲಿ ವಾಯುವ್ಯದಿಕ್ಕಿನಿಂದ ದಾಳಿ ಬರುವ ಸಂಭವವಿದೆಯೆಂದು ಹೇಗೆ ಎಲ್ಲರಿಗೂ ಗೊತ್ತಿದೆಯೋ ಹಾಗೆಯೇ ಚೀನದಲ್ಲಿ ಉತ್ತರದಿಂದ ದಾಳಿ ಬರುವುದು ಎಲ್ಲರಿಗೂ ಗೊತ್ತಿತ್ತು.

" ದಕ್ಷಿಣದ ಹುಲಿಗೆ ಅಂಜಬೇಡ; ಉತ್ತರದ ಹುಂಜಕ್ಕೆ ಅಂಜು " ಎನ್ನುವ ಒಂದು ಹಳೆಯ ಗಾದೆ ಚೀನೀಯರಲ್ಲಿದೆ. ಶಿಹ್ವಾಂಗ್‌ತಿಗೆ ತನ್ನ ದೇಶವು ಉತ್ತರದಿಂದ ಅನುಭವಿಸಿದ ದಾಳಿಗಳ ಅರಿವು ಇತ್ತು. ಆದ್ದರಿಂದಲೇ ಆ ಗೋಡೆಯನ್ನು ಕಟ್ಟಿಸಿದನು.

ಶಿಹ್ವಾಂಗ್‌ತಿಯು ಒಬ್ಬ ವಿಚಿತ್ರನಾದ ಸಾಮ್ರಾಟನಾಗಿದ್ದನು. ತನ್ನ ಜೀವಮಾನದಲ್ಲಿ ಅನೇಕ ಚಮತ್ಕಾರವಾದ ಕೆಲಸಗಳನ್ನು ಮಾಡಿದನು. ಅದರಲ್ಲಿ ಪುಸ್ತಕಗಳನ್ನು ಸುಡಿಸಿದ್ದು ಮತ್ತು ಲೇಖಕರನ್ನೆಲ್ಲಾ ಹಿಂಸಿಸಿದ್ದು ಬಹಳ ವಿಚಿತ್ರವಾದದ್ದು. ಈ ಕೆಲಸಕ್ಕೂ ಗೋಡೆಕಟ್ಟಿಸಿದ್ದಕ್ಕೂ ಸಂಬಂಧವಿರುವುದರಿಂದ ಅದರ ಬಗ್ಗೆ ಸ್ವಲ್ಪ ಹೇಳುವುದು ಅವಶ್ಯಕವೆನಿಸುತ್ತದೆ. ಲೇಖಕರಿಗೆ ಶಿಹ್ವಾಂಗ್‌ತಿಯ ಹೊಸ ಸುಧಾರಣೆಗಳು ಸೇರಲಿಲ್ಲ. ಅವರಿಗೆ ಹಳೆಯ ಪಾಳೆಯಗಾರರ ಕಾಲದಲ್ಲಿ ಹೆಚ್ಚು ಸ್ವಾತಂತ್ರ್ಯವಿತ್ತು. ಆದ್ದರಿಂದ ಅವರೆಲ್ಲರೂ ಹೊಸ ಕಾಯದೆಗಳನ್ನು ತೆಗೆದುಹಾಕಬೇಕೆಂದು ರಾಜನನ್ನು ಕೇಳಿಕೊಂಡರು. ಆಗ ಮಂತ್ರಿಯಾದ 'ಲಿ' ಎನ್ನುವವನು ರಾಜನಿಗೆ ಈ ರೀತಿಯಾಗಿ ದುರ್ಬೋಧನೆಯನ್ನು ಮಾಡಿದನು : " ನೀನು ಮಾಡಿರುವ ಸುಧಾರಣೆಗಳೆಲ್ಲಾ ಸರಿಯಾದವು. ಲೇಖಕರು ಕೇಳುವುದೆಲ್ಲಾ ತಪ್ಪು. ಅವರ ತಲೆಯಲ್ಲಿ ಹಿಂದಿನ ಕಾಲದ ವಿಚಾರಗಳಿವೆಯೇ ಹೊರತು ಈಗಿನ ಕಾಲದವು ಇಲ್ಲ. ಹಿಂದಿನ ಕಾಲದ ಪರಿಣಾಮ ಹೋಗಬೇಕಾದರೆ ಆಗಿನ ಕಾಲದ ಪುಸ್ತಕಗಳನ್ನೆಲ್ಲ ನಾಶಪಡಿಸಬೇಕು."

ರಾಜನಿಗೆ ಮಂತ್ರಿಯ ಸೂಚನೆಯು ಸರಿಯೆಂದು ತೋರಿತು. ಹಾಗು ತನ್ನ ಕಾಲದಿಂದಲೆ ಸಾಹಿತ್ಯವು ಹುಟ್ಟಬೇಕೆಂಬ ಆಶೆಯೂ ಅವನಲ್ಲಿತ್ತು. ಆದ್ದರಿಂದ ಕೂಡಲೇ ಎಲ್ಲಾ ಚರಿತ್ರೆಗಳನ್ನೂ ಇತರ ಗ್ರಂಥಗಳನ್ನೂ ಸುಡಲು ಆಜ್ಞಾಪಿಸಿದನು. ಅವನಿಗೆ ವಿಜ್ಞಾನದಲ್ಲಿ ಅಭಿರುಚಿಯಿದ್ದುದರಿಂದ ಅದಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಸುಡಿಸಲಿಲ್ಲ. ಹಳೆಯ ಪುಸ್ತಕಗಳನ್ನಿಟ್ಟುಕೊಂಡವರಿಗೆಲ್ಲರಿಗೂ ಅವುಗಳನ್ನು ಸುಡಲೆಂದು ತರಲು ಆಜ್ಞೆಯಾಯಿತು. ಬಹಳ ಜನರು ತರಲಿಲ್ಲ. ಈ ಅಪರಾಧಕ್ಕೆ ಶಿಕ್ಷೆಯಾಗಿ ಅವರನ್ನೆಲ್ಲಾ ದೊಡ್ಡ ಗೋಡೆಯನ್ನು ಕಟ್ಟುವ ಕೆಲಸಕ್ಕೆ ಕಳುಹಿಸಿದನೆಂದು ಹೇಳುವುದುಂಟು. ಇದರ ಪರಿಣಾಮವಾಗಿ ಚೀನದೇಶದ ಪ್ರಾಚೀನ ಕಾಲದಿಂದಲೂ ಸಂಗ್ರಹವಾದ ಅತ್ಯಂತ ಬೆಲೆಯುಳ್ಳ ಜ್ಞಾನ ಭಂಡಾರವು ನಾಶವಾಯಿತು. ಈ ಭಂಡಾರದಲ್ಲೆಲ್ಲಾ ಅತ್ಯಂತ ಅಮೂಲ್ಯವಾದ ಗ್ರಂಥವೆಂದರೆ ಕನ್‌ಫೂಷಿಯಸ್ ಎಂಬ ತತ್ವಜ್ಞನದು. ಇವನು ನಮ್ಮ ಬುದ್ಧನ ಕಾಲದವನು. ಅವನ ಹಾಗೆಯೇ ಇವನೂ ತಮ್ಮ ಜನರ ನಡವಳಿಕೆಗಳನ್ನು ಉತ್ತಮಗೊಳಿಸಲು ಪ್ರಯತ್ನಪಟ್ಟನು. ಈ ಪ್ರಯತ್ನದಲ್ಲಿ ಇವನು ಎಷ್ಟು ಯಶಸ್ವಿಯಾದನೆಂದರೆ ಇವನ ಬರವಣಿಗೆಯ ಪರಿಣಾಮದಿಂದಲೇ ಇವತ್ತಿಗೂ ಚೀನೀಯರ ಸಮಾಜವು ಉಳಿದಿರುವುದು ಮತ್ತು ಎಷ್ಟೋ ವಿಷಯಗಳಲ್ಲಿ ಇತರ ಜನರಿಗೆ ಆದರ್ಶಪ್ರಾಯವಾಗಿರುವುದು. ಶಿಹ್ವಾಂಗತಿ ಇವನ ಪುಸ್ತಕಗಳನ್ನು ಸುಡಿಸಿದನು. ಬಹುಜನರು ಇವನ ತತ್ವಗಳನ್ನು ಬಾಯಿ ಪಾಠ ಮಾಡಿದ್ದರಿಂದ ಅವು ನಾಶವಾಗದೆ ಉಳಿದವು. ಪುಸ್ತಕಗಳನ್ನು ಸುಡಿಸಿದ ಕಾರಣದಿಂದಲೇ ಚೀನದೇಶದ ಇತಿಹಾಸಕಾರರೆಲ್ಲ ಶಿಹ್ವಾಂಗ್‌ತಿ ಎಂದರೆ ವಿಷವನ್ನು ಕಾರುತ್ತಾರೆ.





# ತೆರೆಗಳು ಹುಚ್ಚೆದ್ದಾಗ—

**ಸಾಗರ ತಳದಲ್ಲಿ ಭೂಕಂಪವಾದಾಗ**
**ಪ್ರಳಯ ತಾಂಡವವೇ ನಡೆಯುತ್ತದೆ.**

ಜಪಾನದ ಮೂರು ಪ್ರಮುಖ ಶಿಂಟೋ ಉತ್ಸವಗಳಲ್ಲಿ ಒಂದಾದ ಸಾನೋ ಸೈ ಹಬ್ಬದ ದಿನಗಳಲ್ಲಿ ಬೀದಿ ಬೀದಿಗಳಲ್ಲಿ ಸಂತೋಷ ನಲಿದಾಡುತ್ತಿರುತ್ತದೆ. ಜನ ಬಣ್ಣಬಣ್ಣದ ಬಟ್ಟೆ ತೊಟ್ಟು ದೊಡ್ಡ ಆಕಾರದ ಸಿಂಹದಾಕೃತಿಯ ಮುಖವಾಡಗಳನ್ನು ಧರಿಸಿ ಬೀದಿಗಳಲ್ಲಿ ಅಡ್ಡಾಡುತ್ತಾರೆ.

ಈ ಉತ್ಸವದ ಸಮಯದಲ್ಲಿ ಸಮುದ್ರತೀರದ ಸಾನರಿಕು ಜಿಲ್ಲೆಯಲ್ಲಿ ಕಂಡುಬರುವಷ್ಟು ಸಂಭ್ರಮ ಜಪಾನದ ಮತ್ತಾವ ಭಾಗದಲ್ಲೂ ಕಂಡುಬರುವದಿಲ್ಲವೆನ್ನಬಹುದು. ಈ ಜಿಲ್ಲೆ ಟೋಕಿಯೋದಿಂದ ಉತ್ತರಕ್ಕೆ ೩೦೦ ಮೈಲು ದೂರದಲ್ಲಿದೆ.

೧೯೬೪, ಜೂನ್ ತಿಂಗಳ ೧೬ನೇ ತಾರೀಖು, ಸೋಮವಾರ ಸಂಜೆ ೭ ಗಂಟೆಗೆ ಸಾನೊ-ಸೈ ಹಬ್ಬದ ಆನಂದದಲ್ಲಿ ಮೈಮರೆತ ಜನರ ನಗುವಿನ ಅಟ್ಟಹಾಸ ಪ್ಯಾಸಿಫಿಕ್ ಮಹಾಸಾಗರದ ಗಾಳಿಯಲ್ಲಿ ತೇಲುತ್ತಿದ್ದಂತೆ ವಾಯುವ್ಯ ದಿಕ್ಕಿನಲ್ಲಿ ೭೦೦ ಮೈಲುಗಳಾಚೆ ಭೀಕರ ಭೂಕಂಪವೊಂದು ಸಮುದ್ರ ತಳದಲ್ಲಿ ಸಂಭವಿಸಿತು.

ಆದರೆ ಹಬ್ಬದಲ್ಲಿ ಮೈಮರೆತವರಲ್ಲಿ ಒಬ್ಬರಿಗೂ ಇದರ ಕಲ್ಪನೆಯಾಗಲಿಲ್ಲ. ೭-೫೦ ಗಂಟೆಗೆ ಸಮುದ್ರವು ತೀರದಿಂದ ಇಳಿತದ ಕಾಲಕ್ಕಿಂತಲೂ ಹೆಚ್ಚು ಹಿಂದೆ ಸರಿದದ್ದು ಕೂಡ ಯಾರ ಗಮನಕ್ಕೂ ಬರಲಿಲ್ಲ. ಉತ್ಸವದ ಗದ್ದಲವನ್ನು ಬಿಟ್ಟರೆ ಸಮುದ್ರತೀರದಲ್ಲಿ ಗಭೀರ ಶಾಂತಿ ಪಸರಿಸಿತ್ತು.

ಕತ್ತಲೆ ಮುಗಿಬಿದ್ದಂತೆ ಸಂತೋಷದಿಂದ ನಲಿಯುತ್ತಿದ್ದ ಜನರ ಕಿವಿಗಳಿಗೆ ಭೀಕರ ಗರ್ಜನೆಯೊಂದು ಕೇಳಿಸಿತು. ಭಯಭೀತರಾಗಿ ಅವರು ಸಮುದ್ರದತ್ತ ಕಣ್ಣು ಹಾಯಿಸಿದರು. ಆದರೆ ಆಗಲೇ ಸಮಯ ಮೀರಿಹೋಗಿತ್ತು.

ಹಿಂದೆ ಸರಿದಿದ್ದ ಸಮುದ್ರ ರಭಸದಿಂದ ಸಾನರಿಕುಗೆ ಹಿಂತಿರುಗಿತು. ನೂರಡಿ ಎತ್ತರದ ತೆರೆಯಾಗಿ ಸಮುದ್ರವು ಭೂಪ್ರದೇಶಕ್ಕೆ ನುಗ್ಗಿ ಎದುರು ಬಂದ ಮನೆಗಳನ್ನು, ನಗರಗಳನ್ನು,

ಮನುಷ್ಯರನ್ನು ಕೊಚ್ಚಿಕೊಂಡು ಹೋಯಿತು. ೧೩,೦೭೩ ಮನೆಗಳು ಈ ಮಹಾ ಪ್ರವಾಹದಲ್ಲಿ ನಾಶವಾದವು. ೨೭,೧೨೨ ಜನರು ಪ್ರಾಣ ಕಳೆದುಕೊಂಡರು.

ಕಳೆದ ೧೦೦೦ ವರ್ಷಗಳಲ್ಲಿ ೨೦೦೦ ಪ್ರಬಲ ಭೂಕಂಪಗಳನ್ನು, ಮಹಾಪೂರಗಳನ್ನು, ನೈಸರ್ಗಿಕ ಅನಾಹುತಗಳನ್ನು ಕಂಡಿರುವ ಜಪಾನಕ್ಕೂ ೧೮೯೬ರಲ್ಲಿ ಜರುಗಿದ ಈ ಅನಾಹುತ ಅತ್ಯಂತ ಭೀಕರವಾಗಿ ಪರಿಣಮಿಸಿತು.

೧೯೪೬, ಎಪ್ರಿಲ್ ೧ನೆಯ ತಾರೀಖಿನ. ದಿನ ಬೆಳಗಿನ ಝಾವ ೨ ಗಂಟೆಗೆ ಅಲಾಸ್ಕಾದ ಯುನಿಮಾಕ ನಡುಗಡ್ಡೆಯ ಈಶಾನ್ಯ ದಿಕ್ಕಿನಲ್ಲಿ ೭೦ ಮೈಲುಗಳಾಚೆ ಅಲ್ಯೂಶನ್ ಟ್ರೆಂಚ ಸಾಗರದ ತಳದಲ್ಲಿ ಪ್ರಚಂಡ ಭೂಕಂಪ ಸಂಭವಿಸಿತು. ಕೂಡಲೆ ಆ ಪ್ರದೇಶದ ಮೇಲ್ಭಾಗದಲ್ಲಿ ನೂರು ನೂರು ಮೈಲುದ್ದದ ತೆರೆಗಳು ಎದ್ದವು.

ಸಾನರಿಕುದಲ್ಲಿ ಸಂಭವಿಸಿದಂತೆಯೆ ಇಲ್ಲಿಯೂ ಈ ತೆರೆಗಳು ಗತಿಯನ್ನು ಪಡೆದು ತಾಸಿಗೆ ೬೦೦ ಮೈಲುಗಳ ವೇಗದಿಂದ ಚಲಿಸಿದವು. ಫ್ಯಾಸಿಫಿಕ್ ಪ್ರದೇಶದ ಜನರು ಇವುಗಳನ್ನು ಭರತದ ತೆರೆ (Tidal Waves) ಗಳೆಂದು ಕರೆಯುತ್ತಾರೆ. ಈ ಪ್ರಚಂಡ ಸಂಹಾರಕ ಶಕ್ತಿಯ ತೆರೆಗಳು ಪ್ರಾರಂಭದಲ್ಲಿ ಎಷ್ಟು ಅಲ್ಪವಾಗಿ ಕಾಣುತ್ತವೆಂದರೆ ಸಮುದ್ರದಲ್ಲಿ ಚಲಿಸುವ ಹಡಗುಗಳಿಗೆ ಕೂಡ ಅವುಗಳ ಭಾಸವಾಗುವದಿಲ್ಲ.

ಮುಂಜಾನೆ ೬—೧೯ ಗಂಟೆಗೆ ಮೊದಲನೆಯ ತೆರೆ ಕವಾಯಿಯ ಉತ್ತರ ದಂಡೆಯ ಮೇಲೆ ದಾಳಿ ಮಾಡಿತು. ಹೇನಾ ಆಖಾತದ ತೀರದಲ್ಲಿ ಇಬ್ಬರು ಹೆಂಗಸರು ತಮ್ಮ ಮನೆಗಳೆದುರು ನಿಂತುಕೊಂಡಿದ್ದರು. ಅವರಲ್ಲೊಬ್ಬಳ ಬಗಲಲ್ಲಿ ಒಂದು ಕೂಸಿತ್ತು. ಅವರು ನಿಂತಿದ್ದಂತೆಯೆ ಅವರ ಸುತ್ತಲೂ ನೀರು ಉಕ್ಕಿ ಬಂತು. ಅವರಿಬ್ಬರೂ ಈಸಿಹೋಗಿ ಒಂದು ಮರವನ್ನೇರಿಕೊಂಡರು. ಅವರ ಎದುರಿನಲ್ಲಿಯೇ ಸಾಗರದ ನೀರು ಅವರ ಮನೆಗಳನ್ನು ಕೊಚ್ಚಿಕೊಂಡೊಯ್ದು ಕಣ್ಮರೆ ಮಾಡಿತು.

ಮುಂದೆ ಒಂದು ತಾಸಿನೊಳಗಾಗಿ ಈ ಭಾಗದ ಎಂಟು ನಡುಗಡ್ಡೆಗಳ ಮೇಲೆ ಈ ಉತ್ತಾಲ ತರಂಗಗಳು ದಾಳಿಮಾಡಿ ವಿನಾಶದ ತಾಂಡವ ನೃತ್ಯವನ್ನಾಡಿದವು.

ಮೊದಲನೆಯ ತೆರೆಯ ರಭಸ ಕಡಿಮೆಯಾಯಿತೊ ಇಲ್ಲವೋ ಎನ್ನುವಷ್ಟರಲ್ಲಿ ಮತ್ತೊಂದು ಅದಕ್ಕಿಂತ ಪ್ರಚಂಡವಾದ ತೆರೆ ದಂಡೆಗೆ ಅಪ್ಪಳಿಸಿತು. ಬಳಿಕ ಅದರ ಹಿಂದೆ ಇನ್ನೊಂದು, ಮತ್ತೊಂದು; ಹೀಗೆ ತೆರೆಗಳ ಮೇಲೆ ತೆರೆಗಳು ದಾಳಿ ಮಾಡಿದವು.

ಮನೆಗಳ ಮೇಲೆ ಮನೆಗಳು ಕುಸಿದುಬಿದ್ದವು. ಮರಗಳು ಉರುಳಿ ಬಿದ್ದವು. ರೈಲು ಕಂಬಿಗಳು ಕಿತ್ತುಹೋದವು. ಸಮುದ್ರದಲ್ಲಿ ತೇಲಿ ಹೋದ ಜನರನ್ನು ಉಳಿಸಲು ದೋಣಿಗಳು ಹೊರಟವು. ವಿಮಾನಗಳು ನೀರಿನಲ್ಲಿ ಈಸುತ್ತಲಿದ್ದವರಿಗೆ ಲೈಫ್ ಬೆಲ್ಟುಗಳನ್ನು ಒಗೆದವು.

ಹವಾಯಿ ನಡುಗಡ್ಡೆಗಳ ಮೇಲೆ ಅಕಸ್ಮಾತ್ತಾಗಿ ದಾಳಿ ಮಾಡಿದ ಈ ಭರತ ತರಂಗಗಳು ಎರಡೂವರೆ ಕೋಟಿ ಡಾಲರುಗಳ ಆಸ್ತಿಪಾಸ್ತಿಗಳನ್ನು ನಾಶಗೈದವು. ೧೫೯ ಜನರು ಸತ್ತರು. ೧೬೩ ಜನ ಆಸ್ಪತ್ರೆಗೆ ಸೇರಿದರು.

ಈ ದಾಳಿಯಲ್ಲಿ ಒಂದೆರಡು ಮೋಜಿನ ಸಂಗತಿಗಳೂ ನಡೆದವು. ಕವೇಲಾ ಆಖಾತ ತೀರದ ಓಆಹುದಲ್ಲಿ ತೆರೆಯು ಒಂದು ಮನೆಯನ್ನು ಬುಡಸಹಿತ ೨೦೦ ಅಡಿ ದೂರದ ವರೆಗೆ ಒಳನಾಡಿನಲ್ಲಿ ಎತ್ತಿಕೊಂಡೊಯ್ದು ಕಬ್ಬಿನ ಹೊಲದಲ್ಲಿ ತೇಲಿಸಿ ನೆಲಕ್ಕಿಟ್ಟಿತು. ಆ ಮನೆಯಲ್ಲಿ ತೆರೆ ಬಡಿಯುವ ಮೊದಲು ಅಡಿಗೆ ತಯಾರಾಗುತ್ತಿತ್ತು. ಮನೆಯನ್ನು ತೆರೆ ಕೆಳಗಿಟ್ಟಾಗ ಕೂಡ ಈ ಪಾಕ ಕಾರ್ಯ ಯಥಾವತ್ತಾಗಿ ನಡೆದೇ ಇತ್ತು. ಲಿಮಾವೋದಲ್ಲಿ ತೆರೆ ಒಂದು ಮನೆಯನ್ನು ತೇಲಿಸಿಕೊಂಡು ಹೋಗಿ ಒಂದೆಡೆ ಇಟ್ಟು, ತಿರುಗುವಾಗ ಇನ್ನೊಂದು ಮನೆಯನ್ನು ತೇಲಿಸಿಕೊಂಡು ಬಂದು ಭರತಿಯ ನೀರಿನ ದಂಡೆಯ ಸ್ಥಾನದಲ್ಲಿಟ್ಟಿತು.

ಈ ಬಗೆಯ ಅನಾಹುತಗಳಿಂದ ಜನರನ್ನೂ ಆಸ್ತಿಯನ್ನೂ ರಕ್ಷಿಸುವದು ಸಾಧ್ಯವೇ ಎಂಬುದು ಈಗಿನ ಪ್ರಶ್ನೆ.

ಪ್ಯಾಸಿಫಿಕ್ ಮಹಾಸಾಗರದಲ್ಲಿ ಆರು ಸ್ಥಳಗಳು ಇಂಥ ಉದ್ದಾಮ ತರಂಗಗಳನ್ನು ಎಬ್ಬಿಸುತ್ತವೆ. ಆಲೂಶನ್ಸ್, ಜಪಾನ, ಚೈಲ್, ಕಮ-ಚಾಟ್ಕಾ ದ್ವೀಪಕಲ್ಪ, ಮೆಕ್ಸಿಕೊ ಮತ್ತು ಸೊಲೊಮನ್ ನಡುಗಡ್ಡೆ ಇವುಗಳ ಸಮೀಪದ ಸಮುದ್ರ ಭಾಗಗಳೇ ಈ ಸ್ಥಳಗಳಾಗಿವೆ.

ಸಮುದ್ರ ತಳದ ಭೂಮಿಯ ಕಂಪನದಿಂದ ಹುಟ್ಟುವ ಈ ತೆರೆಗಳು (ಜಪಾನದಲ್ಲಿ ಅವಕ್ಕೆ ತ್ಸುನಾಮಿ ಎಂದು ಕರೆಯುತ್ತಾರೆ) ಸಾವಿರಾರು ಮೈಲುಗಳ ವರೆಗೆ ಅತ್ಯಂತ ವೇಗದಿಂದ ಸಾಗುತ್ತವೆ. ಈ ಕಂಪನಗಳು ಯಾವ ದಿಕ್ಕಿನಿಂದ ಬರುವವೋ ಅದಕ್ಕೆದುರಾಗಿ ಇರುವ ಕರಾವಳಿಯ ಮೇಲೆಯೇ ತೆರೆಗಳ ದಾಳಿ ಭಯಂಕರವಾಗಿರುತ್ತದೆ. ಬಿರುಗಾಳಿಯೆದ್ದ ಸಮಯದಲ್ಲಿ ಕಂಪನಗಳಾದರಂತೂ ತೆರೆಗಳ ತೀವ್ರತೆ ಇನ್ನಿಷ್ಟು ಹೆಚ್ಚುತ್ತದೆ. ಭೂಮಿ ಚಪ್ಪಟೆಯಾಗಿ ಅಗಲವಾಗಿದ್ದಾಗ ನೀರು ಹರಡಿ ತೀವ್ರತೆ ತುಸು ಕಡಿಮೆಯಾಗುತ್ತದೆ.

ಆಖಾತ ತೀರಗಳಿಗೆ ಯಾವಾಗಲೂ ಹೆಚ್ಚು ಪೆಟ್ಟು ಬೀಳುತ್ತದೆ. ಭೂಶಿರದಂಥ ತೀರಕ್ಕೆ ಅಪಾಯ ಕಡಿಮೆ. ನದಿಕೊಳ್ಳ ಪ್ರದೇಶಗಳಿಗೂ ಪೆಟ್ಟು ಹೆಚ್ಚಾಗಿ ಬೀಳುತ್ತದೆ. ಆಖಾತ ಪ್ರದೇಶಗಳಲ್ಲಿ ಸಮುದ್ರ ಚೂಪಾಗಿರುವದರಿಂದ ಅಗಲವಾದ ಭಾಗದಿಂದ ನುಗ್ಗಿ ಬಂದ ತೆರೆಗಳು ಆಖಾತದ ಇಕ್ಕಟ್ಟಾದ ಪ್ರದೇಶದಲ್ಲಿ ಸ್ಥಳ ಸಾಲದೆ ಬಹಳ ಎತ್ತರಕ್ಕೇರಿಬಿಡುವವು.

ಹೆಚ್ಚಾಗಿ ತೆರೆಗಳ ದಾಳಿಯಾಗುವ ಪೂರ್ವದಲ್ಲಿ ಸಮುದ್ರ ನೀರು ತೀರದಿಂದ ಹಿಂದಕ್ಕೆ ಸರಿಯುತ್ತದೆ. ೧೮೩೭, ನವಂಬರ ೭ ರಂದು ಕಹಾಲುಯಿ ಆಖಾತದಲ್ಲಿ ನೀರು ದಂಡೆಯಿಂದ ೧೨೦ ಅಡಿ ಹಿಂದೆ ಸರಿಯಿತು. ಜನ ಆನಂದದಿಂದ ನೀರು ಹಿಂದೆ ಸರಿದಂತೆ ಮುಂದೆ ಹೋಗುತ್ತ ನೀರಿಲ್ಲದೆ ಚಡಪಡಿಸುತ್ತಿದ್ದ ಮೀನಗಳನ್ನು ಹಿಡಿದರು. ಆದರೆ ಬೇಗನೆ ಸಮುದ್ರದ ನೀರು ತೆರೆತೆರೆಗಳಾಗಿ ಉಕ್ಕೇರಿ ಬಂದು ಈ ಜನರನ್ನೂ ಅವರ ಮನೆಗಳನ್ನೂ ಆಸ್ತಿಯನ್ನೂ ದೋಣಿಗಳನ್ನೂ ದನಕರುಗಳನ್ನೂ ನುಂಗಿತು.

ಸಮುದ್ರ ತಳದಲ್ಲಿ ಸಂಭವಿಸುವ ಭೂಕಂಪಗಳೆಲ್ಲ ಇಷ್ಟೊಂದು ತೀವ್ರ ತರದ ತಾಂಡವವನ್ನಾಡಿಸುವದಿಲ್ಲ. ಕೇವಲ ಅರ್ಧ ಫೂಟೆತ್ತರದ ತೆರೆಗಳನ್ನವು ಎಬ್ಬಿಸಿದ್ದೂ ಉಂಟು. ಇಂಥ ತೆರೆಗಳ ಬಗ್ಗೆ ಸುದ್ದಿಯೂ ಹೊರಬರುವದಿಲ್ಲ.

ಎಲ್ಲ ವಿನಾಶಕ ಸಮುದ್ರ ತರಂಗಗಳು ಭೂಕಂಪದಿಂದಲೇ ಹುಟ್ಟುತ್ತವೆ ಎಂದಿಲ್ಲ.

ಸುಮಾತ್ರಾ ಮತ್ತು ಜಾವಾ ನಡುಗಡ್ಡೆಗಳ ನಡುವಿನ ಕ್ರಕಾಟೋಲಾ ಎಂಬ ನಡುಗಡ್ಡೆಯಲ್ಲಿ ೧೮೮೩ ರಲ್ಲಿ ಜ್ವಾಲಾಮುಖಿ ಸ್ಫೋಟವಾಗಿ ಅದು ೧೦೦ ಅಡಿ ಎತ್ತರದ ತೆರೆಗಳನ್ನು ಹುಟ್ಟಿಸಿತು. ಆಗ ಸುಮಾರು ೧೦೦೦ ಹಳ್ಳಿಗಳು ನಾಶವಾಗಿ ೩೬,೦೦೦ ಜನರು ಸತ್ತರು.

ಅಟ್ಲಾಂಟಿಕ್ ಮಹಾಸಾಗರದಲ್ಲಿ ಭೂಕಂಪಗಳಾಗುವದು ಕಡಿಮೆ. ಅಲ್ಲಿ ಭರತ ತರಂಗಗಳೇಳುವದೂ ಕಡಿಮೆ. ಆದರೂ ಪೋರ್ತುಗಾಲದ ಲಿಸ್ಬನ್ ನಗರಕ್ಕೆ ೧೭೫೫ರಲ್ಲಿ ಇವುಗಳ ಹೊಡೆತ ಬಿದ್ದಿತ್ತು. ಆಗ ೫೦ ಅಡಿ ಎತ್ತರದ ತೆರೆಗಳೆದ್ದಿದ್ದವು.

ಪ್ಯಾಸಿಫಿಕ್ ಮಹಾಸಾಗರದಲ್ಲಿ ಕಳೆದ ಶತಮಾನದಲ್ಲಿ ಸಾಮಾನ್ಯವಾಗಿ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆಯಂತೆ ಈ ತರಂಗಗಳ ಹಾವಳಿ ಎದ್ದಿತ್ತು. ೧೯೪೬ರಲ್ಲಿ ಹವಾಯಿಗೆ ಬಿದ್ದ ಪೆಟ್ಟನ್ನು ಕಂಡ ಮೇಲೆ ಇದಕ್ಕೇನು ಮಾಡಬೇಕು ಎಂದು ಭೂಕಂಪ ಶಾಸ್ತ್ರಜ್ಞರು ವಿಚಾರಿಸತೊಡಗಿದರು.

ಇಂಥ ಅನಾಹುತಗಳ ಬಗ್ಗೆ ಮುನ್ನೆಚ್ಚರಿಕೆ ಕೊಡಬಹುದೇ? ಭೂಕಂಪ ಶಾಸ್ತ್ರಜ್ಞರಿಗೆ ಭೂಕಂಪದ ಮುನ್ಸೂಚನೆಯನ್ನು ಕಂಡು ಹಿಡಿಯಲು ಸಾಧ್ಯವಿದೆ. ಆದರೆ ಪ್ಯಾಸಿಫಿಕ್ ಪ್ರದೇಶದ ಪ್ರತಿ ಭೂಕಂಪದ ಬಗ್ಗೆ ಎಚ್ಚರಿಕೆಯೀಯುವದಾದರೆ ಜನರು ಮೇಲಿಂದ ಮೇಲೆ ಸ್ಥಾನಾಂತರ ಮಾಡುತ್ತಿರಬೇಕಾದೀತು. ಪ್ರತಿಸಲವೂ ವಿನಾಶಕರವಾದ ತರಂಗಗಳು ಏಳದಿರುವದರಿಂದ ಈ ಬಗೆಯ ಸ್ಥಾನಾಂತರವೂ ಒಂದು ತಲೆನೋವಾಗಿ ಬಿಡಬಹುದು.

ಈಗ ಹವಾಯಿಯನ್ ಜ್ವಾಲಾಮುಖಿ ವೇಧ

ಶಾಲೆಯಲ್ಲಿ ಹೊಸ ಬಗೆಯ ಭೂಕಂಪ ಶೋಧಕ ಉಪಕರಣಗಳು ಇಡಲ್ಪಟ್ಟಿದ್ದು ಅವುಗಳಿಗೆ ರೇಡಿಯೋ ಸಂದೇಶವಾಹಕಗಳ ಸಹಾಯವೂ ಒದಗಿಸಲ್ಪಟ್ಟಿದೆ. ಇಂದು ಸಮುದ್ರತಳದಲ್ಲಿ ಭೂಕಂಪವಾದರೆ ಕೆಲವೇ ನಿಮಿಷಗಳಲ್ಲಿ ಅವುಗಳ ಕಲ್ಪನೆ ಶಾಸ್ತ್ರಜ್ಞರಿಗೆ ತಿಳಿದುಬರುವದು ಅವರು ಭೂಕಂಪವಾದ ಸ್ಥಳವನ್ನು ತಮ್ಮ ಉಪಕರಣಗಳ ಸಹಾಯದಿಂದ ಕಂಡುಹಿಡಿದು ಅಲ್ಲಿ ಭರತ ತರಂಗಗಳೇಳುವ ಸಂಭವ ಕಂಡು ಬಂದರೆ ಕೂಡಲೆ ರೇಡಿಯೊಗಳ ಮೂಲಕ ಎಚ್ಚರಿಕೆಯ ಸಂದೇಶವನ್ನು ಸಂಬಂಧಿಸಿದ ಪ್ರದೇಶಗಳಿಗೆ ಕಳಿಸುವರು.

೧೯೫೨ರಲ್ಲಿ ಹವಾಯಿ ನಡುಗಡ್ಡೆಯಲ್ಲಿ ಚುನಾವಣೆ ನಡೆದಾಗ ಭೂಕಂಪ ಶಾಸ್ತ್ರಜ್ಞರು ಇಂಥ ಎಚ್ಚರಿಕೆಯನ್ನು ಜನರಿಗೆ ಕೊಟ್ಟರು. ಸಮುದ್ರ ತೀರದ ಜನರು ಸುರಕ್ಷಿತ ಪ್ರದೇಶಗಳಿಗೆ ಧಾವಿಸಿದರು. ಎದ್ದ ಭರತ ತರಂಗಗಳು ಅಷ್ಟೊಂದು ಭೀಕರವಾಗಿರದಿದ್ದರೂ ಅನೇಕ ಸಾವಿರ ಡಾಲರುಗಳ ಆಸ್ತಿಯನ್ನು ನಾಶ ಮಾಡಿದವು. ಕೇವಲ ಆರು ಆಕಳುಗಳು ಮಾತ್ರ ಸತ್ತವು, ಒಬ್ಬ ಮನುಷ್ಯನೂ ಸಾಯಲಿಲ್ಲ ಎಂಬುದು ಕೂಡ ಒಂದು ದೊಡ್ಡ ಸಾಧನೆಯೇ ಅಲ್ಲವೆ ?



## ಸಾಮುದ್ರಿಕ

ನನ್ನ ಮಿತ್ರರೊಬ್ಬರು ಕಾರ್ಕಳದಲ್ಲಿ ವಕೀಲರಾಗಿದ್ದಾರೆ. ಅವರದು ತುಸು ತುಂಟ ಸ್ವಭಾವ. ಕುರುಡು ನಂಬಿಗೆಗಳನ್ನು ಉದ್ಘಾಟಿಸುವುದರಲ್ಲಿ ಎತ್ತಿದ ಕೈಯಾದ ಅವರಲ್ಲಿಗೆ ಒಂದು ದಿನ ಬೆಳಗ್ಗೆ ಒಬ್ಬ ಹಸ್ತಸಾಮುದ್ರಿಕರು ಬಂದರು.

ನಮಸ್ಕಾರ ಚಮತ್ಕಾರಗಳಾದ ಮೇಲೆ ಆಗಂತುಕರು, " ಸ್ವಾಮಿ, ವಕೀಲರೆ, ನಿಮ್ಮ ಕೈ ನೋಡಬೇಕೆಂದು ನನಗೆ ತುಂಬಾ ಮನಸ್ಸಾಗಿದೆ, " ಎಂದು ದೇಶಾವರಿ ನಗೆಯೊಡನೆ ವಿಷಯಪ್ರವೇಶ ಮಾಡಿದರು.

ವಕೀಲರು ತಟ್ಟನೆ, " ಓಹೋ ಅದಕ್ಕೇನು ? ಅವಶ್ಯವಾಗಿ ನೋಡಿರಿ "ಎಂದು ತಮ್ಮ ಅಂಗೈಯನ್ನು ಮುಂದೊಡ್ಡಿದರು.

ಐದು ನಿಮಿಷ ನಟ್ಟ ದೃಷ್ಟಿಯಿಂದ ಹಸ್ತಪರೀಕ್ಷೆ ಮಾಡಿದಮೇಲೆ ಸಾಮುದ್ರಿಕರು ಮತ್ತೊಂದು ದೇಶಾವರಿ ನಗೆಯೊಡನೆ, " ಸಾಮಿ, ನಿಮ್ಮ ಕೈಯೆಂದರೆ ಕೈ. ಇದರ ಆಯುಷ್ಯರೇಖೆ—"

ವಕೀಲರು ಅವರನ್ನು ಅಷ್ಟಕ್ಕೇ ತಡೆದರು: " ಸ್ವಾಮಿ, ಫಲವನ್ನು ಹೇಳುವ ತೊಂದರೆಯನ್ನು ದಯವಿಟ್ಟು ತೆಗೆದುಕೊಳ್ಳಬೇಡಿ. ನೀವು ನನ್ನ ಕೈಯನ್ನು ನೋಡಬೇಕೆಂದು ಅಪೇಕ್ಷಿಸಿದಿರಿ. ನನಗಾದರೋ ಇವೊತ್ತು ಬೆಳಗ್ಗೆ ವಿಶೇಷ ಕೆಲಸವಿರಲಿಲ್ಲ. ನಿಮಗೆ ನನ್ನ ಕೈ ನೋಡುವುದರಿಂದ ಸಂತೋಷವಾಗುತ್ತಿದ್ದರೆ ಮತ್ತು ನನಗೆ ಅದರಿಂದ ನಷ್ಟವಿಲ್ಲದಿದ್ದರೆ ಯಾಕೆ ಈ ಚಿಕ್ಕ ಪರೋಪಕಾರ ಮಾಡಬಾರದು ಅಂತ ಕೈ ತೋರಿಸಿದೆ ಅಷ್ಟೇ. ನನಗೆ ಹನ್ನೊಂದು ಗಂಟೆಗೆ ಕೋರ್ಟಿಗೆ ಹೋಗಬೇಕು. ಅಷ್ಟರ ವರೆಗೆ ಬೇಕಾದಷ್ಟು ನೋಡಿರಿ. ಫಲ ಕೇಳುವ ಹಂಬಲ ನನಗಿಲ್ಲ. "

ಸಾಮುದ್ರಿಕರು ಹೇಳದೆ ಕೇಳದೆ ಪಲಾಯನ ಮಾಡಿದರು.

—ಪಾ. ವೆ., ಉಡುಪಿ

### ವೃದ್ಧರನ್ನು ತರುಣರಾಗಿ ಮಾಡಬಲ್ಲ ಆಯುರ್ವೇದ ಚಿಕಿತ್ಸೆ

# ಕಾಯಕಲ್ಪ ಎಂದರೇನು?

ರಾಜವೈದ್ಯ ಆನಂದಸ್ವಾಮಿ

ಆಯುರ್ವೇದ ಚಿಕಿತ್ಸೆಯು ತ್ರಿಧಾತು ಸಿದ್ಧಾಂತವನ್ನವಲಂಬಿಸಿದೆ. ಆಯುರ್ವೇದ ಶಾಸ್ತ್ರದಲ್ಲಿ ನಡೆಸಿದ ಸಂಶೋಧನೆಗಳಿಂದ ಈ ಸಿದ್ಧಾಂತದ ಸತ್ಯ ಮನವರಿಕೆಯಾಗಿದೆ. ಈ ತ್ರಿಧಾತುಗಳು ಸರಿಯಾದ ಪ್ರಮಾಣದಲ್ಲಿ ದೇಹದಲ್ಲಿದ್ದಾಗ ದೇಹದ ಕಾರ್ಯ ಸರಿಯಾಗಿ ಸಾಗುತ್ತದೆ. ಪ್ರಮಾಣ ವ್ಯತ್ಯಾಸವಾದಾಗ ರೋಗಾದಿಗಳು ಕಾಣಿಸಿಕೊಳ್ಳುತ್ತವೆ.

'ಕಾಯಕಲ್ಪ' ಚಿಕಿತ್ಸೆಯ ಉದ್ದೇಶವು ತ್ರಿಧಾತುಗಳ ನೈಸರ್ಗಿಕ ಸಮತೋಲವನ್ನು ಸಾಧಿಸಿ ಶರೀರ ವ್ಯಾಪಾರವನ್ನು ಸರಿಗೊಳಿಸುವದಾಗಿದೆ. ಕಾಯ ಎಂದರೆ ಶರೀರ, ಕಲ್ಪ ಎಂದರೆ ಬದಲಾವಣೆ.

ಕಾಯಕಲ್ಪ ವಿಚಾರದಲ್ಲಿ ನಾನು ನಡೆಸಿದ ಸಂಶೋಧನೆಗಳನ್ನು ಅನುಭವಾತ್ಮಕ ಪ್ರಯೋಗಗಳಿಗೆ ಒಳಪಡಿಸಿ ಪರೀಕ್ಷಿಸಿದ್ದು ಅದರಿಂದ ಆಯುರ್ವೇದ ಔಷಧಿಗಳ ಯೋಗ್ಯತೆ ಸಿದ್ಧವಾಗಿದೆ.

ಕಾಯಕಲ್ಪ ಚಿಕಿತ್ಸೆಯಿಂದ ಆಗಿಂದಾಗ ಕಂಡುಬರುವ ಪರಿಣಾಮಗಳು ಆಶ್ಚರ್ಯಕಾರಕವಾಗಿವೆ. ಶರೀರದ ಚರ್ಮ ಮತ್ತು ಚಲನವಲನಗಳು ಉಲ್ಲಾಸಶೀಲವಾಗುವವು. ಅಂದರೆ ಸಧೃಢ ಮನುಷ್ಯನ ಚರ್ಮದ ಕಾಂತಿಯೂ ಚಲನವಲನಗಳಲ್ಲಿಯ ನೈಸರ್ಗಿಕ ಚಾಪಲ್ಯವೂ ಕಂಡುಬರುವದು. ಬಿಳಿಕೂದಲು ಕಪ್ಪಾಗುವದು. ದೃಷ್ಟಿ ಮತ್ತು ಶ್ರವಣಶಕ್ತಿ ಸುಧಾರಿಸಿ ಸ್ನಾಯುಗಳು ಬಲಿಷ್ಠವಾಗಿ ತುಂಬಿಕೊಳ್ಳುವವು.

ಇದೆಲ್ಲಕ್ಕೂ ಮಿಗಿಲಾಗಿ ಮಾನಸಿಕ ಜೀವನದಲ್ಲಿ ಹೊಸ ಹುಮ್ಮಸು ಮೂಡುವದೇ ಕಾಯಕಲ್ಪ ಚಿಕಿತ್ಸೆಯ ನಂತರ ಕಂಡುಬರುವ ಮಹಾ ಬದಲಾವಣೆಯಾಗಿದೆ. ಕಾಯಕಲ್ಪ ಚಿಕಿತ್ಸೆಯಿಂದ ಇಡೀ ಶರೀರವೇ ನವಚೈತನ್ಯವನ್ನು ಪಡೆಯುವದು.

ಅನೇಕರು ತಿಳಿದಂತೆ ಕಾಯಕಲ್ಪವೆಂದರೆ ಕೇವಲ ಪಥ್ಯದ ಅಹಾರ ಸೇವನೆಯಲ್ಲ. ಅದು ನಿಜವಾಗಿಯೂ ವೃದ್ಧಾಪ್ಯದೊಂದಿಗೆ ಹೋರಾಡುವ ಒಂದು ಕಲೆ. ಕಾಯಕಲ್ಪ ಚಿಕಿತ್ಸೆಯು ದೇಶ, ಹವಾಮಾನ, ಲಿಂಗ, ವಯೋಭೇದಗಳನ್ನು ಗಣಿಸದೆ ಸಕಲ ಬಗೆಯ ಮಾನವರೋಗಗಳನ್ನು ಗುಣಪಡಿಸಬಲ್ಲದು.

೧೯೩೩ರ ವರೆಗೂ ಕಾಯಕಲ್ಪದ ವಿಚಾರವನ್ನು ಪರಿಹಾಸ್ಯದಿಂದಲೇ ಕಾಣುತ್ತಿದ್ದರು. ಆದರೆ ಪಂಡಿತ ಮದನ ಮೋಹನ ಮಾಲವೀಯ ಮತ್ತು ಇನ್ನಿತರ ಕೆಲವರು ಕಾಯಕಲ್ಪ ಚಿಕಿತ್ಸೆ ಪಡೆದು ಅದರ ಸತ್ಯವನ್ನು ಕಂಡುಕೊಂಡ ನಂತರ

'ಸಂಡೇ ಸ್ಟ್ಯಾಂಡರ್ಡ್' ನಿಂದ

ಭಾರತದಲ್ಲಿಯ ಮತ್ತು ಪಾಶ್ಚಾತ್ಯ ಜಗತ್ತಿನಲ್ಲಿಯ ಜನರಿಗೆ ಆಯುರ್ವೇದದ ಆಶ್ಚರ್ಯಕಾರಕ ಶಕ್ತಿಯ ಅರಿವು ಬಂದಿತು.

ಕಾಯಕಲ್ಪದಲ್ಲಿ ಎರಡು ಪ್ರತ್ಯೇಕವಾದ ಬಗೆಗಳಿವೆ. ಒಂದಕ್ಕೆ ಕುಟಿಪ್ರವೇಶಿಕ ಕಲ್ಪವೆಂದೂ ಇನ್ನೊಂದಕ್ಕೆ ವಾತಾತಪಿಕ ಕಲ್ಪವೆಂದೂ ಹೆಸರಿದೆ. ಮೊದಲನೆಯದು ಮುಚ್ಚಿದ ಕೋಣೆಯ ಚಿಕಿತ್ಸೆಯಾಗಿದ್ದು ಪಂಡಿತ ಮದನ ಮೋಹನ ಮಾಲವೀಯರು ೧೯೩೮ರಲ್ಲಿ ಅಲಹಾಬಾದದಲ್ಲಿ ಕುಟಿಪ್ರವೇಶಿಕ ಕಲ್ಪಚಿಕಿತ್ಸೆಯನ್ನು ಪಡೆದರು.

ಕುಟಿಪ್ರವೇಶಿಕ ಕಲ್ಪವು ವಿಶೇಷ ವೆಚ್ಚದ, ಕಷ್ಟದ ಮತ್ತು ವಿಸ್ತಾರವಾದ ಚಿಕಿತ್ಸೆಯಾಗಿದೆ. ಕತ್ತಲೆಯ ಕೋಣೆಯಲ್ಲಿ ಬಾಹ್ಯಜಗತ್ತಿನ ಸಂಪರ್ಕವನ್ನು ತ್ಯಜಿಸಿ ಇರಲು ಬಲವಾದ ಆತ್ಮ-ಸಂಯಮವೂ ಶಿಸ್ತೂ ಅಗತ್ಯವಿದೆ. ಕತ್ತಲೆ ಕೋಣೆಯಲ್ಲಿರುವಾಗ ಔಷಧಿ ಕುಡಿಯುತ್ತಿರುವ ಕಪ್ಪು ಆಕಳಿನ ಹಾಲೊಂದೇ ಆಹಾರವಾಗಿರುವದು. ಇದು ಕಠಿಣವಾದ ಚಿಕಿತ್ಸಾಕ್ರಮವಾಗಿದ್ದರೂ ಪುನಃ ತಾರುಣ್ಯವನ್ನು ಪಡೆಯಲು ಅತಿ ಖಂಡಿತವಾದ ಕ್ರಮವಾಗಿದೆ.

ಕುಟಿ ಚಿಕಿತ್ಸೆಯಲ್ಲಿ ಬೇರೆ ಬೇರೆ ಪ್ರಕಾರಗಳು ಇವೆ. ಕೆಲವದರಲ್ಲಿ ಚಿಕಿತ್ಸೆ ಹೊಂದುವವನ ಹಲ್ಲು, ಕೂದಲು ಮತ್ತು ಉಗುರುಗಳು ಕಳಚಿ ಬಿದ್ದುಹೋಗಿ ಹೊಸತು ಬರುವವು. ಸೋಮ-ಲತಾ ಕಲ್ಪದಂಥ ಇತರ ಬಗೆಗಳಲ್ಲಿ ರೋಗಿ ಅನೇಕ ದಿನಗಳ ವರೆಗೆ ಎಚ್ಚರ ತಪ್ಪುವನು. ಆದರೆ ಚಿಕಿತ್ಸೆ ಮುಗಿದ ನಂತರ ಆತ ಹೊಸ ಮನುಷ್ಯನಾಗುತ್ತಾನೆ.

ರೋಗಿಯನ್ನು ತನ್ನ ಮಗನೆಂದೇ ಭಾವಿಸುವ ಅತ್ಯಂತ ತಜ್ಞನಾದ ವೈದ್ಯನ ನೇತೃತ್ವದಲ್ಲಿ ಕಾಯಕಲ್ಪ ಚಿಕಿತ್ಸೆ ನಡೆಯತಕ್ಕದ್ದು ಎಂದು ಚರಕ ವಿಧಿಸಿದ್ದಾನೆ.

ವಾತಾತಪಿಕ ಚಿಕಿತ್ಸೆ ( ವಾತ ಅಂದರೆ ಗಾಳಿ, ಆತಪ ಎಂದರೆ ಬಿಸಿಲು ) ಹೆಚ್ಚು ಸುಲಭವಾಗಿದೆ. ಈ ಚಿಕಿತ್ಸೆಯಲ್ಲಿ ನೀವು ನಿತ್ಯದಂತೆ ಓಡಾ-ಡಬಹುದು, ನಿಮ್ಮ ಕೆಲಸಗಳನ್ನು ಮಾಡಬಹುದು, ನಿತ್ಯದ ಆಹಾರವನ್ನು ಸೇವಿಸಬಹುದು. ಆದರೆ ಅತಿಶ್ರಮವನ್ನು ಮಾಡಲಾಗದು, ಮನ ಬಂದಂತೆ ತಿನ್ನುಣ್ಣಲಾಗದು.

ವಾತಾತಪಿಕ ಚಿಕಿತ್ಸೆ ಕುಟಿ ಚಿಕಿತ್ಸೆಯಷ್ಟು ಅದ್ಭುತ ಪರಿಣಾಮವನ್ನು ತೋರಿಸದಿದ್ದರೂ ಅದು ಇಡೀ ಪ್ರಕೃತಿಯನ್ನು ತಿದ್ದಿ ಹೊಸ ಚೈತನ್ಯವನ್ನು ಒದಗಿಸಿಕೊಡುವದು.

ಎರಡೂ ಬಗೆಯ ಚಿಕಿತ್ಸೆಗಳನ್ನು ಕೇವಲ ವನಸ್ಪತಿ ಔಷಧಿಗಳ ಮೂಲಕ ಅಥವಾ ಭಸ್ಮಗಳ ಮೂಲಕ ನಡೆಸಬಹುದು. ಸ್ತ್ರೀ-ಪುರುಷರಿಬ್ಬರಿಗೂ ಒಂದೇ ಬಗೆಯ ಚಿಕಿತ್ಸೆ ನಡೆಯುವದು. ಸಾಮಾನ್ಯವಾಗಿ ಈ ಔಷಧಿಗಳು ಅನ್ಯ ಪರಿಣಾಮಕ ಕ್ರಿಯೆಗೆ ಕಾರಣವಾಗುವವು. ಇವು ಅನೇಕ ಬಗೆಯ ವ್ಯಾಧಿಗಳನ್ನು ಪರಿಹರಿಸಿ ಪುನರುಜ್ಜೀವನದ ಗತಿಯನ್ನು ತ್ವರಿತಗೊಳಿಸುವವು. ಕುಟಿ ಚಿಕಿತ್ಸೆಯು ಚಳಿಗಾಲದಲ್ಲಿ ನಡೆಯತಕ್ಕದ್ದಾಗಿದ್ದು ವಿಶಿಷ್ಟ ಸಂದರ್ಭಗಳಲ್ಲಿ ಬೇಸಿಗೆ ಕಾಲದಲ್ಲಿ ತಂಪು ಪ್ರದೇಶಗಳಲ್ಲಿ ಕೂಡ ಅದನ್ನು ನಡೆಸಬಹುದು. ಕಲ್ಪ ಋತುವು ಸಾಮಾನ್ಯವಾಗಿ ನವಂಬರ ತಿಂಗಳಲ್ಲಿ ಆರಂಭವಾಗಿ ಮಾರ್ಚ್ ತಿಂಗಳಲ್ಲಿ ಮುಗಿಯುವದು.

ಯಾವ ಬಗೆಯ ಕಲ್ಪಚಿಕಿತ್ಸೆಯಲ್ಲಿಯೇ ಆಗಲಿ ಪಂಚಕರ್ಮಕ್ಕೆ ಅಂದರೆ ಪ್ರಾರಂಭಿಕ ಶುದ್ಧೀಕರಣಕ್ಕೆ ಅತ್ಯಂತ ಮಹತ್ವವಿದೆ.

ಶರೀರದಲ್ಲಿ ವಿಷಸಂಗ್ರಹವಾಗುವದೇ ಶೈಥಿಲ್ಯ, ವೃದ್ಧಾಪ್ಯ ಮತ್ತು ಸಾವಿಗೆ ಕಾರಣವೆಂದು ಆಯುರ್ವೇದ ಹೇಳುತ್ತದೆ.

ವಾತ, ಪಿತ್ತ, ಕಫಗಳೇ ಶರೀರ ಧಾರಣೆಯ ಧಾತುಗಳು. ಇವುಗಳಲ್ಲಿ ಯಾವದೊಂದು ಮಂದವಾದರೆ ಅಥವಾ ತೀಕ್ಷ್ಣವಾದರೆ ರೋಗ ಕಾಣಿಸಿಕೊಳ್ಳುವದು.

ವಾತ ಪ್ರಕೋಪವಾದಾಗ ಯಾವ ಆಹಾರ

ವನ್ನು ಸೇವಿಸಿದರೂ ಅದು ವಾಯುವಾಗಿ ಅಶಾಂತಿ, ರುಕ್ಷತೆ, ರಕ್ತದ ಒತ್ತಡ ಹೆಚ್ಚುವಿಕೆ ಮೂಲವ್ಯಾಧಿ, ಸಂಧಿವಾತಾದಿಗಳನ್ನು ಹುಟ್ಟಿಸುವದು. ಕಫಾಧಿಕ್ಯದಿಂದ ಸೇವಿಸಿದ ಆಹಾರದಲ್ಲಿ ಹೆಚ್ಚಿನದು ಕಫವಾಗಿ ದಮ್ಮು, ಕೆಮ್ಮು, ಕ್ಷಯಾಧಿ ರೋಗಗಳು ಹುಟ್ಟುವವು. ಪಿತ್ಥ ಪ್ರಕೋಪವಾದಾಗ ರಕ್ತದ ಒತ್ತಡ ಕಡಿಮೆಯಾಗುವದು, ರಕ್ತ ಮೂಲವ್ಯಾಧಿ ಮುಂತಾದ ವಿಕಾರಗಳುಂಟಾಗುವವು. ಕಳೆದುಹೋದ ಯೌವನವನ್ನು ತಿರುಗಿ ಪಡೆಯುವದಾದಲ್ಲಿ ಶರೀರದಲ್ಲಿಯ ಕಲ್ಮಷಗಳನ್ನು ಹೊರಗೆ ಹಾಕಿ ತ್ರಿಧಾತುಗಳಲ್ಲಿಯ ಪ್ರಮಾಣಬದ್ಧತೆಯನ್ನು ಪುನಃ ಸ್ಥಾಪಿಸಬೇಕಾಗುವದು.

ಪುನರುಜ್ಜೀವನ ಚಿಕಿತ್ಸೆಗಳೆಲ್ಲ ಪಂಚಕರ್ಮದಿಂದ ಆರಂಭವಾಗಬೇಕು ಎಂದು ಆಯುರ್ವೇದ ಶಾಸ್ತ್ರ ಹೇಳುತ್ತದೆ.

ಪಂಚಕರ್ಮದಲ್ಲಿ ಸ್ನೇಹನ, ಸ್ವೇದನ, ವಮನ, ವಿರೇಚನ ಮತ್ತು ವಸ್ತಿ ಎಂಬ ಐದು ವಿಭಾಗಗಳಿವೆ.

ಸ್ನೇಹನದಲ್ಲಿ ಶುದ್ಧ ಆಕಳ ತುಪ್ಪ (ಕೆಲವು ಸಂದರ್ಭಗಳಲ್ಲಿ ಎಣ್ಣೆ ಕೂಡ) ಮತ್ತು ಕುದಿಯುವ ನೀರನ್ನು ಮಿಶ್ರಣ ಮಾಡಿ ಎರಡರಿಂದ ಐದು ದಿನಗಳ ವರೆಗೆ ದಿನಕ್ಕೆ ಕೆಲವು ಸಲ ಸೇವಿಸಬೇಕು.

ಸ್ವೇದನದಲ್ಲಿ ರೋಗಿ ಕೆಲವು ಲೋಟಗಳಷ್ಟು ಬಿಸಿ ನೀರು ಕುಡಿಯುತ್ತಾನೆ. ಆತನ ಮೈಗೆ ಎಣ್ಣೆಯನ್ನು ತಿಕ್ಕಲಾಗುತ್ತದೆ. ಇದರಿಂದ ಮೈತುಂಬ ಬೆವರುತ್ತದೆ. ಬಳಿಕ ಒಂದು ಲೋಟ ಬಿಸಿ ಬಿಸಿ ಆಕಳ ಹಾಲನ್ನು ಕುಡಿಯಬೇಕು. ವಿಶ್ರಾಂತಿ ಪಡೆಯಬೇಕು. ಅನಂತರ ಔಷಧಿ ದ್ರವ್ಯಗಳನ್ನು ಹಾಕಿರುವ ಬಿಸಿ ನೀರಿನ ಸ್ನಾನ ಮಾಡಬೇಕು.

ವಮನ ಎಂದರೆ ವಾಂತಿ ಮಾಡುವದು. ವೈದ್ಯರ ಸಮ್ಮುಖದಲ್ಲಿ ವಾಂತಿ ಮಾಡಿಸಲಾಗುವದು. ಪಂಚಕರ್ಮಗಳಲ್ಲಿ ಇದು ಅತ್ಯಂತ ಅಗತ್ಯವಾದದ್ದೂ ಕಠಿಣವಾದದ್ದೂ ಆಗಿದೆ.

ಇದರಿಂದ ವೃದ್ಧಾಪ್ಯದ ಮೂಲ ಕಾರಣಗಳಾದ ಪಿತ್ತ ಮತ್ತು ಕಫಗಳು ಹೇರಳವಾಗಿ ಹೊರಹಾಕಲ್ಪಟ್ಟು ಕಲ್ಪ ಔಷಧಿಗಳಿಗೆ ಪರಿಣಾಮಕಾರಕ ಕಾರ್ಯಮಾಡಲು ಅವಕಾಶ ದೊರೆಯುತ್ತದೆ.

ಬಳಿಕ ವಿರೇಚನ (ಭೇದಿ). ವಿರೇಚನದಿಂದ ಕರಳುಗಳಿಂದ ಲೋಳೆಯ ಪದಾರ್ಥ ಹೊರ ಬೀಳುವದು. ವೈದ್ಯನು ಯೋಗ್ಯ ವಿರೇಚಕ ಔಷಧಿಯನ್ನು ಯೋಜಿಸಬೇಕಾಗುವದು. ಕೊನೆಯ ಕರ್ಮವೇ ವಸ್ತಿ.

ವಸ್ತಿಯೆಂದರೆ ಗುದದ್ವಾರದಿಂದ ಔಷಧಿಯನ್ನು ಹೊಟ್ಟೆಯೊಳಗೆ ಹೀರಿಕೊಳ್ಳುವದು. ಆದರೆ ಇದನ್ನು ತೀರ ಕಡಿಮೆ ಜನರು ಮಾತ್ರ ಸಾಧಿಸಬಲ್ಲರು. ಇದರ ಬದಲು ಎನಿಮಾ ಸುಲಭವಾಗುವದು. ಕೆಳಹೊಟ್ಟೆಯ ಮಲ ಶುದ್ಧಿಗಾಗಿ ಕೆಲವೊಂದು ಬಗೆಯ ಎಣ್ಣೆ ಮತ್ತು ವನಸ್ಪತಿ ಕಷಾಯಗಳನ್ನು ಉಪಯೋಗಿಸುವರು.

ಪಂಚಕರ್ಮ ಚಿಕಿತ್ಸೆಯ ಕಾಲದಲ್ಲೆಲ್ಲ ರೋಗಿ ಸಾಧ್ಯವಾದಷ್ಟು ಹೆಚ್ಚು ವಿಶ್ರಾಂತಿ ಪಡೆಯಬೇಕು. ಎಲ್ಲ ಕಾರ್ಯಗಳಿಗೂ ಬೆಚ್ಚಗಿನ ನೀರನ್ನು ಉಪಯೋಗಿಸಬೇಕು. ಹಾಲನ್ನು ಕುಡಿಯಬೇಕು ಇಲ್ಲವೆ ಬಹಳಷ್ಟು ತುಪ್ಪದೊಡನೆ ಬೇಯಿಸಿದ ಅಕ್ಕಿ ಮತ್ತು ಬೇಳೆಯನ್ನು ಉಣ್ಣಬೇಕು.

ಪಂಚಕರ್ಮದ ನಂತರ ಒಂದು ದಿನ ವಿಶ್ರಾಂತಿ ಪಡೆದು ಕಲ್ಪಚಿಕಿತ್ಸೆಗೆ ಆರಂಭಿಸಬೇಕು. ಕಲ್ಪ ಔಷಧಿಯನ್ನು ಸಾಧಾರಣವಾಗಿ ರೋಗಿಯ ಸ್ಥಿತಿಗತಿಗಳ ಮೇಲಿಂದ ೪೦ರಿಂದ ೮೦ ದಿನಗಳ ವರೆಗೆ ತೆಗೆದುಕೊಳ್ಳಬೇಕಾಗುವದು.

ಕಲ್ಪಗಳಲ್ಲಿ ಅಜಕಲ್ಪವೇ ತೀರ ಸುಲಭವಾದದ್ದು. ದೇಹಕ್ಕೆ ತಾರುಣ್ಯವನ್ನು ಒದಗಿಸುವದರಲ್ಲಿ ಕುಟಿಕಲ್ಪದ ನಂತರದ ಸ್ಥಾನಅಜ

ಕಲ್ಪಿಸಿಕ್ಕಿದೆ. ಅಜಕಲ್ಪದಲ್ಲಿ ಮೊದಲಿಗೆ ರೋಗಿಯ ಸ್ಥಿತಿಗತಿಗನುಗುಣವಾಗಿ ವಿಶೇಷ ಬಗೆಯ ಔಷಧಿಗಳನ್ನು ಒಂದು ಆಡಿಗೆ ಕೊಡುತ್ತಾರೆ.

ಮೊದಲನೆಯ ದಿನದಿಂದಲೇ ಈ ಆಡಿನ ಹಾಲನ್ನು ರೋಗಿ ಕುಡಿಯತೊಡಗುತ್ತಾನೆ. ಹಗಲಿನಲ್ಲಿ ಆ ಆಡು ಕೊಡುವಷ್ಟು ಹಾಲನ್ನೂ ರೋಗಿ ಕುಡಿಯಬೇಕಾಗುವದು. ಸಂಧಿವಾತ, ಬಹುಮೂತ್ರ ಮತ್ತು ಅರ್ಧಾಂಗವಾಯು ರೋಗಗಳಿರದಿದ್ದರೆ ರೋಗಿ ಜೊತೆಗೆ ತನ್ನ ನಿತ್ಯದ ಆಹಾರವನ್ನು ಸೇವಿಸಬಹುದು. ಹಾಲು, ಹಣ್ಣು, ಅನ್ನ ಇವು ಪಥ್ಯವಾದವುಗಳು.

ಆಹಾರವು ಸತ್ವಯುತವಾಗಿರಬೇಕು. ರೋಗಿ ನಿತ್ಯದ ಕೆಲಸಗಳನ್ನುಮಾಡುತ್ತಿರಬೇಕು. ಆದರೆ ದಣಿಯುವಷ್ಟು ಕೆಲಸ ಮಾಡಬಾರದು. ಅಜಕಲ್ಪ ಚಿಕಿತ್ಸೆಯು ಅನೇಕ ಬಗೆಯ ವ್ಯಾಧಿಗಳಲ್ಲಿ ಯಶಸ್ವಿಯಾಗಿದೆ.

ಬೋಧಿ ಕಲ್ಪ (ಮಾನಸಿಕ ಶಕ್ತಿಯನ್ನು ಬೆಳೆಸುವದು), ಹರಿಕಲ್ಪ (ಕಿವುಡುತನವನ್ನು ಹೋಗಲಾಡಿಸುವುದು), ಆನಂದ ಕಲ್ಪ (ಅಕಾಲಿಕ ನರೆಗೂದಲನ್ನು ಸರಿಪಡಿಸುವದು), ವಿಷ್ಣುಕಲ್ಪ(ಸಕಲ ಬಗೆಯ ವಿಕಾರಗಳನ್ನು ಗುಣಪಡಿಸುವದು) ಮುಂತಾದ ಇನ್ನೂ ಅನೇಕ ಬಗೆಯ ಕಲ್ಪಗಳಿವೆ.



## ಮಾವಿನ ಹಣ್ಣಿಗೆ ಬಹಿಷ್ಕಾರ

"ಮಾವಿನ ಹಣ್ಣುಗಳಿಗೆ ಒಂದು ದೇಶ ಬಹಿಷ್ಕಾರ ಹಾಕಿದೆ ಎಂದರೆ ನೀವು "ಛಿ, ತೆಗೆಯಿರಿ'' ಎಂದೀರಿ. ಆದರೆ ಈ ಮಾತು ನೂರಕ್ಕೆ ನೂರು ನಯೇಪೈಸೆ ಸತ್ಯವಾದ ಮಾತು.

ಇಟಲಿಯಲ್ಲಿ ಭಾರತದ ಮಾವಿನ ಹಣ್ಣುಗಳಿಗೆ ಬಹಿಷ್ಕಾರವಿದೆ. ಇಟಲಿಯಲ್ಲಿ ಹಣ್ಣು ಹಂಪಲಗಳ ಬೆಳೆಯಿಂದ ಬರುವ ಉತ್ಪನ್ನ ಮುಖ್ಯವಾದದ್ದು. ಆ ಉತ್ಪನ್ನಕ್ಕೇನಾದರೂ ಧಕ್ಕೆ ತಟ್ಟೀತು ಎಂದೋ ಅಥವಾ ಇನ್ನಾವ ಕಾರಣಕ್ಕಾಗಿ ಎಂದೋ ಇಟಲಿಯಲ್ಲಿ ಭಾರತದ ಮಾವಿನ ಹಣ್ಣುಗಳಿಗೆ ಪ್ರವೇಶವಿಲ್ಲ ಎನ್ನುವದು ನಿಜ. ಸಾಂಸರ್ಗಿಕ ರೋಗಗಳ ಜಂತುಗಳು ಹಬ್ಬಬಾರದೆಂದು ಎಷ್ಟು ಎಚ್ಚರ ವಹಿಸುವರೋ ಅಷ್ಟೇ ಜಾಗರೂಕತೆಯಿಂದ ಭಾರತದ ಮಾವಿನ ಹಣ್ಣುಗಳ ಆಗಮನದ ಮೇಲೆ ಇಲ್ಲಿ ಕಣ್ಣಿಡುತ್ತಾರೆ. ಯಾರಾದರೂ ಭಾರತದಿಂದ ಇಟಲಿಯಲ್ಲಿರುವವರಿಗೆ ಅಪ್ಪಿತಪ್ಪಿ ಮಾವಿನ ಹಣ್ಣು ಕಳಿಸಿದರೂ ಬಂದ ಹಣ್ಣುಗಳನ್ನೆಲ್ಲ ನಾಶಮಾಡಿ ಬಿಡುತ್ತಾರೆ. ಇದರಂತೆ ಗೇರು ಬೀಜಗಳ ಮೇಲೂ ಪ್ರತಿಬಂಧವಿದೆ.

ಇವೆರಡರ ಆಗಮನದಿಂದ ಇಟಲಿಯಲ್ಲಿಯ ಹಣ್ಣಿನ ತೋಟಗಳಲ್ಲಿ ಸಾಂಸರ್ಗಿಕ ರೋಗ ಬಂದೀತು ಎಂದು ಈ ಪ್ರತಿಬಂಧಕ್ಕೆ ಸರಕಾರ ಕಾರಣ ಹೇಳುತ್ತದೆ.

—ದತ್ತೋ ವಾಮನ ಪೋತದಾರ,

'ಕೇಸರಿ'ಯಲ್ಲಿ

**ಕಥೆಯಿಂದ ಮೊದಲಾದ ಪ್ರೇಮ**
**ಕಥೆಯಲ್ಲೇ ಪರ್ಯವಸಾನವಾಯಿತು.**

# ಕಲ್ಪನಾ—ವಿಲಾಸ

**ಬಾಳ ಸಾವಂತ**

**೧೧ ಅ, ಹಿಂದು ಕಾಲನಿ, ದಾದರ**
**೩ ನೇ ೧೯೫೬**

ಪ್ರಾಧ್ಯಾಪಕ ವಿಲಾಸ ಖರೆ, ಮಹಾರಾಷ್ಟ್ರ ಕಾಲೇಜ, ಪುಣೆ, ಇವರಿಗೆ ಸಾದರ ಸಮಸ್ಕಾರಗಳು.

ನಿಮ್ಮ ಪರಿಚಯವಿರದಿದ್ದರೂ ಈ ಪತ್ರವನ್ನು ಬರೆಯುವ ಧಾಷ್ಟ್ರ್ಯವನ್ನು ತೋರಿಸುತ್ತಿರುವದಕ್ಕಾಗಿ ಮೊದಲಿಗೇ ಕ್ಷಮೆಯನ್ನು ಕೇಳಿಕೊಳ್ಳುತ್ತೇನೆ. ನವನೀತ ಪ್ರಕಾಶನ ಸಂಸ್ಥೆಯವರು ಇತ್ತೀಚೆಗೆ ಪ್ರಕಟಿಸಿರುವ "ಕನಸಿನ ರಾಜ್ಯ" ಎಂಬ ಹೊಸ ಕಾದಂಬರಿಯನ್ನು ಮೊನ್ನೆ ಮೊನ್ನೆ ಓದಿದೆ. ಅದು ನನಗೆ ತುಂಬ ಮೆಚ್ಚಿಗೆಯಾಯಿತು. ಅದರ ಪ್ರಭಾವವೇ ನಿಮಗೆ ಪತ್ರ ಬರೆಯುವ ಸಾಹಸ ಕೃತ್ಯವನ್ನು ನನ್ನಿಂದ ಮಾಡಿಸುತ್ತಿದೆ. ಮರಾಠಿ ಕಾದಂಬರಿ ಕ್ಷೇತ್ರದಲ್ಲಿ ನೀವಿಟ್ಟ ಈ ಹೆಜ್ಜೆ ಅತ್ಯಂತ ಯಶಸ್ವಿಯಾಗಿದ್ದು ಮಹಾರಾಷ್ಟ್ರದ ವಾಚಕವರ್ಗವೆಲ್ಲ ನಿಮ್ಮ ಕಥೆ-ಕಾದಂಬರಿಗಳನ್ನು ಅತ್ಯಾತುರದಿಂದ ಎದುರುನೋಡುತ್ತಿದೆ. ನಿಮ್ಮ ಭಾಷಾಶೈಲಿ, ಪಾತ್ರಗಳ ಸಹಜ ಸ್ವಭಾವ ಚಿತ್ರಣದ ಗತ್ತು ಸದ್ಯಕ್ಕಂತೂ ಮರಾಠಿ ಸಾಹಿತ್ಯದಲ್ಲಿ ಕಾಣಬರುವದಿಲ್ಲ ಎಂದು ನನ್ನ ಪ್ರಾಮಾಣಿಕ ಅಭಿಪ್ರಾಯವಾಗಿದೆ. ಈ ಕಾದಂಬರಿಯ ನೆಪದಲ್ಲಿ ನಿಮಗೆ ವಾಚಕರಿಂದ ಸಹಸ್ರಾರು ಪತ್ರಗಳು ಬಂದಿರಬಹುದು. ಆ ಸಹಸ್ರಾರು ವಾಚಕರ ಧನ್ಯವಾದಗಳು ಮತ್ತು ಶುಭೇಚ್ಛೆಗಳೊಡನೆ ನನ್ನವನ್ನೂ ಸೇರಿಸಬಯಸುತ್ತಿದ್ದೇನೆ.

ಮತ್ತೊಮ್ಮೆ ನಿಮ್ಮನ್ನು ಮನಃಪೂರ್ವಕವಾಗಿ ಅಭಿನಂದಿಸಿ ಬೆಳೆಯುತ್ತಿರುವ ಈ ಪತ್ರವನ್ನು ಮುಗಿಸುತ್ತೇನೆ.

ಪ್ರೀತಿಯಿರಲಿ.

ನಿಮ್ಮ ನಮ್ರ **ಕಲ್ಪನಾ ದೇಸಾಯಿ**

೨

**೭ ನೇ ೧೯೫೬**

ಕು. ಕಲ್ಪನಾ ದೇಸಾಯಿ ಇವರಿಗೆ ಸಾ. ನ.

ನಿಮ್ಮ ಮೇ ೩ನೇ ತಾರೀಖಿನ ಪತ್ರ ಮುಟ್ಟಿತು. ಅದನ್ನೋದಿ ತುಂಬ ಆನಂದವಾಯಿತು. ತನ್ನ ಕಾದಂಬರಿ ಜನರಿಗೆ ಮೆಚ್ಚಿಗೆಯಾಗಿದೆ ಎಂದು ಕೇಳಿ ಯಾವ ಲೇಖಕನಿಗೆ ಆನಂದವಾಗದು? ನನ್ನ ಬಗ್ಗೆ ಪ್ರಕಟಿಸಿದ ಸದಿಚ್ಛೆಗಳಿಗಾಗಿ ನಾನು ನಿಮಗೆ ಚಿರಋಣಿಯಾಗಿದ್ದೇನೆ.

ಲೋಭವಿರಲಿ. ನಿಮ್ಮ ನಮ್ರ

**ವಿಲಾಸ ಖರೆ**

೩

( ವಿಲಾಸ ಖರೆ ತನ್ನ ಮಿತ್ರ ಶ್ರೀ ವೆಂಕಟೇಶ

"ಮನೋಹರ" ದಿಂದ

ಖಾರಕರರಿಗೆ ಬರೆದ ಪತ್ರ).

೭ ಮೇ ೧೯೫೬

.. ವೆಂಕ್ಯಾ, ಮಗನೇ, ನೀನು ಸುಮ್ಮಸುಮ್ಮನೆ ಪಂಟು ಕೊಚ್ಚಬೇಡ. ನಿನಗೆ ಈ ಪತ್ರ ಗೀಚುವ ಮೊದಲು ನಾನು ಒಬ್ಬ ರಸಿಕ ವಾಚಕರಿಗೆ ಉತ್ತರ ಬರೆದಿದ್ದೇನೆ. ಈ ರಸಿಕ ವಾಚಕ ಯಾರು ಗೊತ್ತೇ? ಕೇಳು, ಸುರಸುಂದರಿಯಾದ ಓರ್ವ ತರುಣಿ! ನಿನ್ನ ದಾದರದ ಹಿಂದು ಕಾಲನಿಯಲ್ಲಿಯೇ ವಾಸಿಸುವ ಅಪ್ಸರೆ. ಕಾದಂಬರಿಕಾರನ ಮೇಲೆ ಹುಡುಗಿಯರು ಮೋಹಗೊಳ್ಳುತ್ತಾರೆಂಬ ಕಲ್ಪನೆ ನನಗಿರಲಿಲ್ಲ. ಅವಳಿಗೆ ಇದೇ ಈಗ ಉತ್ತರ ಬರೆದು ಹಾಕಿದ್ದೇನೆ. ಹೆಚ್ಚಿನ ವಿಷಯ ಸಮಕ್ಷಮದಲ್ಲಿ.

ವಿಲಾಸ

೪

೧೧ ಅ, ಹಿಂದು ಕಾಲನಿ, ದಾದರ
೧೦ ಮೇ ೧೯೫೬

ಪ್ರಾ. ವಿಲಾಸ ಖರೆಯವರಿಗೆ ಸಪ್ರೇಮ ನಮಸ್ಕಾರಗಳು.

ನನ್ನ ಪತ್ರಕ್ಕೆ ನಿಮ್ಮಿಂದ ಇಷ್ಟೊಂದು ಬೇಗನೆ ಉತ್ತರ ಬಂದೀತೆಂದು ಸರ್ವಥಾ ನಿರೀಕ್ಷಿಸಿರಲಿಲ್ಲ. ಖ್ಯಾತಿವಂತರಾದ ಸಾಹಿತಿಗಳು ಪತ್ರಗಳಿಗೆ ಉತ್ತರ ಕಳಿಸುವ ವಿಚಾರದಲ್ಲಿ ತೀರ ಅಸಡ್ಡೆ ಮಾಡುತ್ತಾರೆಂದು ನನಗನಿಸಿತ್ತು. ಆದರೆ ನೀವು ಈ ನಿಯಮಕ್ಕೆ ಅಪವಾದವಾಗಿರುವದನ್ನು ಕಂಡು ನಿಮ್ಮಲ್ಲಿರುವ ನನ್ನ ಗೌರವಾದರಗಳು ದ್ವಿಗುಣಿತವಾಗಿವೆ. ನಿಜವಾಗಿ ಹೇಳುವದಾದಲ್ಲಿ ನಿಮಗೆ ಪತ್ರ ಬರೆದು ಹಾಕಿದ ಬಳಿಕ ನಾನಿದೇನನ್ನು ಮಾಡಿಬಿಟ್ಟೆ ಎಂದು ನನಗೆ ನಾಚಿಕೆಯೆನಿಸಿತು. ನಿಮ್ಮಂಥ ಹೆಸರಾಂತ ಸಾಹಿತಿಗಳ ಅಮೌಲ್ಯ ವೇಳೆಯನ್ನು ವ್ಯರ್ಥ ಹಾಳು ಮಾಡುವಂಥ ಅಪರಾಧ ನನ್ನಿಂದ ಘಟಿಸಿತ್ತು. ಆದರೆ ನಿಮ್ಮ ಸೌಜನ್ಯಪೂರ್ಣ ಉತ್ತರದಿಂದ ನಾನು ಮೂಢಳಾಗಿ ಹೋಗಿದ್ದೇನೆ. ನಿಮ್ಮ ಸ್ವಂತ ಸುಂದರವಾದ ಅಕ್ಷರಗಳಲ್ಲಿ ಇಷ್ಟು ಸುಂದರವಾದ ಪತ್ರ ಇಷ್ಟು ಬೇಗನೆ ಬಂದೀತೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ. ನಿಮ್ಮ ಸ್ಥಾನದಲ್ಲಿ ನಾನಿದ್ದಿದ್ದರೆ ಇಂಥ ಪತ್ರದ ಆಗಮನದಿಂದ ನಾನೆಷ್ಟು ಉಬ್ಬಿ ಹೋಗುತ್ತಿದ್ದೆನೆಂದು ಅಂದಾಜನ್ನು ಕೂಡ ಮಾಡಲಾರದವಳಾಗಿದ್ದೇನೆ.

ನಿಮ್ಮ "ಕನಸಿನ ರಾಜ್ಯ" ಕಾದಂಬರಿಯನ್ನು ಪುನಃ ಪುನಃ ಓದುತ್ತಿದ್ದೇನೆ. ಆದರೂ ಅದರ ರುಚಿ ಹಳಸುತ್ತಿಲ್ಲ. ಉತ್ತರ ಬರೆದದ್ದಕ್ಕಾಗಿ ಪುನಃ ನಿಮಗೆ ಕೃತಜ್ಞತೆಗಳನ್ನರ್ಪಿಸಿ ನನ್ನ ಈ ಉದ್ದನ್ನ, ಬೇಸರ ತರುವ ಪತ್ರವನ್ನು ಮುಗಿಸುತ್ತೇನೆ.

ಪ್ರೀತಿ ಇಟ್ಟಿದ್ದೀರಿ. ಅದು ಬೆಳೆಯಲಿ.

ನಿಮ್ಮ ನಮ್ರ
ಕಲ್ಪನಾ ದೇಸಾಯಿ

೫

೧೨ ಮೇ, ೧೯೫೬

ಕು. ಕಲ್ಪನಾ ದೇಸಾಯಿ ಇವರಿಗೆ ಸಪ್ರೇಮ ನಮಸ್ಕಾರ.

ನಿಮ್ಮ ಪತ್ರ ಸಿಕ್ಕಿತು. ನಿಜವಾಗಿಯೂ ನಿಮ್ಮ ಪತ್ರ ನನಗೆ ತುಂಬ ಮೆಚ್ಚಿಗೆಯಾಯಿತು. ನನ್ನಂಥ ಕಾದಂಬರಿಕಾರನಿಗೆ ಅಸಂಖ್ಯ ವಾಚಕರ ಅಸಂಖ್ಯ ಪತ್ರಗಳು ಬರುತ್ತವೆ ಎಂಬ ಮಾತು ನಿಜ. ಆದರೆ ಈ ಪತ್ರಗಳ ರಾಶಿಯಲ್ಲಿ ನಿಮ್ಮ ಪತ್ರದಂಥ ಮಾರ್ಮಿಕ ಮತ್ತು ಸೂತ್ರಬದ್ಧ ಪತ್ರಗಳು ಬರುವದು ತೀರ ಕಡಿಮೆ. ನಿಜವಾಗಿ ಹೇಳುವದಾದರೆ ನಾನು ವಾಚಕರ ಪತ್ರಗಳಿಗೆ ಸಹಸಾ ಉತ್ತರ ಬರೆಯುವದಿಲ್ಲ ಆದರೆ ಕೇವಲ ನಿಮ್ಮ ಪತ್ರದ ವಿಚಾರದಲ್ಲಿ ನಾನು ನನ್ನ ನಿಯಮವನ್ನು ಉಲ್ಲಂಘಿಸಬೇಕಾಯಿತು.

ನನ್ನ ಕಾದಂಬರಿಯನ್ನು ನೀವು ಪುನಃ ಪುನಃ ಓದುತ್ತಿರುವಿರೆಂದು ತಿಳಿಯಿತು. ಸಾಹಿತ್ಯ ಕ್ಷೇತ್ರದಲ್ಲಿ ಪುನಃ ಪುನಃ ಓದುವಂಥ ಉತ್ತಮ ಪುಸ್ತಕಗಳಿರುವದು ತೀರ ಕಡಿಮೆ. ಅಂಥ ಉತ್ತಮ ಪುಸ್ತಕಗಳಲ್ಲಿ ನನ್ನ ಕಾದಂಬರಿಯೂ ಒಂದು ಎಂದು ನನಗನಿಸುವದಿಲ್ಲ. ನಿಮ್ಮ ಈ

ಪತ್ರದ ಮೇಲಿಂದ ನೀವು ಲೇಖನಗಳನ್ನು ಬರೆಯುತ್ತಿರಬೇಕು ಎಂದು ನನ್ನ ತರ್ಕವಿದೆ. ಈ ತರ್ಕ ನಿಜವಾಗಿದ್ದರೆ ನೀವು ಸದಾ ಬರೆಯುತ್ತಿರಬೇಕು ಎಂದು ನನ್ನ ಅಪೇಕ್ಷೆಯಿದೆ. ನಿಮ್ಮ ಭವಿಷ್ಯವೂ ಉಜ್ವಲವಿದೆ. ಸಂದೇಹವಿಲ್ಲ.

ನಿಮ್ಮ ನಮ್ರ
**ವಿಲಾಸ ಖರೆ**

೬

**ದಾದರ, ೧೫ ಮೇ ೧೯೫೬**

ಪ್ರಾ. ವಿಲಾಸ ಖರೆ ಇವರಿಗೆ ಸಪ್ರೇಮ ನಮಸ್ಕಾರ.

ನಿಮ್ಮ ಪತ್ರವನ್ನೋದಿ ಬಹಳ ಸಂತೋಷವಾಯಿತು. ನನ್ನ ಲೇಖನಗಳ ವಿಚಾರದಲ್ಲಿ ನಿಮ್ಮ ಮನಸ್ಸಿನಲ್ಲಿ ವಿಪರೀತ ಅಪೇಕ್ಷೆ ಉಂಟಾಗಿರುವಂತೆ ಕಾಣಿಸುತ್ತದೆ. ಆದರೆ ಆ ಅಪೇಕ್ಷೆಗಳಿಗೆ ನಾನು ಅರ್ಹಳಲ್ಲ ಎಂದು ಮೊದಲೇ ತಿಳಿಸಬಯಸುತ್ತೇನೆ. ವಿಶೇಷತಃ, ನಿಮ್ಮ " ಕನಸಿನ ರಾಜ್ಯ " ಕಾದಂಬರಿಯನ್ನು ಓದಿದ ಬಳಿಕ ಇಂಥ ಅಭಿಜಾತ ಲೇಖನಕಾರ್ಯ ನನ್ನಿಂದ ಈ ಜನ್ಮದಲ್ಲಿ ಸಾಧ್ಯವೇ ಇಲ್ಲ ಎಂದು ನನಗನಿಸತೊಡಗಿದೆ. ಎಂದಾದರೊಮ್ಮೆ ಸುಂದರ ಕಥಾನಕಗಳು ನನಗೆ ಸೂಚಿಸುವದುಂಟು. ಆದರೆ ಲೆಕ್ಕಣಿಕೆಯೇ ಓಡುವದಿಲ್ಲ. ನಿಮ್ಮ ಮೋಹಕ ಲೇಖನಶೈಲಿಯ ಬಗ್ಗೆ ನನಗೆ ಮನಃಪೂರ್ವಕವಾಗಿ ಅಸೂಯೆಯೆನಿಸುತ್ತಿದೆ. ನನ್ನ ಕೆಲ ಕಥೆಗಳ ವಿಚಾರದಲ್ಲಿ ಕೆಲವು ಜನರು ಹೊಗಳಿಕೆಯ ಮಾತುಗಳನ್ನಾಡಿದ್ದರೂ ನನ್ನ ಮಟ್ಟಿಗೆ ಅವುಗಳ ವಿಚಾರದಲ್ಲಿ ನಾನು ಅತೃಪ್ತಳಾಗಿಯೇ ಇದ್ದೇನೆ.

ಛಿ! ಬರೆಯುವ ಭರದಲ್ಲಿ ಎಲ್ಲಿಂದೆಲ್ಲಿಗೆ ಹೋಗಿಬಿಟ್ಟೆ! ಒಂದೇ ಸವನೆ ನನ್ನ ವಿಚಾರವನ್ನೇ ಬರೆಯತೊಡಗಿದ್ದೇನೆ. ನಿಮ್ಮಂಥ ಪ್ರತಿಭಾವಂತ ಸಾಹಿತಿಯು ನನ್ನಂಥ ಹೊಸ ಲೇಖಿಕೆಯ ಲೇಖನಗಳನ್ನು ಕಂಡರೆ ನಿಜವಾಗಿಯೂ ನಕ್ಕೀರಿ. ನನ್ನ ಕಥೆಗಳೆಂದರೆ ಇಸೋಪನ ನೀತಿ ಕಥೆಗಳಲ್ಲಿಯ "ಸಿಂಹ ಮತ್ತು ಇಲಿ" ಕಥೆಯಂಥ ಕಥೆಗಳು.

ನಿಜ ಹೇಳಲೇ? ನಿಮ್ಮ ಎರಡನೆಯ ಪತ್ರವೂ ನನಗೆ ತುಂಬ ಮೆಚ್ಚಿಗೆಯಾಯಿತು. ನಿಮ್ಮ 'ಕನಸಿನ ರಾಜ' ಕಾದಂಬರಿಯನ್ನು ನಾನು ಪುನಃ ಪುನಃ ಓದುವದರಿಂದ ಅದರ ಸ್ವಾರಸ್ಯ ಕಡಿಮೆಯಾದೀತೆಂಬ ಭೀತಿಯನ್ನು ನೀವು ಹಚ್ಚಿಕೊಳ್ಳಬಾರದು. ನಿಮ್ಮ 'ಕನಸಿನ ರಾಜ್ಯ'ದ ನಾಯಕಿ 'ಇಂದ್ರಾಯಣಿ'ಯ ಸ್ವಭಾವಚಿತ್ರವು ಮರಾಠಿ ಸಾಹಿತ್ಯದಲ್ಲಿಯಾದರೂ ಸರಿಸಾಟಿಯಿಲ್ಲದ್ದು ಎಂದು ನನಗನಿಸುವದು. ಕಾದಂಬರಿಯ ಕೊನೆಯಲ್ಲಿ ಅವಳ ಅಂತ್ಯವನ್ನು ಕಂಡು ನಾನೆಷ್ಟು ಅತ್ತೆ! ಕಾದಂಬರಿಯ ನಾಯಕ ತುಕಾ ಮತ್ತು ಇಂದ್ರಾಯಣಿಯ ಪ್ರಣಯಪ್ರಸಂಗವನ್ನು ನೀವೆಷ್ಟು ರಸವತ್ತಾಗಿ ಚಿತ್ರಿಸಿದ್ದೀರಿ! ಸನಾತನಿ ಟೀಕಾಕಾರರು ಕೋಲಾಹಲವನ್ನೆಬ್ಬಿಸಬಹುದು. ಆದರೆ ಈ ಚಿತ್ರವು ವಾಸ್ತವವೂ ಹೃದಯಸ್ಪರ್ಶಿಯೂ ಆಗಿದೆಯೆನ್ನುವದರಲ್ಲಿ ಸಂಶಯವೇ ಇಲ್ಲ. ನನ್ನ ಪುರಾಣ ಬೆಳೆಯಿತು, ಅಲ್ಲವೇ? ನಿಮ್ಮ ಸಮಯವನ್ನು ಹಾಳು ಮಾಡುವದಾದರೂ ಎಷ್ಟೆಂದು? ಅಂತೇ ಬೆಳೆಯುತ್ತಿರುವ ಈ ಪತ್ರವನ್ನು ಮುಗಿಸುತ್ತೇನೆ.

ನಿಮ್ಮ ನಮ್ರ
**ಕಲ್ಪನಾ ದೇಸಾಯಿ**

೭

**೨೦ ಮೇ ೧೯೫೬**

ಕು. ಕಲ್ಪನಾ ದೇಸಾಯಿ ಇವರಿಗೆ ಸಪ್ರೇಮ ನಮಸ್ಕಾರ.

ನಿಮ್ಮ ಪತ್ರ ಮುಟ್ಟಿತು. ನಿಮ್ಮ ಪತ್ರಗಳು ನಿಜವಾಗಿಯೂ ಓದತಕ್ಕಂಥವಿರುತ್ತವೆ. ನಿಮ್ಮ ಪತ್ರಗಳ ಮೇಲಿಂದ ನೀವು ಒಳ್ಳೆಯ ಲೇಖನಗಳನ್ನು ಬರೆಯಬಹುದು ಎಂದು ನನಗೆ ನಂಬಿಗೆಯಾಗಿದೆ. " ಕನಸಿನ ರಾಜ್ಯ " ಕಾದಂಬರಿಯ ಬರವಣಿಗೆಯಲ್ಲಿ ಒಂದಿಡೀ ವರ್ಷ ನಾನು ಮಗ್ನನಾಗಿದ್ದುದರಿಂದ ಮರಾಠಿ ಸಾಹಿತ್ಯದಲ್ಲಿ ಇತ್ತೀಚೆಗೆ ಪ್ರತಿಭಾವಂತ ಲೇಖಕರಾರು ಕಾಣಿಸಿ

ಕೊಂಡಿದ್ದಾರೆಂದು ನನಗೆ ಗೊತ್ತೇ ಇಲ್ಲ. ನೀವು ಯಾವ ಯಾವ ಮಾಸಿಕದಲ್ಲಿ ಬರೆದಿದ್ದೀರಿ ಎನ್ನುವದನ್ನು ಮರುಟಪಾಲಿನಿಂದ ತಿಳಿಸಬೇಕು. ನಿಮ್ಮಲ್ಲಿ ಇದ್ದರೆ ಪ್ರಕಟವಾದ ನಿಮ್ಮ ಕೆಲವು ಕಥೆಗಳನ್ನು ಅವಶ್ಯವಾಗಿ ಕಳಿಸಿಕೊಡಬೇಕು.

ಇಂದ್ರಾಯಣಿಯ ವ್ಯಕ್ತಿಚಿತ್ರದ ಬಗ್ಗೆ ನಿಮ್ಮ ಅಭಿಪ್ರಾಯವು ನನಗೆ ಮಾನ್ಯವಿದೆ. ಕಾದಂಬರಿ ಬರೆದಾದ ನಂತರ ನನಗೆ ಕ್ಷಣಕಾಲ ಕಾದಂಬರಿಯ ಹೆಸರನ್ನು "ಇಂದ್ರಾಯಣಿ" ಎಂದೇ ಇಡಬೇಕೆಂಬ ಮೋಹವುಂಟಾಯಿತು. ಕಾದಂಬರಿಯ ಕೊನೆಯಲ್ಲಿ ನಾಯಕಿಯ ಅಂತ್ಯವನ್ನು ರೂಪಿಸುವಾಗ ಕನಿಷ್ಠ ಒಂದು ತಿಂಗಳ ಕಾಲವಾದರೂ ನಾನು ವಿಚಾರ ಮಾಡಿರಬೇಕು. ಕೊನೆಗೊಂದು ದಿನ ನನ್ನಲ್ಲಿ ಸ್ಫೂರ್ತಿ ಉದಯಿಸಿ ಒಂದೇ ದಿನದಲ್ಲಿ ಆ ಪ್ರಕರಣವನ್ನು ಬರೆದು ಮುಗಿಸಿದೆ.

ನಿಮ್ಮ ಅಭಿಪ್ರಾಯದಿಂದ ನನಗೆ ಧನ್ಯನಾದಂತನಿಸಿತು. ಆದ್ದರಿಂದಲೇ ನಿಮ್ಮ ಕೃತಿಗಳನ್ನು ಓದಲು ನಾನು ಅತಿ ಉತ್ಸುಕನಾಗಿದ್ದೇನೆ.

ನಿಮ್ಮ ನಮ್ರ
**ವಿಲಾಸ ಖರೆ**

೮

**೧೧ ಅ, ಹಿಂದು ಕಾಲನಿ**
**೨೧ ಮೇ ೧೯೫೬**

ಪ್ರಾ. ವಿಲಾಸ ಖರೆ ಇವರಿಗೆ ಸಪ್ರೇಮ ನಮಸ್ಕಾರ.

ನಿಮ್ಮ ಪತ್ರ ಓದಿ ಬಹಳ ಆನಂದವಾಯಿತು. ಅಂತೂ ನನ್ನ ಬರಹಗಳ ಬಗ್ಗೆ ನಿಮ್ಮಲ್ಲಿ ಅವಾಸ್ತವ ಕುತೂಹಲ-ಗೌರವಗಳು ಮೂಡಿರುವವೆಂಬುದು ನಿಜವೆನ್ನಬೇಕಾಯಿತು. ನನ್ನಂಥ ನವಲೇಖಿಕೆ ಗೀಚಿದ್ದನ್ನು ಓದುವಾಗ ನಿಮ್ಮಂಥ ಪ್ರತಿಭಾಶಾಲಿ ಸಾಹಿತಿಗಳಿಗೆ ನಿಜವಾಗಿಯೂ ಬೇಸರ ಬಂದೀತು. ಆದರೂ ನೀವು ಬಯಸಿರುವದರಿಂದ ಇಂದು ನಿಮ್ಮ ಕಾಲೇಜ ವಿಳಾಸಕ್ಕೆ ನನ್ನ ಕೆಲವು ಕಥೆಗಳ ಪ್ರತಿಗಳನ್ನು ಕಳಿಸುತ್ತಿದ್ದೇನೆ. ಅವುಗಳನ್ನೋದಿ ನಿಮ್ಮ ಅಭಿಪ್ರಾಯ ಏನಾಗುವದೆಂದು ಗೊತ್ತಿದ್ದರೂ ಈ ಸಾಹಸ ಮಾಡುತ್ತಿದ್ದೇನೆ. ನಿಮ್ಮ ಸ್ಪಷ್ಟ ಅಭಿಪ್ರಾಯ ತಿಳಿದುಬರುವ ವರೆಗೆ ನಿಮಗೆ ಬರೆಯಬಾರದು ಎಂದು ನಿರ್ಧರಿಸಿದ್ದೇನೆ.

ನಿಮ್ಮ ನಮ್ರ
**ಕಲ್ಪನಾ ದೇಸಾಯಿ**

೯

**೩೦ ಮೇ, ೧೯೫೬**

ಕು. ಕಲ್ಪನಾ ದೇಸಾಯಿ ಇವರಿಗೆ ಸಪ್ರೇಮ ನಮಸ್ಕಾರ.

ನಿಮ್ಮ ಕಥೆಗಳು ತಲುಪಿ ಒಂದು ವಾರವಾಯಿತು. ಇಂದು ಬರೆಯಲು ಸಮಯ ಸಿಕ್ಕಿದೆ. ನಿಮ್ಮ ಎಲ್ಲ ಕಥೆಗಳನ್ನು ಲಕ್ಷ್ಯ ಕೊಟ್ಟು ಓದಿದೆ. ಅವು ನನಗೆ ತುಂಬ ಸೇರಿದವು. "ನವಕಥಾ" ಮಾಸಿಕದಲ್ಲಿ ಪ್ರಕಟವಾದ ನಿಮ್ಮ "ಚಂದ್ರನ ಚೌರ್ಯ" ಕಥೆಯು ಇಂದಿನ ಮರಾಠಿ ಸಾಹಿತ್ಯದಲ್ಲಿ ಒಂದು ಉತ್ತಮ ಕಥೆಯೆಂದು ಪರಿಗಣಿಸಲ್ಪಡಬೇಕು ಎಂದು ನನಗನಿಸುತ್ತದೆ. "ರಾಜಹಂಸ" ಮಾಸಿಕದಲ್ಲಿಯ "ಪ್ರೀತಿಯ ನ್ಯಾಯ" ಎಂಬ ಕಥೆಯೂ ನನಗೆ ಆಕರ್ಷಕವಾಗಿ ಕಂಡಿತು. ಈ ಕಥೆಯಲ್ಲಿ ಲೇಖಕನ ನಿರ್ಲಿಪ್ತ ಭಾವಕ್ಕೆ ತುಸು ವ್ಯತ್ಯಯ ಬಂದಿದ್ದರೂ ನಾಯಕಿ ಗೋದಾವರಿಯ ಸ್ವಭಾವಚಿತ್ರಣ ಚೆನ್ನಾಗಿದೆ. ಗೋದಾವರಿ ಮತ್ತು ನನ್ನ ಇಂದ್ರಾಯಣಿಯ ಸ್ವಭಾವಚಿತ್ರಗಳಲ್ಲಿ ತುಂಬ ಸಾಮ್ಯ ಕಾಣಿಸಿತು. ಇಂದಿನ ನವಕಥಾಕಾರರು ನಿಮ್ಮ "ಪ್ರೀತಿಯ ನ್ಯಾಯ" ವನ್ನು ಅವಶ್ಯ ಅಭ್ಯಾಸ ಮಾಡಬೇಕು. ನವಕಥೆಗಳಲ್ಲಿರುವ ಬೀಭತ್ಸತನ ಮತ್ತು ಜಟಿಲತೆಗಳ ಗಂಧವೂ ಈ ಕಥೆಯಲ್ಲಿಲ್ಲ. ಮನಸ್ಸಿನ ವಿಶಾಲ ಮತ್ತು ನಿರ್ಮಲ ಚಿತ್ರವು ನಿಮ್ಮ ಕಥೆಯಲ್ಲಿದೆ ಎಂದು ನನ್ನ ಪ್ರಾಮಾಣಿಕ ಅಭಿಪ್ರಾಯ.

ಇಂದು ನಿಮ್ಮ ಕಥೆಗಳನ್ನು ಅಂಚೆಯ ಮೂಲಕ ತಿರುಗಿ ಕಳಿಸುತ್ತಿದ್ದೇನೆ. ಅವುಗಳನ್ನು ಓದುವ ಭಾಗ್ಯವನ್ನು ನನಗೆ ಒದಗಿಸಿಕೊಟ್ಟ

ವ್ವಕ್ಕಾಗಿ ಮನಃಪೂರ್ವಕವಾಗಿ ನಿಮಗೆ ಆಭಾರಿಯಾಗಿದ್ದೇನೆ.

ನಿಮ್ಮ ನಮ್ರ
ವಿಲಾಸ ಖರೆ

೧೦

೧೧ ಅ, ಹಿಂದು ಕಾಲನಿ
೨ ಜೂನ ೧೯೫೭

ಪ್ರಾ. ವಿಲಾಸ ಖರೆಯವರಿಗೆ ಸಪ್ರೇಮ ಸಮಸ್ಕಾರ.

ಇದೀಗ ಪೋಸ್ಟಮನ್ ನಿಮ್ಮ ಪತ್ರವನ್ನು ತಂದು ಕೊಟ್ಟ. ಅದನ್ನು ಒಡೆಯುವಾಗ ನನ್ನ ಎದೆ ಭಯದಿಂದ ಹಾರುತ್ತಿತ್ತು. ಓದುವ ಇಚ್ಛೆ ಅನಿವಾರ್ಯವಾಗಿದ್ದರೂ ಸಂಗಡವೇ ಭಯವೂ ಅನಿಸುತ್ತಿತ್ತು. ನಿಮ್ಮ ಸ್ತುತಿ ನುಡಿಗಳಿಂದ ನಾನು ನಾಚಿ ಕೆಂಪಾಗಿ ಹೋಗಿದ್ದೇನೆ. ನಾನು ಆ ಸ್ತುತಿಗೆ ಸರ್ವಥಾ ಪಾತ್ರಳಲ್ಲ. ಹಾಗಿದ್ದರೂ ನಿಮ್ಮಂಥ ನಾಮಾಂಕಿತ ಲೇಖಕರಿಗೆ ನನ್ನ ಕಥೆ ಮೆಚ್ಚಿಗೆಯಾಯಿತೆಂದು ತಿಳಿದು ನನ್ನ ಬಾಳು ಧನ್ಯವಾದಂತೆ ಅನಿಸುತ್ತಿದೆ. ನಾವಿಬ್ಬರೂ ಈಗ ಪತ್ರ ರೂಪದಲ್ಲಿ ಅನೇಕ ಸಲ ಭೆಟ್ಟಿಯಾಗಿದ್ದೇವೆ. ಈ ಯೋಗ ಪ್ರತ್ಯಕ್ಷದಲ್ಲಿ ಒದಗಿ ಬಂದರೆ. . . ? ನಾನು ತುಂಬ ಧಿಟ್ಟೆಯೆಂದೇನೂ ನಿಮಗೆ ಅನಿಸುವದಿಲ್ಲವಷ್ಟೇ ? ಏಕೆಂದರೆ ಈಗ ಸ್ತ್ರೀಪುರುಷರು ಒತ್ತಟ್ಟಿಗೆ ಸೇರಿದರು ಎಂದರೆ ಕುಚೇಷ್ಟೆ ಆರಂಭವಾಯಿತೇ. ಛಿ! ನಾನೀ ಪತ್ರವನ್ನು ಬರೆಯಲೇ ಬಾರದಿತ್ತು. ಆದರೂ . . . .

ಕಲ್ಪನಾ ದೇಸಾಯಿ

ತಾ. ಕ.:— ನಾನು ಹಾದಿ ಬಿಟ್ಟಿಲ್ಲವಷ್ಟೆ ?

೧೧

೩ ಜೂನ, ೧೯೫೭

ಕು. ಕಲ್ಪನಾ ದೇಸಾಯಿ ಇವರಿಗೆ ಸಪ್ರೇಮ....

ನಿಮ್ಮ ಪತ್ರ ಬಹಳ-ಬಹಳ ಮೆಚ್ಚಿಗೆಯಾಯಿತು. ಲೇಖಕ ಮತ್ತು ವಾಚಕರ ಭೆಟ್ಟಿಯಾಗಲು ಯಾವ ಆತಂಕವೂ ಇಲ್ಲ. ಮುಂದಿನ ಶನಿವಾರ ನಾನು ಮುಂಬಯಿಗೆ ಬರುತ್ತೇನೆ. ಸಂಜೆ ೬ ಗಂಟೆಗೆ ನೀವು ನನ್ನನ್ನು ದಾದರ ಖೋದಾದಾದ ಸರ್ಕಲ್ ಹತ್ತರ 'ಏ' ರೂಟ ಬಸ್ ಸ್ಟಾಪಿನ ಹತ್ತರ ಅವಶ್ಯವಾಗಿ ಭೆಟ್ಟಿಯಾಗಬೇಕು.

ಇನ್ನು ಬರೆಯಲಾಗದ್ದನ್ನೆಲ್ಲ ಪ್ರತ್ಯಕ್ಷ ಭೆಟಿಯಲ್ಲಿಯೇ ಹೇಳುವೆ.

ವಿಲಾಸ

೧೨

೧೧ ಅ, ಹಿಂದು ಕಾಲನಿ
೪ ಜೂನ ೧೯೫೭

ವಿಲಾಸ,

ಶನಿವಾರ ಸಂಜೆ ಆರು ಗಂಟೆಗೆ "ಏ" ರೂಟ ಬಸ್ ಸ್ಟಾಪಿನ ಹತ್ತರ ನಿಮ್ಮ ಹಾದಿ ಕಾಯುತ್ತಿರುತ್ತೇನೆ. ಒಬ್ಬ ಗೆಳತಿಯ ಮನೆಗೆ ಹೋಗಬೇಕಾಗಿದೆಯೆಂದು ಮನೆಯಲ್ಲಿ ಹೇಳಿದ್ದೇನೆ. ನನ್ನ ನಚ್ಚಿನ ಲೇಖಕನ ಪ್ರತ್ಯಕ್ಷ ಭೆಟ್ಟಿಯಾದೀತೆಂದು ನಾನು ಎಣಿಸಿರಲಿಲ್ಲ. ಶನಿವಾರ ಎಂದು ಬಂದೀತು ಎಂದಾಗಿದೆ ನನಗೆ.

ತಾ. ಕ :— ನಾನು ಆ ದಿವಸ ಆಕಾಶ ಬಣ್ಣದ ಸೀರೆ ಉಟ್ಟಿರುತ್ತೇನೆ. ಅದನ್ನೆ ಗುರುತೆಂದು ತಿಳಿಯಬೇಕು.

ಕಲ್ಪನಾ

೧೩

೫ ಜೂನ ೧೯೫೭

ಕಲ್ಪನಾ,

ನಿನ್ನ ಪತ್ರ ಎದುರಿಗಿದೆ. ಖಂಡಿತ ಬರುತ್ತೇನೆ. ನಾನು ನಾಸಿಪುಡಿ ಬಣ್ಣದ ಗ್ಯಾಬರ್ಡಿನ್ ಸೂಟು ಧರಿಸಿ ಬರುತ್ತೇನೆ. ಅಂದರೆ ನಿನಗೂ ಗುರುತು ಹಿಡಿಯುವದು ಸುಲಭವಾಗುವದು.

ನನ್ನ "ಇಂದ್ರಾಯಣಿ"ಯ ಭೆಟ್ಟಿಯ ಯೋಗ ಬಂದೀತೆಂಬ ಕಲ್ಪನೆಯಿರಲಿಲ್ಲ. ಇನ್ನೂ ಏನು ಬರೆಯಲಿ ?

ವಿಲಾಸ

೧೪

೯ ಜೂನ, ೧೯೫೬

ವೆಂಕ್ಯಾ,

ಇಡೀ ಒಂದು ತಿಂಗಳು ಕಳೆದ ನಂತರ ನಿನಗೆ ಬರೆಯುತ್ತಿದ್ದೇನಾದ್ದರಿಂದ ನೀನು ಖಂಡಿತವಾಗಿಯೂ ನನ್ನನ್ನು ಬಯ್ಯುತ್ತಿರಬೇಕು. ಆದರೆ ಈ ಅವಧಿಯಲ್ಲಿ ನಾನೊಂದು ಗಲಾಟೆಯಲ್ಲಿ ಸಿಕ್ಕಿಕೊಂಡಿದ್ದೆ. ನಾನು ಮತ್ತು ಗಲಾಟೆ ಎಂದರೆ ನಿನಗೆ ಆಶ್ಚರ್ಯವಾದೀತು. ಆದರೆ ಹಾಗಾದದ್ದು ನಿಜ. ಹೋದ ತಿಂಗಳಲ್ಲಿ ನನ್ನ ಒಬ್ಬರೇ ಒಬ್ಬ ಆರಾಧಕ ವಾಚಕರಿಂದ ಬಂದ ಪತ್ರದ ವಿಚಾರ ನಿನಗೆ ತಿಳಿಸಿದ್ದೆ. ಹಿಂದು ಕಾಲನಿಯಲ್ಲಿರುವ ಒಬ್ಬ ಹುಡುಗಿ ನನ್ನ ಕಾದಂಬರಿಯ ಮೇಲೆ ಕಣ್ಮುಚ್ಚಿ ಮುಗ್ಧಳಾದಳು. ಅಲ್ಲಿಂದಲೇ ನಮ್ಮ ಪ್ರೇಮಕಥೆ ಆರಂಭವಾಯಿತು. ಹುಡುಗಿಯರು ಮರುಳಾದರೆಂದರೆ ಮತ್ತೇನು? ಪತ್ರಗಳ ಮತ್ತು ಸ್ತುತಿಯ ಸುರಿಮಳೆ! ಕೊನೆಗೆ ಹಿಂದು ಕಾಲನಿಯ ಈ ಹೂವು ಹೇಗಿದೆ ಎಂದು ನೋಡುವ ಹಂಬಲ ಉಂಟಾಗಿ ಮೊನ್ನೆ ೭ ನೇ ತಾರೀಖಿನ ದಿನ ದಾದರದಲ್ಲಿ ಭೆಟ್ಟಿಯನ್ನೂ ಗೊತ್ತು ಮಾಡಿದೆ. ನನ್ನ ಈ ನಾಯಕಿ ಆಕಾಶಬಣ್ಣದ ಸೀರೆಯನ್ನುಟ್ಟು ಬರತಕ್ಕವಳಿದ್ದಳು. ನನಗೆ ಕನಿಕರ ಉಂಟಾಗಿತ್ತು- ಪಾಪ, ಅವಳಿಗೆ ಇಷ್ಟೊಂದು ಆತುರವಿದ್ದರೆ ಭೆಟ್ಟಿಯಾಗೋಣ ಎಂದೆ. ಆದರೆ ಸ್ತ್ರೀಯರ ಸಲಿಗೆಯಿಲ್ಲದ ನಾನು ಗಾಬರಿಗೊಂಡಿದ್ದೆ ಎನ್ನು. ಧೈರ್ಯ ಮಾಡಿ ಶನಿವಾರ ಸಾಯಂಕಾಲ ದಾದರದ 'ಏ' ರೂಟ ಬಸ್ ಸ್ಟಾಪಿನ ಬಳಿಗೆ ಬಂದೆ. ಆದರೆ ಒಂದು ಬುದ್ಧಿವಂತಿಕೆ ಮಾಡಿದೆ. ಒಮ್ಮೆಲೆ ಬಸ್ ಸ್ಟಾಪಿಗೆ ಹೋಗದೆ ತುಸು ದೂರ ಒಂದು ಕಂಬಕ್ಕೆ ಮರೆಯಾಗಿ ನಿಂತೆ. ಆರು ಗಂಟೆಗೆ ಐದು ನಿಮಿಷಗಳಿರುವಾಗ ನನ್ನ ನಾಯಿಕೆ ಅವತರಿಸಿದಳು. ಅವಳು ಆಕಾಶಬಣ್ಣದ ಸೀರೆ ಉಟ್ಟಿದ್ದಳು. ಅದೆಲ್ಲ ಸರಿ. ಆದರೆ ಇಷ್ಟೊಂದು ಕುರೂಪಿ ಹುಡುಗಿಗೆ "ಕಲ್ಪನಾ" ಎಂಬ ಸುಂದರ ಹೆಸರನ್ನು ಯಾವ ಕತ್ತೆ ಇಟ್ಟಿರಬೇಕು ಎಂದು ತಿಳಿಯದಂತಾಯಿತು. ಇನ್ನೂ ಹೆಚ್ಚಿನ ಶೋಭೆಯಾಗುವದು ಬೇಡವೆಂದು ಅವಳಿಗೆ ಕಾಣಿಸಿಕೊಳ್ಳದಂತೆ ಹಾಗೆಯೆ ಹಿಂತಿರುಗಿದೆ. ಈ ಮುಂಬಯಿ ಪ್ರವಾಸಕ್ಕಾಗಿ ವ್ಯರ್ಥ ಹದಿನೈದು ರೂಪಾಯಿಗಳು ಹಾಳಾದವು.

ಆದರೆ ಈ ಹದಿನೈದು ರೂಪಾಯಿಗಳನ್ನು ನಾನು ಸಂಪಾದಿಸದೆ ಬಿಡತಕ್ಕವನಲ್ಲ. ನಮ್ಮ "ನವಕಥಾ" ಮಾಸಿಕಕ್ಕೆ ಇದೇ ಬಹದ್ದೂರ ಕಥೆಯನ್ನು ಕಳಿಸಿ ಕಳೆದ ಹದಿನೈದು ರೂಪಾಯಿಗಳನ್ನು ವಸೂಲು ಮಾಡಿಕೊಳ್ಳುತ್ತೇನೆ. ಆ ಹುಡುಗಿಯ ಮತ್ತು ನನ್ನ ಪತ್ರಗಳ ನಕಲುಗಳು ಇವೆ. ನನ್ನ ಕಥೆಯ ಕೊನೆ ದುಃಖಾಂತವಾಗುವದು. ಅದಕ್ಕೆ ಉಪಾಯವಿಲ್ಲ. "ನವಕಥೆ"ಯ ಜುಲೈ ಸಂಚಿಕೆಯನ್ನು ಅವಶ್ಯ ನೋಡು.

ಮತ್ತೇನು, ನಾನಾ ಭೆಟ್ಟಿಯಾಗಿದ್ದನೇನು? ಆ ಕಮಲಾ ಪ್ರಧಾನಳ ಲಗ್ನ ಕೊನೆಗೂ ಕೂಡಿ ಬಂತು ಎಂದು ಕೇಳಿದ್ದೇನೆ, ನಿಜವೆ? ಇಲ್ಲದ ಸೆಡವು ಮಾಡದೆ ಕೂಡಲೇ ಉತ್ತರ ಹಾಕು.

ನಿನ್ನ-ವಿಲಾಸ

೧೬

"ನವಕಥಾ" ಕಚೇರಿ

೨೧, ಜೂನ ೧೯೫೬

ನಮಸ್ಕಾರ.

ನಿಮ್ಮ ಕಥೆಯ ಹಸ್ತಲಿಖಿತ ಪ್ರತಿಯನ್ನು ಸಾಭಾರ ಪೂರ್ವಕವಾಗಿ ತಿರುಗಿ ಕಳಿಸುತ್ತಿದ್ದೇವೆ. ನಿಮ್ಮ ಈ ಕಥೆಯನ್ನು ಪ್ರಕಟಿಸಲು ನವಕಥೆಗೆ ಸಂತೋಷವಾಗುತ್ತಿತ್ತು. ಆದರೆ ನಿಮ್ಮ ಕಥೆ ಬಂದು ತಲುಪುವದಕ್ಕೆ ಎಂಟು ದಿನಗಳ ಮೊದಲು ತೀರ ಇದೇ ಬಗೆಯ ಒಂದು ಕಥೆಯನ್ನು ಕು. ಕಲ್ಪನಾ ದೇಸಾಯಿ ಎಂಬ ನವೋದಿತ ಲೇಖಿಕೆ ಕಳಿಸಿದ್ದಾರೆ. ಎರಡೂ ಕಥೆಗಳಲ್ಲಿರುವ ಸಾಮ್ಯವನ್ನು ಕಂಡು ನಾವು ಕು. ದೇಸಾಯಿಯವರಿಗೆ ವಿವರಣೆ ಕೇಳಿದಾಗ "ಕಥೆ ಸಂಪೂರ್ಣವಾಗಿ ಸ್ವತಂತ್ರವಾದದ್ದು" ಎಂದವರು ತಿಳಿಸಿದ್ದಾರೆ.

ಅವರ ಕಥೆಯ ಕೊನೆ ಮಾತ್ರ ನಿಮ್ಮದಕ್ಕಿಂತ ತುಸು ಭಿನ್ನವಿದೆ. ನಿಮ್ಮ ಕಥೆ ನಾಯಕಪ್ರಧಾನವಾಗಿದ್ದರೆ ಅವರದು ನಾಯಿಕಾಪ್ರಧಾನವಾಗಿದೆ. ಬಸ್ ಸ್ಟಾಪಿನ ಹತ್ತಿರ ನಾಯಕನ ಭೆಟ್ಟಿಗಾಗಿ ಅವಳು ಬಂದಾಗ ಆವನ ಬರವಣಿಗೆ, ಸುಂದರ ಹೆಸರು ಮತ್ತು ಅವಕ್ಕೆ ತೀರ ಅಸಂಗತವಾದ ಅವನ ಪ್ರತ್ಯಕ್ಷಮೂರ್ತಿಯನ್ನು ಕಂಡ ಅವಳಿಗೆ ದಾರುಣ ನಿರಾಶೆಯಾಗುತ್ತದೆ. ಲೇಖಿಕೆ ಹೇಳುತ್ತಾಳೆ:

"ಒಂದು ಒಳ್ಳೆಯ ಕಾದಂಬರಿಯ ಲೇಖಕ ಇಷ್ಟು ಕುರೂಪಿ ಮತ್ತು ಹುಚ್ಚು ಕಳೆಯವನಿರಬಹುದು ಎಂಬ ಕಲ್ಪನೆ ನನಗಿರಲಿಲ್ಲ. ಅವನ ಆ ಹೊಲಸು ನಾಸಿ ಬಣ್ಣದ ಸೂಟು, ಡೊಂಕು ಮೂಗು, ದಪ್ಪ ಹುಬ್ಬು ಇವುಗಳನ್ನು ಕಂಡು ನನಗೆ ಅಲ್ಲಿ ಒಂದರೆ ನಿಮಿಷವೂ ನಿಲ್ಲುವದಾಗಲಿಲ್ಲ. ಆತ ಒಂದು ಕಂಬದ ಪಕ್ಕದಲ್ಲಿ ನಿಂತಿದ್ದ. ನನ್ನನ್ನು ಕಂಡು ಮುಂದೆ ಬಂದಾನೆಂಬ ಭೀತಿಯಿಂದ ನಾನು ಕಾಲು ಕಿತ್ತೆ. ಛಿ! ಎಂಥ ಲೇಖಕ! ಬಸ್ ಕಂಡಕ್ಟರನಂತೆ ಕಾಣಿಸಿದ."

ನೀವು ತಪ್ಪು ತಿಳಿದುಕೊಳ್ಳಬಾರದೆಂದೂ ನವಕಥೆಯ ಮೇಲಿನ ನಿಮ್ಮ ಪ್ರೇಮಾಭಿಮಾನಗಳು ಕಿಂಚಿತ್ತಾದರೂ ಕಡಿಮೆಯಾಗಬಾರದೆಂದೂ ಇಷ್ಟು ವಿಸ್ತಾರವಾಗಿ ಪತ್ರ ಬರೆದಿದ್ದೇವೆ. ನಿಮ್ಮಂಥ ಲೇಖಕರ ಆಶ್ರಯದಿಂದಲೇ ನವಕಥೆ ಬೆಳೆಯುತ್ತಿದೆ. ಪ್ರೀತಿಯಿರಲಿ.

ನಿಮ್ಮ
ಸಂಪಾದಕ "ನವಕಥೆ"

" ರಾಧಿಕಾ "
ಬೆಂಗಳೂರು

ಪ್ರಾಚೀನ ಭಾರತೀಯ ನಾರಿಯರ ಜೀವನದ ಒಂದು ಮುಖ

# ಷೋಡಶಾಲಂಕಾರಗಳು

ಒಂದೊಮ್ಮೆ ಬ್ರಹ್ಮ ಪ್ರಪಂಚವನ್ನು ಸೃಷ್ಟಿಸಿ, ಎಲ್ಲರಿಗಿಂತ ಮುಂದಾಗಿ ಪುರುಷನಿಗೆ ಜೀವವಿತ್ತು ಈ ಪ್ರಪಂಚಕ್ಕೆ ಅಟ್ಟಿದನಂತೆ. ಆದರೆ ಕ್ರಮೇಣ, ತಾನು ತುಂಬಿದ ಜೀವ ನಾಳೆ ತನ್ನನ್ನೆ ನುಂಗಿದರೆ—ಎಂಬ ಭೀತಿ ಬಲಿತು, ಅವನಿಗೆ ಹೆಜ್ಜೆ-ಹೆಜ್ಜೆಗೂ ಸೋಲಾಗುವಂತೆ ಅವನಿದಿರು ಒಂದು ಸಮಸ್ಯೆಯನ್ನೊಡ್ಡಿದನಂತೆ. ಆ ಸಮಸ್ಯೆಯೇ ಸ್ತ್ರೀ ಎಂದು ಪುರಾಣವಾಕ್ಯ ಹೇಳುತ್ತದೆ.

" ಜಗದಾದಿಯಲ್ಲಿ ಅಲ್ಲಾ ಒಂದು ಗುಲಾಬಿ, ಒಂದು ಕುಮುದ, ಒಂದು ಹಾವು, ಸ್ವಲ್ಪ ಜೇನುತುಪ್ಪ, ಒಂದು ಹಿಡಿ ಮಣ್ಣು ತೆಗೆದುಕೊಂಡು ಬೆರಸಿ ಅದರ ಭಟ್ಟಿ ಇಳಿಸಿದಾಗ ಬಂದ ಫಲವೇ ಸ್ತ್ರೀ " ಎಂದೊಂದು ಕಥೆಯುಂಟು. ಹೆಂಗಸಿನ ಅಂತರಂಗ ಸೌಂದರ್ಯ ಬಾಹ್ಯ ಶೃಂಗಾರವನ್ನವಲಂಬಿಸುವುದಿಲ್ಲ ಎಂಬುದು ನಿಜವೇ. ಹೊರಗಿನ ಸೌಂದರ್ಯ, ನಿಷ್ಕಳಂಕವಾಗಿ ಮುಗ್ಧತೆಯ ಮರೆಯಲ್ಲಿದ್ದರೆ ಅವರ ಅಂತರಂಗವು ಬಹುಮಟ್ಟಿಗೆ ಶುದ್ಧವೆನ್ನಬಹುದು. ಆದರೆ ಅಂತರಂಗವು ದೋಷದ ಕಸರಿಲ್ಲದೆ ನಿರ್ಮಲವಾಗಿದ್ದರೆ ಬಾಹ್ಯಸೌಂದರ್ಯದಲ್ಲೂ ಒಂದು ದಿವ್ಯ ಕಾಂತಿ ಬೆಳಗುತ್ತದೆ. ಇದಕ್ಕಾಗಿಯೋ ಏನೋ ಪುರಾಣದ ಅಭಿಸಾರಿಕೆಯರು ತಮ್ಮ ಅಲಂಕಾರ-ಸಿಂಗಾರಗಳಿಗೆ ಸಾಕಷ್ಟು ಗಮನವೀಯುತ್ತಿದ್ದುದು.

ಪ್ರಾಚೀನ ಭಾರತದಲ್ಲಿ ಸಾಮಾನ್ಯ ಸ್ತ್ರೀಯರ ಅಲಂಕಾರಗಳು ಹದಿನಾರು. ಸ್ನಾನ, ವಿಲೇಪನ, ವಸ್ತ್ರ, ಶಿರೋಭೂಷಣ, ತಿಲಕ, ಕಜ್ಜಲ (ಕಾಡಿಗೆ), ನಾಸಾಭೂಷಣ, ಮಕರಪತ್ರ (ಕೆನ್ನೆಗಳ ಮೇಲೆ ಚಿತ್ರಿಸಿಕೊಳ್ಳುವ ವರ್ಣ-ವಿನ್ಯಾಸ), ಕುಂಡಲ, ಹಾರ, ಕೇಯೂರ (ಭುಜಗಳ ತೊಡಿಗೆ), ಮಣಿಭೂಷಣ, ಅಂಗುಲೀಯಕ, ಕಾಂಚೀದಾಮ (ಒಡ್ಯಾಣ), ನೂಪುರ(ಕಾಲಂದುಗೆ), ಅಲಕ್ತಕ (ಅರಗಿನರಸದ ಲೇಪನ). ಪುರಾಣಯುಗದ ಸ್ತ್ರೀಯರು ಅಲಂ-ಕಾರಗಳನ್ನು ಶಾಸ್ತ್ರೋಕ್ತ ರೀತಿಯಿಂದ ಮಾಡಿಕೊಳ್ಳುತ್ತಿದ್ದರು. ಅವರು ತಿಳಿದಂತೆ ಅಲಂಕಾರ ಅವರ ಜೀವಾಳ. ಅದೊಂದು ಚಿರನೂತನವಾದ ಕಲೆ.

ಸುವಾಸಿತವಾದ ನೀರಿನಲ್ಲಿ ಸ್ನಾನವಾದ ನಂತರ ಗಂಧಲೇಪನ. ಲೋಧ್ರದ ತೊಗಟೆ

ಯನ್ನು ನೀರಿನಲ್ಲಿ ಜಜ್ಜಿ ಮಾಡಿದ ಬೇರಿನ ದ್ರವ್ಯ ಮತ್ತು ಕಾಲೀಯವೆಂಬ ಪರಿಮಳಯುಕ್ತವಾದ ಅರಿಸಿನ ಬಣ್ಣದ ದ್ರವ್ಯಗಳನ್ನು ಅಂಗಾಂಗಗಳಿಗೆ ಲೇಪಿಸಿ ಅನಂತರ ಆಭರಣಗಳನ್ನು ತೊಡುತ್ತಿದ್ದರು. ಮುಖದ ಆಕಾರಕ್ಕೆ ಸಮನಾಗಿ ತೋರುವ ರೀತಿಯಲ್ಲಿ ತಮ್ಮ ಸಿದ್ಧಹಸ್ತದಿಂದ ಕೇಶಾಲಂಕಾರ ಮಾಡಿಕೊಳ್ಳುತ್ತಿದ್ದರು. ಮುಖ ದುಂಡಗಿದ್ದರೆ ಅದು ನಸುನೀಳವಾಗಿ ಕಾಣುವಂತೆ ಹೆಕ್ಕತ್ತಿನ ಮೇಲೆ, ನೆತ್ತಿಗಿಂತಲೂ ಕೊಂಚ ಕೆಳಭಾಗದಲ್ಲಿ ಜಡೆಯಾಕಾರದಲ್ಲಿ ನೀಳವಾದ ಕೇಶಪಾಶವನ್ನು ಸುತ್ತುತ್ತಿದ್ದರು. ಸುಂದರವಾದ ಮೊಗದ ಆಕಾರ ತುಸು ಉದ್ದಕ್ಕೆನಿಸುವಂತಿದ್ದರೆ, ನವಿಲಿನ ಪುಚ್ಛದಂತೆ ಹರಡಿಕೊಂಡಿರುವ ಕೂದಲ ಹಿನ್ನೆಲೆಯಲ್ಲಿ ಮುಖದ ಸ್ವರೂಪ ದುಂಡಗಿರುವಂತೆ ತೋರುತ್ತಿತ್ತು. ಆದರೆ ಅಜಂತದ ಭಿತ್ತಿಗಳ ಮೇಲಿನ ಕನ್ನಿಕೆಯರ ಕೇಶರಾಶಿ ಯಾವ ಬಂಧನವೂ ಇಲ್ಲದೆ ಗುಂಗುರು-ಗುಂಗುರಾಗಿರುವಂತೆ ಇಳಿಬಿಟ್ಟಿರುವುದು ಕಾಣಬರುತ್ತದೆ. ಇಂತಹ ಇಳಿಬಿಟ್ಟ ಕೂದಲ ಸುಂದರತೆಯನ್ನು ಹೆಚ್ಚಿಸಲೆಂಬಂತೆ ನಡುನೆತ್ತಿಯ ಮೇಲಿಂದಲೇ ಆರಂಭವಾಗಿ ಕಿವಿಗಳ ಇಬ್ಬದಿಯಲ್ಲಿ ಕೊನೆಕಂಡ ಪುಷ್ಪಾಲಂಕಾರ. ಚಂಚಲವಾದ ಸುಂದರ ನೇತ್ರಗಳ ಕೊಟ್ಟಕೊನೆಯಲ್ಲಿ ಕಿವಿಗಳ ಮುಂದೆ ಕೆನ್ನೆಯ ಮೇಲೆ ಮಲಗಿರುವಂತೆ ಎಳೆಯಾದ ಕೂದಲನ್ನು ಕಿರುಸುರುಳಿಯನ್ನಾಗಿ ಸುತ್ತುತ್ತಿದ್ದರು. ಇವಿಷ್ಟು ಸಾಮಾನ್ಯ ಕೇಶಾಲಂಕಾರದ ಸೂಕ್ಷ್ಮ ಬಣ್ಣನೆ. ತಲೆಯ ಹಿಂಭಾಗದಿಂದ ಕೂದಲನ್ನು ವಿಭಾಗಿಸಿ ಕಿವಿಗಳ ಹಿಂದೆ ಎತ್ತರವಾಗಿ ಕಾಣುವಂತೆ ಕೇಶಗುಚ್ಛಗಳನ್ನಳವಡಿಸುತ್ತಿದ್ದರು.

ಕಾಡಿಗೆಯಿಂದ ಕಣ್ಣ ಕೊನೆಗಳನ್ನು ಹಿಂದಕ್ಕೆಳೆದು ದೀರ್ಘಗೊಳಿಸುತ್ತಿದ್ದರು. ಹೆಂಗಸರಂತೆ ಗಂಡಸರೂ ಸಿಂಗಾರದಲ್ಲಿ ಪಾಲ್ಗೊಳ್ಳುತ್ತಿದ್ದರು. ಪುರುಷರಾದರೆ, ಹುಬ್ಬಿನ ಕೊನೆಗಳನ್ನು ಕೊಂಚ ಕೆಳಮುಖವಾಗಿ ಎಳೆದು ಮತ್ತೆ ಮೇಲ್ಮು



ಖವಾಗಿರುವಲ್ಲಿ ನಿಲ್ಲಿಸುತ್ತಿದ್ದರು. ಅವು ಧನುಷ್ಯಾಕೃತಿಯಂತೆಯೇ ಕಾಣಲೆಂದು ಅವರ ಆಶಯವಿದ್ದಿರಬೇಕು. ಹುಬ್ಬುಗಳು ಕೂಡಿರದಿದ್ದರೆ, ಅವು ಕೂಡಿದಂತೆ ಕಾಣಲು ಕಾಡಿಗೆಯ ಬಗ್ಗಿದ ಗೆರೆಯೆಳೆದು ಅವನ್ನು ಸೇರಿಸುತ್ತಿದ್ದರು. ಬುದ್ಧ, ಬೋಧಿಸತ್ವರ ವಿಗ್ರಹಗಳಲ್ಲಿ ಈ ರೀತಿಯ ಅಲಂಕಾರಗಳನ್ನು ಕಾಣಬಹುದು. ಆದರೆ ಹೆಂಗಸರ ಮುಖಕ್ಕೆ ಇಂತಹ ಹುಬ್ಬುಗಳು ಸಹಜವಾಗಿರುವುದರಿಂದಲೋ ಅಥವಾ ಅಂತಹ ಕಠಿಣವಾದ ಧನುಷ್ಯದಂತಿರುವ ಹುಬ್ಬುಗಳು ಸ್ತ್ರೀಯರ ಕೋಮಲವಾದ ಮುಖಕ್ಕೆ ಒಪ್ಪದಿರುವುದರಿಂದಲೋ ಹೆಂಗಸರು ಹುಬ್ಬುಗಳನ್ನು ಹಣೆಯ ಮಧ್ಯೆ ಕೂಡಿಸುತ್ತಿರಲಿಲ್ಲ. ಅಲ್ಲದೆ ನೀಳವಾದ ಹುಬ್ಬಿನ ಕೊನೆಗಳು ಮೇಲ್ಮುಖವಾಗಿ ಕೊನೆಗೊಳ್ಳುವ ಬದಲು,

ಕೆಳಮುಖವಾಗಿ ಕೊನೆಗಾಣುತ್ತಿದ್ದುವು. ಹುಬ್ಬಿನ ಮೇಲ್ಮೈಯ ಸುತ್ತ ಧವಳ ಸುಗಂಧ ಚೂರ್ಣದ ಚುಕ್ಕಿಗಳು ಕಣ್ಣಿನ ಸೌಂದರ್ಯಕ್ಕೆ ಕಾವಲು-ಗಾರ್ತಿಯರಂತೆ ಸಾಲಾಗಿ ನಿಲ್ಲುತ್ತಿದ್ದುವು. ಬೈತಲೆಗೆ ಸಿಂಧೂರವನ್ನು ಲೇಪಿಸುವ ಪದ್ಧತಿಯೂ ಆಗ ಇತ್ತೆಂದು ಕಾಣುತ್ತದೆ. ಬಂಗಾಲದ ಜನರು ಇಂದಿಗೂ ಹಾಗೆ ಲೇಪಿಸಿಕೊಳ್ಳುತ್ತಾರೆ.

ಅನಂತರ ಕೆನ್ನೆಗಳ ಮೇಲೆ ಸುಂದರವಾಗಿ ವರ್ಣವಿನ್ಯಾಸಗಳನ್ನು ಸೂಕ್ಷ್ಮವಾದ ಕಡ್ಡಿಯಿಂದ ಚಿತ್ರಿಸುತ್ತಿದ್ದರು. ಇವು ಮಕರಪತ್ರಗಳೆಂದು ಕರೆಯಲ್ಪಡುತ್ತಿದ್ದುವು. ಪರಿಮಳದಲ್ಲೇ ಜೀವ ತಳೆದಂತಿದ್ದ ಕೇಸರಿ ಅಥವಾ ಕರಿಗೆಂಪು ಬಣ್ಣದ ರಸಗಳಿಂದ ಈ ಚಿತ್ರವಿನ್ಯಾಸಗಳನ್ನು ಬಿಡಿಸುತ್ತಿದ್ದರು. ಈ ರೀತಿಯ ವರ್ಣವಿನ್ಯಾಸಗಳನ್ನು ನಾವು ಇಂದಿಗೂ ಗ್ರಾಮಸ್ಥ ಹೆಂಗಸರಲ್ಲಿ ಕಾಣಬಹುದು. ಅವರ ಕೈಗಳ ಮೇಲೆ ಸೂಜಿಯಿಂದ ಕೊರೆದು ಹಸುರಿನಿಂದ ತುಂಬಿಸಿದ ಚಿತ್ರಗಳನ್ನೂ ಗುರುತುಗಳನ್ನೂ ಕಾಣಬಹುದು. ಹಿಂದೆ ನಮ್ಮ ನಾಡಿನಲ್ಲೇ ರಾಜಮನೆತನದವರಲ್ಲಿ ಕುಮಾರರು ಹುಟ್ಟಿದಾಗ ಗುರುತಿಗಾಗಿ ಅವರ ತೋಳಿನ ಮೇಲೆ ದೀಪದ ಅಥವಾ ಕಿರುಗತ್ತಿಯ ಗುರುತನ್ನು ಒತ್ತುತ್ತಿದ್ದರಂತೆ. ಅಷ್ಟೇಕೆ, ಜಗದೇಕವೀರನಾದ ರುಸ್ತುಂ, ತನ್ನ ಮಗ ಸೊಹ್ರಾಬನನ್ನು ತೋಳ ಮೇಲಿನ ಕೆಂಬಣ್ಣದ್ದ ಮುದ್ರೆಯಿಂದಲೇ ಕಡೆಗಾಲದಲ್ಲಿ ಗುರುತಿಸಿದನಂತೆ.

ಹಿಂದೆ ಅಜಂತದ ಕನ್ನಿಕೆಯರ ಕಾಲದಲ್ಲಿ ತುಟಿಗಳು ಮಾಟವಾಗಿ ಕಿರಿದಾಗಿದ್ದರೆ ಸೌಂದರ್ಯದ ಬೀಡು ಎಂದೆನಿಸಿಕೊಳ್ಳುಕೊಳ್ಳುತ್ತಿದ್ದುವಂತೆ. ಆ ಭಿತ್ತಿಸಮೂಹಗಳಲ್ಲಿ ಚಿತ್ರಿತವಾಗಿದ್ದ ಸ್ತ್ರೀಯರ ತುಟಿಗಳ ಕೊನೆ ಕೊಂಚ ಕೆಂಪಿನಲ್ಲಿ ಚಿತ್ರಿತವಾಗಿದೆ. ಆದರೆ ಸ್ತ್ರೀಯರು ಕಣ್ಣ ಕೊನೆಯನ್ನು ವಿಶಾಲವಾಗಿಸಿದಂತೆ ತುಟಿಯ ಕೊನೆಯನ್ನು ಕೆಂಪಿನಿಂದ ವಿಸ್ತಾರಪಡಿಸುತ್ತಿರಲಿಲ್ಲ. ತುಟಿಗಳನ್ನು ತಾಂಬೂಲಚರ್ವಣದಿಂ-ದಲೇ ಕೆಂಪಾಗಿಸುತ್ತಿದ್ದರಲ್ಲದೇ ಕೃತಕವಾದ ತುಟಿ ಬಣ್ಣವನ್ನುಪಯೋಗಿಸುತ್ತಿರಲಿಲ್ಲ.

ಕೈಕಾಲುಗಳ ಉಗುರುಗಳು ಸುಂದರವಾಗಿ ಕಾಣಲು ಕೆಂಪು ಬಣ್ಣವನ್ನು ಉಪಯೋಗಿಸುತ್ತಿದ್ದರು. ಈ ಬಣ್ಣದಿಂದ ಪಾದಗಳ ಕಾಂತಿಯೂ ಹೆಚ್ಚಾಗುವುದೆಂದು ತಿಳಿದಿದ್ದರು, ಅಂದಿನ ಹೆಂಗಸರು. ರಸಿಕ ಕವಿ ಕಾಳಿದಾಸ, ತನ್ನ ಮಹಾ ನಾಟಕವಾದ ಅಭಿಜ್ಞಾನ ಶಾಕುಂತಲದಲ್ಲಿ ಹೇಳಿದ್ದಾನೆ:

ಶಕುಂತಲೆ ಗರ್ಭವತಿಯಾಗಿ ದುಷ್ಯಂತನ ಮನೆಗೆ ತಾನಾಗಿ ತೆರಳುವಂದು ಆಶ್ರಮದ ಮರಗಳು ಬಗ್ಗಿ ತಮ್ಮೊಡಲ ಪುಷ್ಪಗಳ ರಂಗಿನ ಪರಾಗವನ್ನು ಶಕುಂತಲೆಯ ಮೇಲೆ ಕೊನೆಯ ಬಾರಿಗೆ ಅತ್ಯಂತ ಸಂಭ್ರಮದಿಂದ ತೂರಿದುವು. ಅವಳು ಅವುಗಳನ್ನು ಮೃದುವಾಗಿ ಝಾಡಿಸಿದಾಗ ಅವಳ ಪಾದದುಗುರ ಮೇಲಿನ ಪರಾಗ ಉದುರಿತು. ಆದರೂ ಅವು ಬಿದ್ದ ಕಡೆಯಲ್ಲಿ ಉಗುರು ಕೆಂಪಾಗಿ ಕಾಂತಿಯಿಂದ ಹೊಳೆಯಿತು. ಮುಂದೆ ಅವಳು ಅರಮನೆ ಸೇರುವವರೆಗೂ ಆ ಕೆಂಪಿನ ಕಾಂತಿ ಅವಳ ಕಾಲಿನಿಂದ ಮಾಯವಾಗಲೇ ಇಲ್ಲವಂತೆ.

ಪುರಾಣ ಸ್ತ್ರೀಯರು ತಮ್ಮ ಅಂಗಾಲುಗಳಿಗೆ ಅರಗಿನ ರಸ ಲೇಪನ ಮಾಡಿಕೊಳ್ಳುತ್ತಿದ್ದರಂತೆ, ಅದು ಕೆಂಪಾಗಿ ಕೋಮಲವಾಗಿ ಕಾಣಲೆಂದು. ಮಹಾಕವಿ ಕಾಳಿದಾಸ ಮತ್ತೆ ಕುಮಾರ ಸಂಭವದಲ್ಲಿ ಶಿವೆಯ ಪಾದಪದ್ಮಗಳನ್ನು ವರ್ಣಿಸುತ್ತಾ ಹೇಳಿದ ಸಂಸ್ಕೃತ ನುಡಿಯ ಭಾಷಾಂತರ ಹೀಗಿದೆ:

**ನಖಮಯೂಖವನೆರಚಿ ಪದವ-**
**ನೆತ್ತಿಡುವಂದು**
**ಕೆಂಪು ಸೂಸುವ ಅವಳ ಚರಣಯುಗಳ**
**ನೆಲದ ಮೇಲರಳಿರುವ ಚಲಿಸುವಂ-**
**ಭೋಜಗಳ**
**ಕಾಂತಿಯನ್ನಪಹರಿಸುವಂತೆಸೆವುದು.**

—ಪಾರ್ವತಿ ಮುಂದೆ ನಡೆಯುತ್ತಿದ್ದರೆ ಆ ಚರಣ

ಗಳ ಕಾಂತಿ ನೆಲದ ಮೇಲೆ ಮೂಡುತ್ತಿತ್ತಂತೆ. ಅವಳ ಪಾದಗಳ ಸಹಜ ಕಾಂತಿಯೇ ಹಾಗಿತ್ತು. ಆದರೆ ಎಲ್ಲಾ ಹೆಂಗಸರೂ ಬಹುಶಃ ಹಾಗಿರುವುದಿಲ್ಲ. ಆದ್ದರಿಂದಲೇ ಪುರಾಣ ಯುಗದ ಸ್ತ್ರೀಯರು ಅಂಗಾಲಿಗೆ ಅರಗಿನ ರಸಲೇಪವನ್ನು ಎಳೆಯುತ್ತಿದ್ದರು. ಒಂದೊಂದು ವೇಳೆ ರಕ್ತಚಂದನದ ತೆಳು ಲೇಪವೂ ಅಂಗಾಲನ್ನು ಅಲಂಕರಿಸುತ್ತಿತ್ತು. ಕೈಕಾಲುಗಳ ಉಗುರುಗಳಿಗೆ ಹಚ್ಚುವ ಕೆಂಪಾದ ರಸವನ್ನು ಅವರು ಹಲವು ರೀತಿಯಿಂದ ತಯಾರಿಸುತ್ತಿದ್ದರು. ಬೇಸಿಗೆಯಲ್ಲಿ ಎಲೆಗಳನ್ನು ಕಳೆದುಕೊಂಡು ಬೋಳಾಗಿ ನಿಲ್ಲುವ ಮರಗಳಲ್ಲಿ ಬಿಡುವ ಕೆಂಪುಕಾಯಿಯ ಸಿಪ್ಪೆಗಳನ್ನು ಜಜ್ಜಿ ಕೆಂಪಾದ ರಸವನ್ನು ಹಿಂಡಿ ತೆಗೆದು "ಮದರಂಗಿ" ಸೊಪ್ಪನ್ನರೆದು ಅದರ ರಸವನ್ನೂ ಬೆರಸಿ ಅಂಟಾಗಿಸಿ ತಯಾರಿಸುತ್ತಿದ್ದರು. ಅಂತಹ ಕಾಯಿಯ ಸಿಪ್ಪೆ ಕೆಂಪಾಗಿ ದೊರಗಾಗಿದ್ದು ಒಳಗಡೆ ಬಾದಾಮಿಯಂತಹ ಬೀಜವಿರುತ್ತದೆ.

ಹಳ್ಳಿಗಳಲ್ಲಿ ಸಾಮಾನ್ಯವಾಗಿ ಗುಡ್ಡದ ಬದಿಯಲ್ಲಿ ಸಿಗುವ ಜೇಡಸೆಲೆ ಎಂಬ ಅಂಗೈಗಿಂತಲೂ ಅಗಲವಾಗಿರುವ ಎಲೆಗಳನ್ನು ತಂದು ಅದರ ರಸವನ್ನು ಹಿಂಡುತ್ತಾರೆ. ಎಲೆಗೆ ವಾಸನೆಯಾಗಲೀ ಪರಿಮಳವಾಗಲೀ ಇರುವುದಿಲ್ಲ. ಅದರ ಹೂವಿಗಿರುವ ಪರಿಮಳ ಎಣೆಯಿಲ್ಲದ್ದು: ಆದರೆ ಆ ಪುಷ್ಪದ ಬದಲು ಎಲೆಯ ರಸವನ್ನೇ ಹಿಂಡಿ ದಾಳಿಂಬೆ ಹಣ್ಣಿನ ದಪ್ಪವಾದ ಸಿಪ್ಪೆಗಳನ್ನು ಕುದಿಸಿ, ಹಳದಿ ಬಣ್ಣದ ತೆಳುರಸವನ್ನು ತಯಾರಿಸಿ, ಇವೆರಡನ್ನೂ ಬೆರಸಿ ಅಂಟಾದ, ಬೇಗನೆ ಒಣಗುವಂತಹ ಲೇಪವನ್ನು ತಯಾರಿಸುತ್ತಾರೆ. ಪಾದಗಳ ಮೇಲೆ ದಪ್ಪ ಗೆರೆಗಳನ್ನು ತೋರು ಬೆರಳಿನಿಂದಲೂ ಚುಕ್ಕೆಗಳನ್ನು ಗಿಡದ ತುದಿಯಲ್ಲಿ ಮೊಂಡಾಗಿ, ಗಂಟಾಗಿರುವ ಸಣ್ಣನೆಯ ಕಡ್ಡಿಯಿಂದಲೂ ಒಂದು ತರದ ಮಾದಕ ಸುವಾಸನೆಯುಳ್ಳ ಕೆಂಪು ರಸದಲ್ಲಿ ಅದ್ದಿ ಚಿತ್ರಿಸುತ್ತಿದ್ದರು. ಯುವತಿ ಸ್ತ್ರೀಯರು ಇಂದಿಗೂ ಅಂಗೈಗಳ ಮೇಲೆ ಹೃದಯಾಕಾರವನ್ನು ಬಿಡಿಸಿ ಅದರ ಸುತ್ತ ಅರ್ಧಚಂದ್ರನನ್ನು ಬರೆಯುತ್ತಾರೆ.

ಹಣೆಯ ಮೇಲೆ ಇಳಿಬಿದ್ದ ಮುಂಗುರುಳುಗಳಿಗೂ ಸುವಾಸನೆಯ ಪುಡಿಯನ್ನೋ ಪುಷ್ಪಪರಾಗವನ್ನೋ ಲೇಪಿಸುತ್ತಿದ್ದರು. ಕುಮಾರಸಂಭವದ ಶಿವಪಾರ್ವತಿಯರ ಶೃಂಗಾರ ಲೀಲೆಯ ಚಿತ್ರವೊಂದು ಇದಕ್ಕೆ ಸಾಕ್ಷಿ.

ಮತ್ತೆ ಉಳಿದುದೆಂದರೆ ತಿಲಕವನ್ನಿಡುವುದರಲ್ಲಿ ನುರುಗಿದ ಅವರ ಕಲಾನೈಪುಣ್ಯ. ಕೇಶಾಲಂಕಾರಕ್ಕೂ ಮೈಬಣ್ಣಕ್ಕೂ ಒಪ್ಪುವಂತೆ ತಿಲಕವನ್ನಿಡುತ್ತಿದ್ದರು. ಗುಲಾಬಿ ಮೈಬಣಕ್ಕೆ ನಸುನೇರಿಳೆ ಬಣ್ಣ ಬೆರಸಿದ ಕುಂಕುಮ ತಿಲಕವನ್ನೂ ಕೇದಿಗೆಯ ಕಾಂತಿಯವರಿಗೆ ಅಚ್ಚ ಕೆಂಪಿನ ಕುಂಕುಮವನ್ನೂ ಬಳಸುತ್ತಿದ್ದರು. ಒಂದೊಂದು ವೇಳೆ ಚಂದನದ ತೆಳು ಹಿನ್ನೆಲೆಯಲ್ಲಿ ಈ ತಿಲಕವು ರೂಪಿಸಲ್ಪಡುತ್ತಿತ್ತು: ಅನಂತರ ತಿಲಕದ ಸುತ್ತ ಧವಳ ವರ್ಣದ ಸುಂದರವಾದ ಕಿರುಚುಕ್ಕೆಗಳನ್ನಿಡುತ್ತಿದ್ದರು. ತಿಲಕ ನಕ್ಷತ್ರದಾಕಾರದಲ್ಲಿದ್ದರೆ ಈ ಬಿಳಿಯ ಪುಡಿಯ ಆವರಣ ಅಷ್ಟು ಚೆನ್ನಾಗಿ ಕಾಣುವುದಿಲ್ಲವೆಂದು ಅವರ ಅಭಿಮತವಾಗಿತ್ತು.

ಪಾರ್ವತಿಯ ಚೆಲುವನ್ನು ಬಣ್ಣಿಸುತ್ತಾ ಕವಿ ನುಡಿದಿದ್ದ: "ವಿಧಿಯವಳ ಸೃಜಿಸಿದನು ಸರ್ವ ಸೌಂದರ್ಯವನು ಒಂದೆಡೆಯೆ ತಾನೊಮ್ಮೆ ನೋಡಲೆಳಸಿ"— ಎಂದು.

ಹಿಂದೆ ಹೇಳಿದ ಅಲಂಕಾರಗಳೆಲ್ಲವೂ ಪೂರ್ಣವಾದರೆ ಜಗದ ಚೆಲುವೆಲ್ಲ ಒಂದೆಡೆ ಸೇರಿದಂತೆ. ಇನ್ನುಳಿದುದೆಂದರೆ ಆ ಚೆಲುವಿನಾಗರದಂತಿದ್ದ ಮುಖ ಕಮಲಕ್ಕೆ ಕೆಟ್ಟ ಕಾಗೆಗಣ್ಣಿನ ನೋಟ ತಗಲದಂತೆ ದೃಷ್ಟಿ ಬಿಂದು. ಕಾಡಿಗೆಯ ದೃಷ್ಟಿ ಚುಕ್ಕಿ ಸಾಮಾನ್ಯವಾಗಿ ಎಡಗೆನ್ನೆಯ ಮೇಲೆ ಅಥವಾ ಕೆಳದುಟಿಯ ಬಲ ಕೊನೆಯಲ್ಲಿ ಮೂಡಿಸಿದರೆ ಚೆಲುವಿನ ಗೋಪುರಕ್ಕೆ ಕಳಸ ವಿಟ್ಟಂತೆ. ಈ ಸುಂದರತೆ ಜೀವ ತಳೆದುದು ಸಾರ್ಥಕವೆನ್ನಿಸುವುದು, ಇನಿಯನ ತುಂಬುದುಟಿಯು ಪ್ರಣಯಮುದ್ರೆಯೊತ್ತಿದಾಗಲೇ.



ಲಂಡನ್ನಿನಲ್ಲಿರುವ ಭಾರತೀಯರ
ಜೀವನದ ಹೃದಯಸ್ಪರ್ಶಿ ಅಂಶಗಳು

# ತಾಯಿನಾಡು ಕರೆಯುತಿದೆ— ಆದರೆ...

ಲಂಡನ್ ಶಹರ ಬಹು ದೊಡ್ಡದು. ಅಲ್ಲಿ ತೀರ ಬಡತನ ಸ್ಥಿತಿಯಿಂದ ತೀರ ಶ್ರೀಮಂತಿಕೆಯ ಸ್ಥಿತಿಯ ವರೆಗಿನ ದೃಶ್ಯಗಳು ಕಂಡುಬರುವಂತೆ ಜಗತ್ತಿನ ವಿವಿಧ ದೇಶಗಳ ಜನರ ವಸತಿಯೂ ಇದೆ. ಕೆಲ ಕೆಲವು ಭಾಗಗಳಂತೂ ಇದು ಬ್ರಿಟಿಶ್ ಶಹರವಲ್ಲ. ಎಂದು ಅನಿಸುವಂತಿವೆ. ಮೇಫೇರ್ ಭಾಗದಲ್ಲಿ ಬ್ರಾಝಿಲದ, ಪೋರ್ತುಗಾಲದ ಅಥವಾ ಅಮೇರಿಕದ ಲಕ್ಷಾಧೀಶರ ವಸತಿಯೇ ಮುಖ್ಯ. ಭಾರತದ ನಾವಿಕರ ಮತ್ತು ಹೊತ್ತು ಮಾರುವವರ ನಿವಾಸಸ್ಥಾನ ಆಲ್ಡ್‌ಗೇಟ್.

ಲಂಡನ್ನಿನಲ್ಲಿ ವರ್ಣಭೇದವಿಲ್ಲ. ಬ್ರಿಟಿಶರು ಪರನಾಡಿನವರನ್ನು ಸಹನೆಯಿಂದ ಕಾಣುತ್ತಾರೆ. ಅವರು ತಮ್ಮ ವ್ಯವಸಾಯ ನಡೆಸುವದನ್ನು ಸಹಸಾ ವಿರೋಧಿಸುವದಿಲ್ಲ.

ಲಂಡನ್ನಿನಲ್ಲಿರುವ ವಿದೇಶೀಯರಲ್ಲಿ ಭಾರತೀಯರ ಸಂಖ್ಯೆಯೇ ಹೆಚ್ಚು. ಅಲ್ಲಿ ನೌಕರಿಗಳಲ್ಲಿ, ಇತರ ಬಗೆಯ ವ್ಯವಹಾರಗಳಲ್ಲಿ ತೊಡಗಿರುವ ಮಧ್ಯಮ ವರ್ಗದ ಭಾರತೀಯರ ಸಂಖ್ಯೆ ಸಾಕಷ್ಟಿದೆ. ಇವರು ಭಾರತೀಯರಾದರೂ ಬ್ರಿಟನ್ನಿನಲ್ಲಿ ಬೇರು ಬಿಟ್ಟುಕೊಂಡಿರುವರು. ಅವರಿಗೆ ಭಾರತದಲ್ಲಿ ನಿಷ್ಠೆಯುಂಟು; ಆದರೆ ಬ್ರಿಟನ್ನಿನಲ್ಲಿ ತಮ್ಮ ಜೀವನ ಹೆಚ್ಚು ಸುಗಮವೆಂದು ಭಾವಿಸಿ ಅವರು ಇಲ್ಲಿ ನೆಲೆಯೂರಿದ್ದಾರೆ. ಇವರೆಲ್ಲರೂ ಸಂಪೂರ್ಣ ಸುಖಿಗಳಾಗಿರುತ್ತಾರೆಂದೇನಿಲ್ಲ. ಪ್ರಾಯಕ್ಕೆ ಬಂದ ಬಳಿಕವೇ ಬ್ರಿಟನ್ನಿಗೆ ಬಂದವರಾದ್ದರಿಂದ ತಾಯ್ನಾಡನ್ನು ಪೂರ್ಣ ಮರೆತು ಬ್ರಿಟಿಶ್ ಜೀವನದಲ್ಲಿ ಸಂಪೂರ್ಣ ಸಮರಸರಾಗಿ ಹೋಗಲು ಇವರಿಗೆ ಸಾಧ್ಯವಾಗುವದಿಲ್ಲ.

ಇವರಲ್ಲಿ ಅನೇಕರು ಬ್ರಿಟಿಶ್ ಸ್ತ್ರೀಯರನ್ನು ಮದುವೆಯಾಗಿ ಅವರ ಜೀವನರೀತಿಗೆ ಒಗ್ಗಿಕೊಂಡಿದ್ದಾರೆ. ಕೆಲವು ಸಲ ತಾಯ್ನಾಡಿಗೆ ಮರಳಿ ಅಲ್ಲಿಯೆ ನೆಲಸುವ ಹಂಬಲ ಅವರಲ್ಲಿ ತೀವ್ರವಾಗುವದುಂಟು. ಭಾರತವು ಸ್ವತಂತ್ರವಾದ ಬಳಿಕ ಈ ಬಗೆಯ ವಿಚಾರಗಳು ಅವರ ಮನಸ್ಸಿನಲ್ಲಿ ಹೆಚ್ಚಾಗಿ ಸುಳಿಯತೊಡಗಿವೆ. ಆದರೆ ಈ ವಿಚಾರಗಳು ಕೊನೆಗೂ ವಿಚಾರಗಳಾಗಿಯೇ ಉಳಿಯುತ್ತವೆ. ಏಕೆಂದರೆ ಬ್ರಿಟನ್ನಿನಲ್ಲಿ ಅವರಿಗೆ ಜೀವನದಲ್ಲಿ ಸಮಾಧಾನವಲ್ಲದಿದ್ದರೂ ಭದ್ರತೆ ದೊರೆಕಿರುತ್ತದೆ. ಅವರೊಂದು ಕುಟುಂಬವನ್ನು ಕಟ್ಟಿಕೊಂಡಿರುತ್ತಾರೆ. ತಮ್ಮ ಸಂಸಾರಕ್ಕೆ ಭಾರತದ ಜೀವನ ಹಿಡಿಸೀತೆ ಎಂದು ಅವರಿಗೆ ಸಂಶಯ ಬರುತ್ತದೆ. ಬ್ರಿಟನ್ನಿನಲ್ಲಿ ಮೇಲಾಗಿ ಈ ಭಾರತೀಯರ ಶಾಶ್ವತ ವಾಸ್ತವ್ಯಕ್ಕೆ ವಿರೋಧವಾದದ್ದು ಏನೂ ಇರುವದಿಲ್ಲ. ಬ್ರಿಟನ್ನಿನಲ್ಲಿಯೇ ಉಳಿದು ಪ್ರಾಮಾಣಿಕ ದುಡಿತದ ಫಲವನ್ನುಣ್ಣುತ್ತ, ಸ್ವದೇಶದ ಕರೆಯನ್ನು ಒಳಗೇ ಅದುಮಿ, ಸ್ವದೇಶಾಭಿಮಾನ ಪ್ರೀತಿಗಳ ಪ್ರಕಟನೆಗಳಲ್ಲಿ ಸಮಾಧಾನ ಕಂಡುಕೊಂಡಿರುವದೇ ಜಾಣತನದ ಮಾರ್ಗವಾಗುತ್ತದೆ ಇವರಿಗೆ. ಬ್ರಿಟನ್ನಿನಲ್ಲಿ ನೆಲೆಸಿರುವ ಭಾರತೀಯರಲ್ಲಿ ಬಹುಜನರು ಮಾಡುವದು ಇದನ್ನೇ

ಬ್ರಿಟನ್ನಿನಲ್ಲಿ ಇನ್ನೊಂದು ಬಗೆಯ ಭಾರತೀಯರ ವಸತಿಯಿದೆ. ಇವರದು ಮೇಲಿನವರಿಗಿಂತ ಸ್ವಾರಸ್ಯವಾದ, ಸಾಹಸಪೂರ್ಣ ಜೀವನ. ಹಡಗಗಳನ್ನು ತ್ಯಜಿಸಿ ಓಡಿಬಂದ ನಾವಿಕರು ಹಾಗೂ

ಹೊತ್ತು ಮಾರುವವರೇ ಈ ಜನ. ಬ್ರಿಟನ್ನಿನಲ್ಲೆಲ್ಲ ಅನೇಕ ಭಾರತೀಯ ಉಪಹಾರ ಗೃಹಗಳಿವೆ. (ಲಂಡನ್ನಿನಲ್ಲಿಯೇ ೭೦ ಇವೆ) ಇವುಗಳಲ್ಲೆಲ್ಲ ಪರಿಚಾರಕರಾಗಿರುವವರು ಭಾರತದ ನಾವಿಕರೇ. ಕೆಲವು ಉಪಹಾರಗೃಹಗಳ ಒಡೆತನವೂ ಇವರ ಕೈಲಿದೆ.

ಇವರಲ್ಲಿ ಹೆಚ್ಚಿನವರು ಬಂಗಾಲದ ಜನ. ಚಿತ್ತಗಾಂಗ ಅಥವಾ ಸಿಲ್ಹೆಟದವರು. ಹಣಕಾಸಿನ ಅಡಚಣೆ ಮತ್ತು ಸಾಹಸೀ ಜೀವನದ ಒಲವುಗಳಿಂದ ಪ್ರೇರಿತರಾಗಿ ಇವರು ತಮ್ಮ ಹಳ್ಳಿ-ಮನೆಗಳನ್ನು ಬಿಟ್ಟು ಹಡಗಗಳಲ್ಲಿ ಕೆಲಸಕೆ ಸೇರಿಕೊಳ್ಳುತ್ತಾರೆ. ಮುಂದೆ ಒಂದು ದಿನ ಅವರಿಗೆ ಸಮುದ್ರವನ್ನು ಕಂಡರೆ ಓಕರಿಕೆ ಬಂದಂತಾಗುತ್ತದೆ. ಜಲಪರ್ಯಟನವೆಂದರೆ ಮೈಮೇಲೆ ಮುಳ್ಳುಗಳೇಳುತ್ತವೆ. ಎಲ್ಲಿಯಾದರೇನು? ಯಾವ ಊರಾದರೇನು? ನೆಲದ ಮೇಲೆ ಇದ್ದರೆ ಸಾಕು ಎನಿಸುತ್ತದೆ.

ಇಂಥವರಿಗೆ ಬ್ರಿಟನ್ನಿನ ಬಗ್ಗೆ ಒಂದು ಆಕರ್ಷಣೆಯಿರುತ್ತದೆ. ಅನೇಕ ಸಲ ಅವರು ಬ್ರಿಟಿಶ್ ಬಂದರಗಳಿಗೆ ಬಂದು ಹೋಗಿ ಮಾಡಿರುವದರಿಂದ ಅವರಿಗೆ ಅಷ್ಟಿಷ್ಟು ಇಂಗ್ಲೀಷು ಬಂದಿರುತ್ತದೆ. ಬ್ರಿಟಿಶ್ ಬಂದರಗಳಲ್ಲಿ ಅವರು ಮದ್ಯದ ಅಂಗಡಿಗಳಿಗೆ ಹೋಗಿ ಬಂದಿರುತ್ತಾರೆ, ಸುಂದರ ಸ್ತ್ರೀಯರನ್ನು ಕಂಡಿರುತ್ತಾರೆ; ಅಲ್ಲಿನ ಜೀವನ ಸುಖಕರವಾಗಿ ಕಾಣಿಸಿರುತ್ತದೆ. ಅಂದ ಮೇಲೆ ಬೇರೆ ಯೋಚನೆ ಮಾಡುವದಾದರೂ ಏಕೆ?

ಹಡಗದಿಂದ ಓಡಿ ಹೋದವನು ತನ್ನ ಬಗ್ಗೆ ನಡೆಯುವ ಶೋಧ ಮತ್ತು ಗದ್ದಲಗಳು ನಿಲ್ಲುವವರೆಗೆ ಕಣ್ಮರೆಯಾಗಿದ್ದರೆ ತೀರಿತು. ಮುಂದಾತ ಲಂಡನ್ ಶಹರದ ಅಪಾರ ಜನಸಮುದ್ರದಲ್ಲಿ ಸೇರಿ ಲೀನನಾಗಿ ಬಿಡುತ್ತಾನೆ. ಅವನ ದೇಶದವರೂ ಸ್ನೇಹಿತರೂ, ಇಲ್ಲಿ ನೌಕರಿಗಳು ಬೇಕಷ್ಟು ಸಿಗುತ್ತವೆ, ಸಂಬಳ ಚೆನ್ನಾಗಿರುತ್ತದೆ, ಎಂದು ಅವನಿಗೆ ಹೇಳುತ್ತಾರೆ. ಉಪವಾಸ ಬೀಳುವ ಸಂದರ್ಭ ಖಂಡಿತ ಇಲ್ಲ ಎಂದು ಅವನಿಗೆ ಗೊತ್ತು. ಹಡಗವನ್ನು ಬಿಟ್ಟು ಓಡುವ ಮೋಹವನ್ನು ಜಯಿಸಲಾರದೆ ಅವನು ಹಡಗದಿಂದ ಪಾರಾಗುತ್ತಾನೆ. ಲಂಡನ್ನಿಗೆ ಬಂದು ಉಳಿದು ಬಿಡುತ್ತಾನೆ.

ಆಲ್ಡ್‌ಗೇಟಿನಲ್ಲಿ ಇವರಿಗೆ ಸುಲಭದರದಲ್ಲಿ ವಸತಿ ಸೌಕರ್ಯ ದೊರೆಯುತ್ತದೆ. ಇಂಥ ನಾವಿಕರಿಗಾಗಿಯೇ ಓರ್ವ ಭಾರತೀಯನು ಒಂದು ಹೋಟೆಲ್ ಇಟ್ಟಿದ್ದಾನೆ. ಆತ ಹಳಬರಿಗೂ ಹೊಸಬರಿಗೂ "ದಾದಾ". ಹೊಸ ಸ್ಥಳದಲ್ಲಿ ತನ್ನ ನೆಲೆಯನ್ನು ಕಂಡುಕೊಳ್ಳುವವರೆಗೆ ತನ್ನವರೆಂಬವರ ಆಶ್ರಯ ಸಿಕ್ಕರೆ ಮನುಷ್ಯನಿಗೆ ಬಹು ಸಮಾಧಾನವಾಗುತ್ತದೆ. ದಾದಾ ತುಂಬ ಶಿಸ್ತಿನ ಮನುಷ್ಯ. ಆತ ಜಗಳಗಳನ್ನು ಮೆಚ್ಚುವದಿಲ್ಲ. ಯಾವದಾದರೂ 'ಭಾನಗಡಿ' ಯಲ್ಲಿ ಸೇರಿಕೊಂಡವನಿಗೆ ಆತನೆಂದೂ ಕರುಣೆ ತೋರುವದಿಲ್ಲ. ಹೊಸದಾಗಿ ಬಂದ ಭಾರತೀಯನು ಒಳ್ಳೆಯ ನಡತೆಯವನಾಗಿರುವವರೆಗೆ ಎಲ್ಲರೂ ಅವನ ಪಕ್ಷಪಾತಿಗಳಾಗಿರುತ್ತಾರೆ. ಆತನೇನಾದರೂ ಹಾದಿ ಬಿಟ್ಟನೋ ಒಬ್ಬರೂ ಅವನನ್ನು ವಿಚಾರಿಸುವದಿಲ್ಲ. ದಾದಾನಲ್ಲಿ ಬಂದಿಳಿದವರು ಬೇಗನೆ ಲಂಡನ್ ಜೀವನದ ಅನುಭವ ಮಾಡಿಕೊಂಡು ತಂತಮ್ಮ ಹಾದಿಯನ್ನು ಕಂಡುಕೊಳ್ಳುತ್ತಾರೆ.

ಆಗಾಗ ಮನೆಯ ನೆನಪು ಪೀಡಿಸಿದರೂ ಈ ಜನರಲ್ಲಿ ಹೆಚ್ಚಿನವರು ಸ್ವತಂತ್ರವಾದ, ಸುಖಕರವಾದ ಜೀವನ ನಡೆಸುತ್ತಾರೆ. ಅನೇಕರು ಹೊಟೆಲ್ಲುಗಳಲ್ಲಿ ಅಡಿಗೆಯವರಾಗಿ, ಮಾಣಿಗಳಾಗಿ, ತಟ್ಟೆ-ಬಟ್ಟಲು ತೊಳೆಯುವವರಾಗಿ ಸೇರಿಕೊಳ್ಳುತ್ತಾರೆ. ಹಣ ಉಳಿಸಿಕೊಂಡವರು ಮುಂದೆ ಬೇರೆ ವೃತ್ತಿಗಳಲ್ಲೂ ತೊಡಗುತ್ತಾರೆ. ಸ್ಥಳೀಯ ಹೆಂಗಸರನ್ನು ಲಗ್ನವಾಗಿ ಸಂಸಾರ ನಡೆಸುತ್ತಾರೆ. ಇವರಿಗೆ ಬರುವ ಇಂಗ್ಲೀಷು ಹರಕು-ಮುರುಕಾದರೂ ಸ್ವಲ್ಪೇ ಸಮಯದಲ್ಲಿಯೇ ತಮ್ಮ ಈ ಹೊಸ ಜೀವನಕ್ಕೆ ಒಗ್ಗಿಕೊಳ್ಳುವದು ಅವರಿಗೆ ಶಕ್ಯವಾಗುವದು. ಅವರಿಗಿರುವ ದುಃಖ ಒಂದೇ: ತಾವಿನ್ನು ತಾಯ್ನಾಡಿಗೆ ಮರಳುವ ಸ್ಥಿತಿಯುಳಿದಿಲ್ಲ ಎಂಬುದು ಅದು. ಇದಕ್ಕೆ ಪರಿಮಾರ್ಜನೆ ಕಂಡು ಹಿಡಿಯುವದು ಅವರಿಗೆ ಅಷ್ಟು ಕಷ್ಟ

ವಾಗುವದಿಲ್ಲ. ಊರ ನೆನಪು ತೀವ್ರವಾದಾಗ ಅವರು ಸಾಗರದಾಚೆಗಿನ ತಮ್ಮ ಬಂಧುಗಳಿಗೆ ಅಲ್ಪ ಸ್ವಲ್ಪ ಹಣ ಕಳಿಸುತ್ತಾರೆ. ಸರಿ, ಬಂಧು-ಬಾಂಧವರ ಬಗ್ಗೆ ತಮ್ಮಿಂದಾದ ಕರ್ತವ್ಯ ಚ್ಯುತಿಗೆ ಇದು ಯೋಗ್ಯ ಪ್ರಾಯಶ್ಚಿತ್ತವಲ್ಲವೆ?

ಉಳಿದೆಲ್ಲ ರೀತಿಯಲ್ಲಿ ಅವರು ಬ್ರಿಟಿಶರ ಜೀವನಪದ್ಧತಿಯನ್ನೆ ಅನುಸರಿಸಿ ಸುಖ-ಸಂಸಾರ ಸಾಗಿಸುತ್ತಾರೆ. ಅವರ ಮಕ್ಕಳು ಸರಕಾರೀ ಶಾಲೆಗಳಿಗೆ ಹೋಗುತ್ತಾರೆ. ತಾಯಿಯ ಧರ್ಮದಲ್ಲಿಯೇ ಬೆಳೆದು ಅವಳ ಸಂಪ್ರದಾಯವನ್ನೇ ಅನುಸರಿಸುತ್ತಾರೆ. ಈ ಭಾರತೀಯರು ಲಗ್ನವಾಗುವ ಬ್ರಿಟಿಶ್ ಹೆಂಗಸರು ಅಲ್ಲಿಯ ಕಾರ್ಮಿಕ ವರ್ಗದವರು. 'ಬಣ್ಣ'ದ ಮನುಷ್ಯನೊಬ್ಬನನ್ನು ತಮ್ಮ ಸಂಬಂಧಿಕನಾಗಿ ಸ್ವೀಕರಿಸಲು ಬಿಳಿಯ ಬ್ರಿಟಿಶರಿಗೆ ಮೊದಲು ತುಸು ಕಷ್ಟವೆನಿಸಿದರೂ ಮುಂದೆ ಎಲ್ಲವೂ ಹೊಂದಿಕೊಂಡು ಹೋಗುತ್ತದೆ.

ಜೀವನ ಸಮಾಧಾನದಿಂದ ನಡೆದರೂ ಇವರ ಮನಸ್ಸಿನ ಮೂಲೆಯಲ್ಲಿ ಒಂದು ಕೊರಗು ಸದಾ ಇದ್ದೇ ಇರುತ್ತದೆ. ಅದು ಅನೇಕ ವಿಧಾನಗಳಲ್ಲಿ ವ್ಯಕ್ತವಾಗುವದು. ಲಂಡನ್ನಿಗೇನಾದರೂ ಒಂದು ಹಿಂದೀ ಚಿತ್ರಪಟ ಬಂದಿತೆಂದರೆ ಅಲ್ಲಿರುವ ಹಿಂದೀಯರೆಲ್ಲ ಅದನ್ನು ತಪ್ಪದೇ ನೋಡಿ ಸುಖಿಸುತ್ತಾರೆ. ಭಾರತದಲ್ಲಿ ಮಹಾಪೂರದ ಅಥವಾ ಬರಗಾಲದ ಅನಾಹುತವಾದ ಸುದ್ದಿ ಬಂದೊಡನೆ ತಮಗೆ ಸಾಧ್ಯವಾದಷ್ಟು ಸಹಾಯವನ್ನು ಕಳಿಸುತ್ತಾರೆ. ತಾಯ್ನಾಡನ್ನು ತ್ಯಜಿಸಿದ ಅಫರಾಧಕ್ಕೆ ಇದು ಪ್ರಾಯಶ್ಚಿತ್ತವಾಗಿರಲೂ ಬಹುದು. ಆದರೆ ತಾಯ್ನಾಡಿಗೆ ಮರಳಬೇಕೆಂಬ ಎಂದೂ ಕೈಗೂಡದ ಹಂಬಲವನ್ನು ಒಂದು ವಿಧದಲ್ಲಿ ಸಮಾಧಾನ ಪಡಿಸಿಕೊಳ್ಳುವ ರೀತಿ ಇದು ಖಂಡಿತವಾಗಿಯೂ ಹೌದು.

ಅದು ಹೇಗೋ ಇಂಗ್ಲಂಡಿಗೆ ಬಂದು ನೆಲೆಸಿರುವ ಭಾರತೀಯ ಹೊತ್ತು ಮಾರುವ ವರ್ಗದವನ ಜೀವನ ಸಂಚಾರೀ ಜೀವನ. ಆತ ತನ್ನಲ್ಲಿರುವದನ್ನೆಲ್ಲ ಹಣಕ್ಕೆ ಪರಿವರ್ತಿಸಿಕೊಂಡು ಅಪರಿಚಿತ ನಾಡಿನಲ್ಲಿ ತನ್ನ ಅದೃಷ್ಟವನ್ನು ಹುಡುಕಲು ಬಂದಿರುವಾತ. ಭಾರತದ ಊರು-ಪಟ್ಟಣಗಳಲ್ಲಿಯಂತೆ ಬ್ರಿಟನ್ನಿನ ಊರು-ಪಟ್ಟಣಗಳಲ್ಲೂ ಆತ ಅಷ್ಟೇ ಸಹಜರೀತಿಯಲ್ಲಿ ವ್ಯಾಪಾರ ನಡೆಸುತ್ತಾನೆ. ಅತ್ತರದ ಬಾಟ್ಲಿಯಿಂದ ಹಿಡಿದು ಕೃತಕ ಮುತ್ತುಗಳು ಮತ್ತು ಸುಂದರ ಬಟ್ಟೆಗಳ ವರೆಗೆ ಎಲ್ಲ ವಸ್ತುಗಳೂ ಅವನ ಮಾರಾಟದ ಸರಕುಗಳಾಗಬಲ್ಲವು. ತನ್ನ ಬಗೆಬಗೆಯ ಸರಕುಗಳ ಮೂಲಕ ಹೇಗೋ ಹಾಗೆಯೇ ತನ್ನ ಬಣ್ಣಬಣ್ಣದ ರುಮಾಲಿನ ಸಹಾಯದಿಂದ ಆತ ಗಿರಾಕಿಗಳನ್ನು ಆಕರ್ಷಿಸಿಕೊಳ್ಳುತ್ತಾನೆ. ಆತ ತನ್ನಷ್ಟೇ ಬಡವರಾದ ಜನರ ಹೊಲಸು ಗಲ್ಲಿಗಳಲ್ಲಿ ವಾಸಿಸುವನಾದರೂ ತಾಯ್ನಾಡಿನಲ್ಲಿಗಿಂತ ಇಲ್ಲಿ ಜೀವನ ಒಳ್ಳೆಯದು ಎಂದು ಅವನಿಗನಿಸುತ್ತದೆ. ಊಟದ ಹೊತ್ತಿನಲ್ಲಿ ಮಾತ್ರ ಚಪಾತಿ ಮತ್ತು ಬೇಳೆಯನ್ನು ಅವನು ಮರೆಯಲಾರ.

ಆಲ್‍ಗೇಟಿನಲ್ಲಿ ಒಂದು ಸಣ್ಣ ಖಾನಾವಳಿಯಿದೆ. ಅಲ್ಲಿ ವೈಭವವಿಲ್ಲ. ಉದ್ದನ್ನ ಕಟ್ಟಿಗೆಯ ಮೇಜುಗಳ ಮೇಲೆ ಬಟ್ಟೆ ಹಾಸಿರುವದಿಲ್ಲ. ಆದರೆ ಅಲ್ಲಿ ಐದು ಶಿಲಿಂಗುಗಳನ್ನು ಕೊಟ್ಟರೆ ಹೊಟ್ಟೆ ತುಂಬ ಚಪಾತಿ, ಬೇಳೆಸಾರು ಉಣ್ಣಬಹುದು. ಭಾರತೀಯ ನಾವಿಕರು ಮತ್ತು ಹೊತ್ತು ಮಾರುವವರು ಒಂದೆಡೆ ಸೇರುವ ಸಂಕೇತ ಸ್ಥಳ ಇದು. ಮನೆಯ ನೆನಪು ತೀವ್ರವಾದಾಗ, ಮನಸ್ಸು ತೀರ ಬೇಸರಗೊಂಡಾಗ ಇವರು ಅಲ್ಲಿಗೆ ಬರುತ್ತಾರೆ. ಇಲ್ಲಿಯೇ ನೆಲೆಸಬೇಕೆಂಬ ನಿರ್ಧಾರ, ಅದರಲ್ಲಿರುವ ವಿವೇಕಗಳು ಈ ಜನರನ್ನು ತೀರ ಭಾವನಾವಶರಾಗಲು ಬಿಡುವದಿಲ್ಲವಾದರೂ ಒಮ್ಮೊಮ್ಮೆ ಅವರಿಗೆ ತಮ್ಮ ಊರು, ತಮ್ಮ ಜನ, ತಮ್ಮ ಊಟ-ಹಬ್ಬ ಇತ್ಯಾದಿಗಳ ನೆನಪಾಗಿಯೇ ಆಗುವದು. ಆಗ ಅವರಿಗೆ ತಮ್ಮ ನಾಡಿನವರೇ ಆದ ಜನರೊಡನೆ ಬೆರೆತು ಉಂಡು ನಾಲ್ಕು ಮಾತನಾಡುವದರಲ್ಲಿ ಒಂದು ಬಗೆಯ ಸಮಾಧಾನ ದೊರಕುತ್ತದೆ.

ಜಗತ್ತಿನ ಅತಿದೊಡ್ಡ ಭೂಚರ ಪ್ರಾಣಿಯ
ಜೀವನ ಪರಿಚಯ

# ಆನೆಗಳ ಆದ್ಯಂತ

ಎಸ್. ಎಫ್. ಉಪ್ಪಿನ,
ರೇಂಜ್ ಫಾರೆಸ್ಟ್ ಆಫೀಸರ್

ಭಾರತದ ವನ್ಯಪಶುಗಳಲ್ಲಿ ಆನೆ ಅತಿ ದೊಡ್ಡ ಪ್ರಾಣಿ. ಅದರ ಸ್ಥೂಲ ದೇಹ, ಬೂದಿಗಪ್ಪು ಬಣ್ಣ, ಗಾಂಭೀರ್ಯದ ನಡಿಗೆ, ನೀಳವಾದ ಸೊಂಡಿಲು, ಅರ್ಧಚಂದ್ರನಂಥ ಕೋರೆಗಳು, ಸಣ್ಣ ಕಣ್ಣು, ಗಿಡ್ಡ ಬಾಲ, ಮೊರದಾಕಾರದ ಕಿವಿ, ಕಂಬದಂಥ ಕಾಲು— ಅದರದೇ ಆದ ವೈಶಿಷ್ಟ್ಯಗಳೆನ್ನಬಹುದು. ಆನೆಯು ನೋಡಲಿಕ್ಕೆ ಸುಂದರವಾದರೂ ಭಯ ಹುಟ್ಟಿಸುವ ಭವ್ಯ ಗಾತ್ರದ ಪ್ರಾಣಿ.

ಅತಿ ಪುರಾತನ ಕಾಲದಿಂದಲೂ ಆನೆಯು ನಮಗೆ ಪರಿಚಿತವಾದದ್ದು. ಅದರ ಆಕಾರ ಮತ್ತು ಬಲಕ್ಕೆ ಭಯಗೊಂಡು ನಮ್ಮ ಪೂರ್ವಜರು ಅದನ್ನು ದೇವಾಂಶವೆಂದು ತಿಳಿದುದರಲ್ಲಿ ಅಚ್ಚರಿಯಿಲ್ಲ. ಇಂದ್ರನ ಐರಾವತವೂ ಸಿರಿದೇವಿಯ ಗಜವೂ ನಮ್ಮ ವೇದ ಪುರಾಣಗಳಲ್ಲಿ ವಿಶೇಷವಾಗಿ ವರ್ಣಿಸಲ್ಪಟ್ಟಿವೆ. ಗಣಪತಿಗೆ ಗಜರಾಜನೆಂದು ಕರೆದದ್ದೂ ಆಗಿದೆ.

ರಾಮಾಯಣ ಮಹಾಭಾರತ ಕಾಲದಿಂದ ಇತ್ತೀಚಿನ ವರೆಗೆ ಕಾಡಾನೆಗಳನ್ನು ಹಿಡಿದು ಪಳಗಿಸಿ ಯುದ್ಧದಲ್ಲಿ ಉಪಯೋಗಿಸುವದಕ್ಕಾಗಿ ಅಣಿಮಾಡುವದು ನಮ್ಮ ದೇಶದ ರೂಢಿಯಾಗಿತ್ತು. ಗಜಬಲವು ಅಶ್ವಬಲ ಮತ್ತು ಕಾಲ್ಬಲಕ್ಕಿಂತಲೂ ಐತಿಹಾಸಿಕ ಕಾಲದಲ್ಲಿ ಮುಖ್ಯವಾಗಿತ್ತು. ಕನ್ನಡ ನಾಡಿನ ಹಿರಿಮೆಯನ್ನು ಇಂದಿಗೂ ಎತ್ತಿ ತೋರಿಸುವ ಹಾಳು ಹಂಪೆಯಲ್ಲಿ ಆನೆಗಳನ್ನು ಕಟ್ಟುತ್ತಿದ್ದ ಗಜಶಾಲೆಯನ್ನು ಈಗಲೂ ನೋಡಬಹುದು. ಆನೆಗಳನ್ನು ಸಾಕಿದ ಸಂಖ್ಯೆಯ ಮೇಲಿಂದ ಅರಸರ ಬಲ ಮತ್ತು ಯೋಗ್ಯತೆಗಳನ್ನು ಅಳೆಯುವ ಕಾಲವೂ ಭಾರತದಲ್ಲಿ ಒಮ್ಮೆ ಇತ್ತು. ಮೈಸೂರು, ತಿರುವಾಂಕೂರು, ಕೊಲ್ಹಾಪುರ ಮೊದಲಾದ ರಾಜಮನೆತನಗಳಲ್ಲಿ ಬೇಟೆ, ಸವಾರಿ, ಮೆರವಣಿಗೆಗಳ ಸಲುವಾಗಿ ಅನೇಕ ಆನೆಗಳು ಇರುತ್ತಿದ್ದವು. ಕೆಲವೊಂದು ಮಠಾಧೀಶರಲ್ಲಿ ಈಗಲೂ ಆನೆಗಳು ಉತ್ಸವಮೂರ್ತಿಗಳಾಗಿ ಉಳಿದಿವೆ. ಆನೆಗಳು ಬಲ, ಬುದ್ಧಿ ಮತ್ತು ಶ್ರೀಮಂತಿಕೆಯ ಚಿಹ್ನಗಳಾಗಿವೆ.



ಜಗತ್ತಿನಲ್ಲಿ ಒಟ್ಟು ಮೂರು ಜಾತಿಯ ಆನೆಗಳಿವೆ. ಇವುಗಳಲ್ಲಿ ಎರಡು ಜಾತಿಯವು ಆಫ್ರಿಕೆಯಲ್ಲಿವೆ, ಒಂದು ನಮ್ಮ ದೇಶದಲ್ಲಿದೆ. ಆಫ್ರಿಕೆಯ ಆನೆಗಿಂತಲೂ ನಮ್ಮ ದೇಶದ ಆನೆಯು ಗಾತ್ರದಲ್ಲಿ ಸಣ್ಣದು. ಹುಟ್ಟುವಾಗ್ಗೆ ರಕ್ತದ ದೋಷದಿಂದ ಆಕಸ್ಮಿಕವಾಗಿ ಆನೆಯ ಬಣ್ಣವು ಬಿಳಿಯಾಗಬಹುದು. ಆದರೆ ಇಂಥ ಬಿಳಿ ಬಣ್ಣದ ಆನೆ ಸಾವಿರದಲ್ಲಿಯೋ ಲಕ್ಷದಲ್ಲಿಯೋ ಒಂದು.

ಆನೆಗಳ ಎತ್ತರವನ್ನು ಮುಂಗಾಲಿನ ತುದಿಯಿಂದ ಭುಜದ ವರೆಗೆ ಅಳೆಯುತ್ತಾರೆ. ೧೦ ಫೂಟು ೬ ಇಂಚು ಮೀರಿ ಎತ್ತರವಿದ್ದ ಆನೆಗಳು ಅತಿ ವಿರಳ. ಪೂರ್ಣ ಬೆಳೆದ ಆನೆಗಳು ಸರಾಸರಿ ೯ ಫೂಟು ಎತ್ತರದವಿರುವವು. ಹೆಣ್ಣಾನೆಗಳು ಗಂಡಾನೆಗಳಿಗಿಂತ ಎತ್ತರದಲ್ಲಿ ಒಂದು ಫೂಟು ಕಡಿಮೆ ಬೆಳೆಯುತ್ತವೆ. ಆನೆಯ ತೂಕವು ೪-೫ ಟನ್ ಇರುವದು. ಕಾಡಿನಲ್ಲಿ ಆನೆಗಳ ಗಾತ್ರ ಮತ್ತು ಪ್ರಾಯವನ್ನು ಅವುಗಳು ತುಳಿದ ಹೆಜ್ಜೆಗಳ ಮೇಲಿಂದ ಊಹಿಸಬಹುದು. ಮುಂಗಾಲಿನ ಹೆಜ್ಜೆಯ ಪರಿಘದ ಇಮ್ಮಡಿಯು ಆನೆಯ ಎತ್ತರದ ಅಳತೆಯಾಗಿದೆ.

ವಾಡಿಕೆಯಾಗಿ ಗಂಡಾನೆಗಳಿಗೆ ಉದ್ದ ಮತ್ತು ಗಡುತರವಾದ ಎರಡು ಬಿಳೇ ಕೋಡುಗಳಿರುವವು. ಹೆಣ್ಣಾನೆಯ ಕೋರೆಗಳು ಮುಂದುವರಿಯುವದಿಲ್ಲ. ಕೋರೆಗಳಿದ್ದರೂ ಕೆಲವೇ ಇಂಚು ಉದ್ದವಾಗಿರುವವು. ಸಿಯಾಮದ ವಸ್ತುಸಂಗ್ರಾಲಯದಲ್ಲಿ ೯ ಫೂಟು ೧೦॥ ಇಂಚು ಉದ್ದವಾದ ಕೋರೆಗಳಿರುವವು. ಇಂಗ್ಲಂಡಿನ ಅರಮನೆಯಲ್ಲಿ ೮ ಫೂಟು ೯ ಇಂಚು ಉದ್ದ ಕೋರೆಗಳಿದ್ದು ಪ್ರತಿ ಕೋರೆಯ ತೂಕವು ೧೬೦ ಪೌಂಡು ಇರುವದು. ಹಸ್ತಿದಂತದ ಕೆತ್ತನೆಯ ಕೈಗಾರಿಕೆಗೆ ಈ ಕೋರೆಗಳನ್ನು ಬಹಳವಾಗಿ ಉಪಯೋಗಿಸುತ್ತಾರೆ. ಕೋರೆಯು ದೊಡ್ಡದಿದ್ದಷ್ಟು ಬೆಲೆಯುಳ್ಳದ್ದು. ಆನೆಗಳಿಗೆ ಮುಂದಿನ ಕಾಲುಗಳಿಗೆ ಐದು, ಹಿಂದಿನ ಕಾಲುಗಳಿಗೆ ನಾಲ್ಕು ಉಗುರುಗಳಿವೆ.

ಆನೆಗಳ ನಡಿಗೆಯ ವೇಗವು ಸಾಧಾರಣವಾಗಿ ಮನುಷ್ಯನ ತೀವ್ರ ನಡಿಗೆಯಷ್ಟಿರುತ್ತದೆ. ಆದರೆ ಇವು ತಾಸಿಗೆ ೨೦ ಮೈಲೂ ನಡೆಯಬಹುದು. ಇವುಗಳ ದೃಷ್ಟಿ ಅತಿ ಮಂದ; ಮೂಗು ಮತ್ತು ಕಿವಿಗಳು ತೀಕ್ಷ್ಣವಾದವು. ಇವುಗಳನ್ನು ಬೇಟೆಯಾಡುವಾಗ್ಗೆ ಗಾಳಿಯ ವಿರುದ್ಧ ದಿಕ್ಕಿನಲ್ಲಿ, ಸಪ್ಪಳ ಮಾಡದೇ, ಸಾವಕಾಶವಾಗಿ ಸಮೀಪಿಸಿ ಗುಂಡಿಕ್ಕಬೇಕಾಗುವದು. ಗುರಿ ಇಟ್ಟ ಗುಂಡು ಮಸ್ತಕ ಇಲ್ಲವೆ ಹೃದಯ ಸ್ಥಳವನ್ನು ಸೇರಬೇಕು.

ಕಾಡಾನೆಯ ಆಯುಷ್ಯವು ೧೦೦ ವರ್ಷವೆಂದು ಊಹಿಸಲಾಗಿದೆ. ಸಾಕು ಆನೆಗಳು ನೈಸರ್ಗಿಕ ಆವರಣದಲ್ಲಿಲ್ಲದಿರುವದರಿಂದ ಇಷ್ಟು ವರ್ಷ ಬದುಕುವದಿಲ್ಲ. ಕಾಡಾನೆಯ ಸಾವಿನ ಬಗ್ಗೆ ಅನೇಕ ಊಹೆಗಳಿವೆ. ಸಾವು ಸಮೀಪಿಸಿದಾಗ್ಗೆ ಆನೆಗಳು ನಿರ್ಜನ ಕಾಡುಪ್ರದೇಶವನ್ನು ಹುಡುಕಿ ಪ್ರಾಣಬಿಡುತ್ತವೆಂದು ಪ್ರತೀತಿಯುಂಟು. ದೀರ್ಘ ಕಾಲದ ವರೆಗೆ ಬದುಕುವ ಈ ಪ್ರಾಣಿಯ ಸಾವನ್ನು ಯಾರೂ ಕಂಡಿರಲಿಕ್ಕಿಲ್ಲ.

ಆನೆಗಳನ್ನು ಸಾಕುವದಾದರೆ ಅವು ಸಣ್ಣವಿರುವಾಗಲೇ ಹಿಡಿಯಬೇಕಾಗುವದು. ದೊಡ್ಡ ಆನೆಗಳನ್ನು ಪಳಗಿಸುವದು ಕಷ್ಟಸಾಧ್ಯ. ಇವುಗಳು ತಿರುಗಾಡುವ ದಾರಿಯಲ್ಲಿ ೧೨'×೧೨'×೧೨' ತಗ್ಗುಗಳನ್ನು ತೋಡಿ, ಮೇಲೆ ಒಡೆದ ಡವಗಿ ಬಿದಿರನ್ನು ಹೊಂದಿಸಿ ಮಣ್ಣು ಹರವಿ ಹುಲ್ಲು ಬೆಳೆಸಿ ಅವುಗಳಿಗೆ ತಿಳಿಯದ ಹಾಗೆ ಮಾಡಿ ಅವು ತಗ್ಗಿನಲ್ಲಿ ಬಿದ್ದಮೇಲೆ ಕೊರಳಿಗೆ ಹಗ್ಗದ ಮೆಲುವನ್ನು ಸಿಗಿಸಿ ಸಾಕಿದ ಆನೆಗಳಿಂದ ಮೇಲೆ ಎಳೆಸುತ್ತಾರೆ. ಬಿದ್ದ ಆನೆಗೆ ಪೆಟ್ಟು ಹತ್ತಬಾರದೆಂದು ತಗ್ಗಿನ ತಳವನ್ನು ೯'×೯' ಇಟ್ಟು ತಳದಲ್ಲಿ ಒಂದೆರಡು ಫೂಟು ದಪ್ಪ ಹುಲ್ಲಿನ ಹಾಸಿಗೆಯನ್ನು ರಚಿಸುತ್ತಾರೆ. ಮೇಲೆ ತೆಗೆಯುವಾಗ್ಗೆ ತಗ್ಗನ್ನು ಮಣ್ಣಿನಿಂದ ತುಂಬುತ್ತ ಬರುವರು. ಈ ಪದ್ಧತಿಯಲ್ಲಿ ಆನೆಗಳನ್ನು ಹಿಡಿಯುವದಕ್ಕೆ 'ತಗ್ಗಿನ ಪದ್ಧತಿ' ಎನ್ನುವರು.

'ಖೆಡ್ಡಾ ಪದ್ಧತಿ' ಯಲ್ಲಿ ಆನೆಯ ಹಿಂಡನು ಸುತ್ತುಗಟ್ಟಿ ಇಕ್ಕಟ್ಟಾದ ಕೊಳ್ಳದಲ್ಲಿ ಅವುಗಳನ್ನು ಹೊಗಿಸಿ ಮೊದಲೇ ತಯಾರಿಸಿದ ನಿರ್ದಿಷ್ಟ ಜಾಗೆಗೆ ಬಂದು ಒಳಹೊಕ್ಕ ಕೂಡಲೇ ಬಹು

ದೊಡ್ಡ ಹೆಬ್ಬಾಗಿಲ ಕದಗಳನ್ನು ಮುಚ್ಚುತ್ತಾರೆ. ಒಮ್ಮೊಮ್ಮೆ ಬಲಿಷ್ಠವಾದ ಗಂಡಾನೆಗಳು ಕದಗಳನ್ನು ಮುರಿದು ಹಿಂಡನ್ನೇ ಪಾರುಮಾಡುತ್ತವೆ.

ಪಳಗಿಸಿದ ಆನೆಗಳನ್ನು ಅರಣ್ಯಪ್ರದೇಶದಲ್ಲಿ ತೊಲೆ, ನಾಟುಗಳನ್ನು ಎಳೆಯುವದಕ್ಕೂ ವಾಹನಗಳಲ್ಲಿ ತುಂಬಲಿಕ್ಕೂ ನದಿಗಳಲ್ಲಿ ತೇಲುವ ನಾಟುಗಳನ್ನು ಸಾಗಿಸಲಿಕ್ಕೂ ಉಪಯೋಗಿಸುತ್ತಾರೆ. ಇನ್ನುಳಿದ ಕಾಡು ಪ್ರಾಣಿಗಳಿಗಿಂತ ಇವುಗಳಲ್ಲಿ ನೆನಪಿನ ಶಕ್ತಿ ಮತ್ತು ಬುದ್ಧಿಯು ತೀಕ್ಷ್ಣವಾಗಿರುವದರಿಂದ ಒಮ್ಮೆ ತರಬೇತು ಮಾಡಿದ ಆನೆಗಳಿಂದ ಬಲವಾದ ಮತ್ತು ಶ್ರಮದ ಕೆಲಸಗಳನ್ನು ಮಾಡಿಸಿಕೊಳ್ಳುವರು. ಇವುಗಳನ್ನು ಸಾಕುವದು ಮಾತ್ರ ವೆಚ್ಚದ ಕೆಲಸ. ಒಂದು ಆನೆಗೆ ತಿಂಗಳಿಗೆ ೪೦೦-೫೦೦ ರುಪಾಯಿ ವೆಚ್ಚ ತಗಲುತ್ತದೆ. ನಮ್ಮ ರಾಜ್ಯದ ಅರಣ್ಯಖಾತೆಯ ಅಧೀನದಲ್ಲಿ ತರಬೇತು ಹೊಂದಿದ ಅನೇಕ ಆನೆಗಳಿವೆ.

ಆನೆಗಳ ಆಹಾರವೆಂದರೆ ಹುಲ್ಲು, ಬಿದಿರು, ಗಿಡಗಳ ಎಳಕಾದ ರೆಂಬೆ ಮತ್ತು ಎಲೆ, ಕೆಲವು ಗಿಡಗಳ ತೊಗಟೆ ಮೊದಲಾದವು. ಎಷ್ಟೋ ಸಲ ಆನೆಗಳ ಹಿಂಡುಗಳು ಸಮೀಪದ ಹಳ್ಳಿಗಳ ಬೆಳೆಗಳ ಮೇಲೆ ಹಾವಳಿಮಾಡುತ್ತವೆ. ಆದರೆ ಹಳ್ಳಿಗಳಲ್ಲಿ ಹೊಕ್ಕು ಜನರನ್ನು ಪೀಡಿಸಿದ್ದಿಲ್ಲ. ಬೆಳೆದ ಆನೆಗಳಿಗೆ ೬೦೦-೭೦೦ ಪೌಂಡು ಹಸಿರು ಹುಲ್ಲು (ಮೇವು) ಬೇಕಾಗುತ್ತದೆ. ಸಾಕಿದ ಆನೆಗಳಿಗೆ ದಿನಕ್ಕೆ ೧೫-೨೦ ಪೌಂಡು ರಾಗಿಯ ಮುದ್ದೆ ಇಲ್ಲವೆ ಅನ್ನದ ಉಂಡೆಗಳನ್ನು ಮತ್ತು ತುಸು ಉಪ್ಪು, ಬೆಲ್ಲವನ್ನುಕೊಡುವದುಂಟು.

ಕಾಡು ಇಲ್ಲವೆ ಸಾಕಿದ ಗಂಡಾನೆಗಳಿಗೆ ಮತ್ತು ಅತಿವಿರಳವಾಗಿ ಹೆಣ್ಣಾನೆಗೆ ನಿರ್ದಿಷ್ಟ ಕಾಲದಲ್ಲಿ ಸರತಿಯ ಮೇಲೆ 'ಪ್ರಾಯದ ಮದ' ಬರುತ್ತದೆ. ಇದಕ್ಕೆ ಆನೆಗೆ 'ಮಸ್ತ' ಬಂದಿದೆ ಎನ್ನುತ್ತಾರೆ. ಈ ಮಸ್ತವು ಅವುಗಳ ಪ್ರಾಯಕ್ಕೆ ಸಂಬಂಧಿಸಿದ್ದಿರುವದು. ಬಹುಶಃ ಈ ಸ್ಥಿತಿ ಕಾಮತೃಪ್ತಿ ಪೂರ್ಣವಾಗದೆ ಇದ್ದಾಗ್ಗೆ ಮತ್ತು ಚಳಿಗಾಲದಲ್ಲಿ ಕಾಣಿಸಿಕೊಳ್ಳುತ್ತದೆ. ಆನೆಗಳಿಗೆ 'ಮಸ್ತ' ಬಂದಾಗ್ಗೆ ಅವುಗಳ ಮಸ್ತಕದಲ್ಲಿದ್ದ ಛಿದ್ರದಿಂದ ಒಂದು ತರದ ಜಿಗಟಾದ ಕಪ್ಪು ದ್ರವವು ಸೋರುತ್ತದೆ. ಪ್ರಾಯದ ಹುಚ್ಚು, ಹೆಣ್ಣು ಗಂಡು ಆನೆಗಳು ಸಹವಾಸದಲ್ಲಿದ್ದಾಗ್ಗೆ ಅಷ್ಟೊಂದು ಕಾಣಿಸಿಕೊಳ್ಳುವದಿಲ್ಲ. ಯಾಕೆಂದರೆ ಹೆಣ್ಣಿನ ಸಹವಾಸವು ಗಂಡಿನ ಹುಚ್ಚನ್ನು ಕೆಲವೊಂದು ಮಟ್ಟಿಗೆ ಬಿಡಿಸುತ್ತದೆ. ಆದರೆ ಒಂಟಿ ಗಂಡು ಮಾತ್ರ 'ಮಸ್ತ' ಬಂದಾಗ್ಗೆ ಕೋಪಿಷ್ಠವಾಗಿ ಏನನ್ನಾದರೂ ಮಾಡಬಹುದು. ಎಷ್ಟೋ ಸಲ ಆಳವಿನಲ್ಲಿ ಇಟ್ಟುಕೊಳ್ಳಬೇಕೆಂಬ ಮಾವು ತನನ್ನು ಕೊಂದದ್ದುಂಟು.

ಹೆಣ್ಣಾನೆಯ ಗರ್ಭಧಾರಣವು ೩೦ ವರ್ಷ ಪ್ರಾಯಕ್ಕೆ ಬಂದ ಮೇಲೆ ಪ್ರಾರಂಭವಾಗುತ್ತದೆ. ವಾಡಿಕೆಯಾಗಿ ಗಂಡಿನ ಸಂಯೋಗವಾದ ೨೦ ತಿಂಗಳ ಮೇಲೆ ಮರಿಯನ್ನು ಈಯುತ್ತದೆ. ಪ್ರತಿ ಸಲವೂ ಒಂದೇ ಮರಿ ಹುಟ್ಟುತ್ತದೆ. ಎರಡು ಮೂರು ಮರಿಗಳು ಹುಟ್ಟಿದ ಉದಾಹರಣೆಗಳು ಅತಿ ವಿರಳ. ತನ್ನ ನೂರು ವರ್ಷ ಆಯುರ್ಮಾನದಲ್ಲಿ ತೊಂಬತ್ತು ವರ್ಷಗಳ ವರೆಗೂ ಹೆಣ್ಣಾನೆಯು ಮರಿಗಳನ್ನು ಈಯಬಹುದು. ಆದರೆ ಈ ಅವಧಿಯಲ್ಲಿ ಅದು ೫-೬ ಸಲವಷ್ಟೇ ಗರ್ಭಧಾರಣ ಮಾಡುತ್ತದೆ. ಗೊತ್ತಿದ್ದ ಪಶುಗಳಲ್ಲಿ ಎಲ್ಲಕ್ಕೂ ಸಾವಕಾಶವಾಗಿ ಬಳಗವನ್ನು ಬೆಳೆಯಿಸುವ ಪ್ರಾಣಿ ಎಂದರೆ ಆನೆ ಮಾತ್ರ. ಹೀಗಿದ್ದೂ ಎರಡೂ ಆನೆಗಳಿಂದ ೭೫೦ ವರ್ಷಗಳಲ್ಲಿ ೧,೯೦,೦೦,೦೦೦ ಆನೆಗಳು ಹುಟ್ಟಿ ಜೀವಿಸಬಹುದು. ಆದರೆ ನಿಸರ್ಗದ ಅಡೆತಡೆಗಳಲ್ಲಿ ಇವೆಲ್ಲವೂ ಬದುಕಿ ಬಾಳಬೇಕಲ್ಲ! ಮರಿಗಳ ರಕ್ಷಣೆ ಮತ್ತು ಜೋಪಾಸನೆಯಲ್ಲಿ ಇನ್ನುಳಿದ ಹೆಣ್ಣಾನೆಗಳೂ ತಾಯಿ ಆನೆಗೆ ಸಹಾಯ ಸಲ್ಲಿಸುತ್ತವೆ. ಹುಟ್ಟಿದ ಕೆಲವೇ ತಾಸುಗಳಲ್ಲಿ ಮರಿ ಆನೆಯು ನಡೆಯಲಿಕ್ಕೆ ಪ್ರಾರಂಭ ಮಾಡುತ್ತದೆ. ಮರಿಯು ಬಾಯಿಯಿಂದ (ಸೊಂಡಿಲದಿಂದಲ್ಲ) ಮೊಲೆ ಕುಡಿಯುತ್ತದೆ. ಅಂಜಿದಾಗ್ಗೆ ತಾಯಿಯ ಬುಡದಲ್ಲಿ ಸೇರುತ್ತದೆ.

ದೇಹವು ಸ್ಥೂಲವಾಗಿದ್ದರೂ ಆನೆಗಳು ಚಟು

ವಟಿಕೆಯುಳ್ಳವು. ಗುಡ್ಡಗಾಡಿನಲ್ಲಿ ಕಡಿದಾದ ಏರಿಳುಕಲುಗಳನ್ನು ಅನಾಯಾಸವಾಗಿ ಹತ್ತಿ ಇಳಿಯುತ್ತವೆ. ಆರ್ದ್ರತೆಯುಳ್ಳ ಮತ್ತು ತಂಪಾದ ನಿಬಿಡ ಅರಣ್ಯಗಳಲ್ಲಿ ವಿಪುಲ ಆಹಾರ ಮತ್ತು ನೀರಿದ್ದ ಸ್ಥಳಗಳನ್ನು ಆಯ್ದು ವಾಸಿಸುತ್ತವೆ. ಬಿದಿರು ಬೆಳೆಯುವ ಬೆಟ್ಟಗಳಲ್ಲಿ ಮತ್ತು ಸದಾ ಹರಿಯುವ ನದಿಗಳ ಕೊಳ್ಳಗಳಲ್ಲಿ ಇವು ವಿಶೇಷವಾಗಿ ಕಂಡುಬರುತ್ತವೆ. ಆಹಾರದ ಸಲುವಾಗಿ ಇವು ಬಹು ದೂರದ ವರೆಗೆ ಅಲೆಯುತ್ತವೆ. ದಕ್ಷಿಣ ಭಾರತದಲ್ಲಿ ಮಲಬಾರ, ಮೈಸೂರಿನ ಕೊಡಗು, ಮೈಸೂರು, ಕಾರವಾರ, ಶಿವಮೊಗ್ಗೆ ಜಿಲ್ಹೆಗಳಲ್ಲಿ ಇವು ಹೆಚ್ಚಾಗಿವೆ. ಅಕಸ್ಮಾತ್ತಾಗಿ ಹಾಸನ, ಚಿಕ್ಕಮಗಳೂರು ಜಿಲ್ಹೆಗಳ ಅಡವಿಗಳಲ್ಲಿಯೂ ಅಲೆದುಬರುತ್ತವೆ.

ಆನೆಗಳು ಹಿಂಡುಗಟ್ಟಿ ತಿರುಗಾಡುವ ಪ್ರಾಣಿಗಳು. ಒಂದು ಹಿಂಡಿನಲ್ಲಿ ೫೦ ರಿಂದ ೬೦ ರ ವರೆಗೂ ಇರುವವು. ಮತ್ತು ಇವೆಲ್ಲವೂ ಒಂದೇ ಕುಟುಂಬದವು. ಒಂದು ಹಿಂಡಿನ ಆನೆಯು ಮತ್ತೊಂದು ಹಿಂಡಿನ ಆನೆಗಳನ್ನು ಕೂಡಿಕೊಳ್ಳುವದಿಲ್ಲ. ಆಹಾರದ ಕೊರತೆ ಇದ್ದಾಗ್ಗೆ ಹಿಂಡು ಒಡೆದು ಬೇರೆಯಾಗಬಹುದು. ಆದರೆ ಅನುಕೂಲ ಪರಿಸ್ಥಿತಿಯು ಒದಗಿದಾಗ್ಗೆ ಮತ್ತೆ ಕೂಡಿಕೊಳ್ಳುವವು. ಕೋರೆಯುಳ್ಳ ದೊಡ್ಡ ಗಂಡಾನೆಯು ಹಿಂಡಿನ ತುಸು ಅಂತರದಲ್ಲಿ ಉಳಿಯಬಹುದು ಇಲ್ಲವೆ ಒಂಟಿಯಾಗಿಯೂ ತಿರುಗಾಡಬಹುದು. ಹೆಣ್ಣಾನೆಗಳು ಬೆದೆಗೆ ಬಂದಾಗ್ಗೆ ಗಂಡಾನೆಯು ಹಿಂಡನ್ನು ಸೇರಿ ತನ್ನ ಕಾಮತೃಪ್ತಿಯನ್ನು ಮಾಡಿಕೊಂಡು ಮತ್ತೆ ಹಿಂಡನ್ನು ಅಗಲುವದು.

ಎಷ್ಟೋ ಸಲ ಸಾಕಿದ ಆನೆಗಳೂ ತಪ್ಪಿಸಿಕೊಂಡು ಹಿಂಡನ್ನು ಕೂಡುತ್ತವೆ. ಇದು ನಿಸರ್ಗದತ್ತ ಸ್ವೇಚ್ಛಾಹಾರಿ ಗುಣದ ಎಳೆತ ! ಆನೆಗಳು ದೂರದಲ್ಲಿ ನಡೆಯುವಾಗ್ಗೆ ಒಂದರ ಹಿಂದೊಂದು ಸಾಲಿನಲ್ಲಿ ಸಾಗುತ್ತವೆ. ಹಿರಿಯ ಹೆಣ್ಣಾನೆಯು ಸಾಲಿನ ಮುಂಭಾಗದಲ್ಲಿಯೂ ಕೋರೆಯ ಗಂಡಾನೆಯು ಸಾಲಿನ ಹಿಂಭಾಗದಲ್ಲಿಯೂ ಉಳಿಯುತ್ತವೆ. ಆನೆಗಳು ಅರಣ್ಯದಲ್ಲಿ ತಮ್ಮದೇ ಆದ ದಾರಿಗಳನ್ನು ಪಯೋಗಿಸುತ್ತವೆ. ಈ ದಾರಿಗಳು ಅಷ್ಟೊಂದು ಕಡಿದಾದ ಏರಿಳಿವಿನಲ್ಲಿ ಇರುವದಿಲ್ಲ. ಆನೆಗಳು ವಲಸೆ ಹೋಗುವ ಸ್ಥಳಗಳು, ಮೇಯುವ ಪ್ರದೇಶಗಳು ಮತ್ತು ತಿರುಗಾಡುವ ದಾರಿಗಳು ನಿರ್ದಿಷ್ಟವಾದವುಗಳಿರುವವು

ಇವು ನಿತ್ಯವಾಗಿ ಸೂರ್ಯೋದಯಕ್ಕೆ ನೀರು ಕುಡಿದು, ಮಿಂದು ಮೈಮೇಲೆ ಧೂಳಿ ಹಾರಿಸಿಕೊಂಡು ೩-೪ ತಾಸು ಮೇಯುತ್ತವೆ. ಮಧ್ಯಾಹ್ನದಲ್ಲಿ ೨-೩ ಘಂಟೆಯ ವರೆಗೆ ಬಿಸಲಿನಲ್ಲಿ ನೆರಳು ಹುಡುಕಿ ನಿಂತು ಅರೆ ಕಣ್ಣು ಮುಚ್ಚಿ ಇಲ್ಲವೆ ಅಡ್ಡ ಬಿದ್ದು ಕಾಲು ಚಾಚಿ ವಿಶ್ರಮಿಸುತ್ತವೆ. ಆಮೇಲೆ ಸಾಯಂಕಾಲದ ವರೆಗೆ ಮೇಯ್ದು ಮತ್ತೆ ನೀರು ಕುಡಿದು, ಮಿಂದು, ಧೂಳಿ ಹಾರಿಸಿಕೊಂಡು ಮಧ್ಯ ರಾತ್ರಿಯ ವರೆಗೆ ಮೇಯುತ್ತವೆ. ಮುಂದೆ ಬೆಳಗಿನ ಜಾವದ ವರೆಗೆ ಅಡ್ಡಬಿದ್ದು ಗಾಢ ನಿದ್ರೆ ಮಾಡುತ್ತವೆ. ಕೆಲವು ಸಲ ಗೊರಕೆಯನ್ನೂ ಹೊಡೆಯುತ್ತವೆ. ಇವು ಆಳವಾದ ಸೆಳವಿದ್ದ ನದಿಗಳಲ್ಲಿಯೂ ಈಸಬಲ್ಲವು. ಕಾಡುಗಳಲ್ಲಿ ಆನೆಗಳ ಇರುವಿಕೆಯನ್ನು ದೂರದಿಂದಲೇ ಗುರುತಿಸಬಹುದು. ಕಾರಣ ಇವು ಯಾವಾಗಲೂ ಗಿಡಗಳ ರಂಬೆಗಳನ್ನು ಮುರಿಯುತ್ತ ಇಲ್ಲವೆ ಬಿದಿರುಗಳನ್ನು ಜಗ್ಗುತ್ತ ಗಲಾಟೆ ಎಬ್ಬಿಸುತ್ತವೆ. ಏನಾದರೂ ಸಂಶಯ ಬಂದಲ್ಲಿ ಒಮ್ಮೆಲೇ ನಿಶ್ಯಬ್ದವಾಗಿ ನಿಲ್ಲುತ್ತವೆ. ಗಾಯಗೊಂಡ ಮತ್ತು ಮರಿ ಇದ್ದ ಆನೆಗಳನ್ನು ಸಮೀಪಿಸುವದು ಗಂಡಾಂತರದ್ದು. ಗಾಯಗೊಂಡ ಆನೆಯನ್ನು ಬೆನ್ನಟ್ಟಿ ಹೊಡೆಯುವದು ಸಾಮಾನ್ಯರ ಕೆಲಸವಲ್ಲ. ಸಾಕಿದ ಆನೆಗಳನ್ನೂ ಚೆನ್ನಾಗಿ ನಡೆಯಿಸಿಕೊಳ್ಳದೆ ಪೀಡಿಸಿದರೆ ಇಲ್ಲವೆ ದಿನದ ಆಹಾರ ಪೇಯಗಳನ್ನು ಪೂರ್ತಿಯಾಗಿ ಕೊಡದಿದ್ದರೆ ಸಾಕಿದ ಮಾವುತನನ್ನು ಸಹ ಕೊಂದ ಉದಾಹರಣೆಗಳಿವೆ.



# ಎಥಿಯೋಪಿಯ

**ಮುಸಲೋನಿಯ ದಾಳಿಯಿಂದಾಗಿ**
**ಈ ಆಫ್ರಿಕನ್ ರಾಷ್ಟ್ರ ೨೦ ವರ್ಷಗಳ ಹಿಂದೆ ಒಮ್ಮೆಲೇ**
**ಜಗತ್ತಿನ ಲಕ್ಷ್ಯಕ್ಕೆ ಬಂತು. ಆ ದಾಳಿ ಒಂದು ರೀತಿಯಿಂದ ಒಳಿತನ್ನೇ ಮಾಡಿತು.**

ಸಾರ್ವಭೌಮರ ಧ್ವಜವನ್ನು ಹೊತ್ತ ರೋಲ್ಸ ರ್ಯಾಸ್ ಕಾರೊಂದು ಭರ್ರನೆ ಬೀದಿಯಲ್ಲಿ ಬರುತ್ತದೆ. ಬೀದಿಯಲ್ಲಿದ್ದ ಜನರೆಲ್ಲ ರಸ್ತೆಯಲ್ಲಿ ಸಾಷ್ಟಾಂಗ ಹಾಕುತ್ತಾರೆ. ಬೇರೆ ಬೇರೆ ದಿಕ್ಕುಗಳಲ್ಲಿ ಓಡುತ್ತಿದ್ದ ಕಾರುಗಳೆಲ್ಲ ಗಕ್ಕನೆ ನಿಲ್ಲುತ್ತವೆ. ಒಳಗಿದ್ದವರು— ಎಥಿಯೋಪಿಯನ್ನರು, ಬ್ರಿಟಿಶರು, ಅಮೇರಿಕನ್ನರು, ಇಟಾಲಿಯನ್ನರು, ಫ್ರೆಂಚರು, ಎಲ್ಲರೂ— ಕಾರುಗಳಿಂದಿಳಿದು ಟೊಂಕದ ವರೆಗೆ ಬಗ್ಗಿ ಮುಜುರೆ ಮಾಡುತ್ತಾರೆ. ರೋಲ್ಸ ರ್ಯಾಸ್ ಕಾರಿನಲ್ಲಿ ಕುಳಿತಿರುವ ಎಥಿಯೋಪಿಯಾದ ಚಕ್ರವರ್ತಿ ಹೇಲೆ ಸಿಲಾಸಿ ಸಕಲರಿಗೂ ಪ್ರತಿವಂದನೆ ಸಲ್ಲಿಸುತ್ತಾರೆ. ರೋಲ್ಸರ್ಯಾಸ ಮುಂದಕ್ಕೋಡುತ್ತದೆ.



ತಂತಮ್ಮ ರಾಜ್ಯದ ಅಧಿಪತಿಗಳು ಎದುರು ಬಂದಾಗ ಸಹ ಈ ರೀತಿ ಕಾರಿನಿಂದಿಳಿದು ಮುಜುರೆ ಮಾಡದ ವಿದೇಶೀಯರನ್ನು "ಇದೇನು ?" ಎಂದು ಕೇಳಿದರೆ ಅವರು ಕೊಡುವ ಉತ್ತರವಿದು: "ನಮ್ಮಲ್ಲಿ ರಾಷ್ಟ್ರಾಧ್ಯಕ್ಷರಾಗಲಿ, ಅರಸರಾಗಲಿ ಬೀದಿಯಲ್ಲಿ ಕಾಣಿಸಿಕೊಂಡಾಗ ನಾವೇನೂ ಹೀಗೆ ಮಾಡುವದಿಲ್ಲ, ನಿಜ. ಆದರೆ ಈ ಚಕ್ರವರ್ತಿ— ಹೇಲೆ ಸಿಲಾಸಿ— ಬೇರೆಯೇ ಆಗಿದ್ದಾರೆ."

ಎಥಿಯೋಪಿಯ ಆಧುನಿಕ ದೃಷ್ಟಿಯಿಂದ ತೀರ ಹಿಂದುಳಿದ ದೇಶ. ಅಲ್ಲಿ ಈಗಿತ್ತಲಾಗಿ ಅಂದರೆ ದ್ವಿತೀಯ ಜಾಗತಿಕ ಯುದ್ಧದ ನಂತರ (೧೯೪೫) ತುಂಬ ಸುಧಾರಣೆಗಳಾಗಿರುವವಾದರೂ ಅದು ಆಧುನಿಕ ಜಗತ್ತಿನ ಮಟ್ಟಕ್ಕೆ ಬರಲು ಇನ್ನೂ ಕಾಲಾವಕಾಶ ಬೇಕು. ಅನೇಕಾನೇಕ ಸುಧಾರಣೆಗಳಾಗಬೇಕು. ಎಥಿಯೋಪಿಯದಲ್ಲಿ ಚಕ್ರವರ್ತಿ ಹೇಲೆ ಸಿಲಾಸಿಯೇ ಸರ್ವಾಧಿಕಾರಿ. ಏನಾಗಬೇಕಾದರೂ ಅವರ ಸಮ್ಮತಿ ಬೇಕು. ಹೀಗಿದ್ದರೂ ಅವರು ತಮ್ಮ ದೇಶಕ್ಕಾಗಿ, ತಮ್ಮ ಪ್ರಜೆಗಳ ಕಲ್ಯಾಣಕ್ಕಾಗಿ ತಮಗೆ ಸಾಧ್ಯವಾದದ್ದನ್ನೆಲ್ಲ ಮಾಡುತ್ತಿದ್ದಾರೆ ಎಂದು ಎಥಿಯೋಪಿಯದಲ್ಲಿರುವ ವಿದೇಶೀಯರೂ ಒಪ್ಪುತ್ತಾರೆ.

ಎಥಿಯೋಪಿಯದಲ್ಲೊಂದು ಇಡೀ ಆಫ್ರಿಕೆಯಲ್ಲಿಲ್ಲದ ಸೋಜಿಗದ ಮಾತು ಎದ್ದು ಕಾಣಿಸುತ್ತದೆ. ಉಳಿದೆಡೆಗಳಲ್ಲಿ ಆಫ್ರಿಕನ್ನರು ಯುರೋಪಿಯನ್ನರಿಗೆ ಆಳಾಗಿ ದುಡಿಯುತ್ತಿದ್ದರೆ ಎಥಿಯೋಪಿಯದಲ್ಲಿ ಯುರೋಪಿಯನ್ನರು ಆಳಾಗಿ ದುಡಿಯುತ್ತಾರೆ. ಎಥಿಯೋಪಿಯದಲ್ಲಿ ಆಧುನಿಕ

ಶಾಸ್ತ್ರಗಳಲ್ಲಿ ತಜ್ಞರಾದವರು ತೀರ ವಿರಳ. ಅಲ್ಲಿ ಬ್ರಿಟಿಶ್ ಜನರು ಎಥಿಯೋಪಿಯದ ಸೈನ್ಯಗಳಿಗೆ ತರಬೇತಿ ಕೊಡುತ್ತಾರೆ. ಸ್ವೀಡಿಶ್ ಜನರು ವಿಮಾನದಳ, ಪೋಲೀಸು ದಳ ಮತ್ತು ಚಕ್ರವರ್ತಿಗಳ ಅಂಗರಕ್ಷಕ ದಳಗಳಿಗೆ ಶಿಕ್ಷಣ ವೀಯುತ್ತಾರೆ. ಬ್ರಿಟಿಶ್ ಮತ್ತು ಕೆನೆಡಿಯನ್ನರು ಶಾಲೆ, ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣವೀಯುತ್ತಾರೆ. ರಶಿಯನ್ ಮತ್ತು ಯುಗೋಸ್ಲಾವ್ ಡಾಕ್ಟರರಿದ್ದಾರೆ. ರೇಲ್ವೆಗಳಲ್ಲಿ ಫ್ರೆಂಚ ಅಧಿಕಾರಿಗಳಿದ್ದಾರೆ. ಕರ್ನಾಟಕದವರಾದ ಶ್ರೀ ಎ. ಸಿ. ಶಾಮರಾಯರು ಅಲ್ಲಿ ಕೆಲ ವರ್ಷ ಶಿಕ್ಷಣ ಶಾಖೆಯ ಅಧಿಕಾರಿಗಳಾಗಿ ದುಡಿದದ್ದೂ ಇದೆ.

ಎಥಿಯೋಪಿಯದ ರಾಜಧಾನಿ ಅಡಿಸ್ ಅಬಾಬಾದಿಂದ ಜಬೂತಿ ಬಂದರದ ವರೆಗೆ ಇರುವ ೪೮೬ ಮೈಲುದ್ದದ ಎಥಿಯೋಪಿಯದ ಒಂದೇ ಒಂದು ರೈಲುದಾರಿ ಫ್ರೆಂಚರ ಒಡೆತನದಲ್ಲಿದೆ. ಜಗತ್ತಿನಲ್ಲಿ ಇದರಷ್ಟು ವೆಚ್ಚದ ರೈಲುದಾರಿಯೇ ಇಲ್ಲವೆನ್ನುತ್ತಾರೆ. ವಿಮಾನ ಸರ್ವೀಸುಗಳ ಒಡೆತನ ಅಮೇರಿಕನ್ನರದಿದೆ.

ಎಥಿಯೋಪಿಯದ ಅತಿದೊಡ್ಡ ರಾಸ್ ದೆಸ್ತಾ ಆಸ್ಪತ್ರೆಯ ಆಡಳಿತವೆಲ್ಲ ಇಟಾಲಿಯನ್ನರ ಕೈಯಲ್ಲಿದೆ. ಇಟಾಲಿಯನ್ನರು ಎಥಿಯೋಪಿಯದ ಮೇಲೆ ದಾಳಿ ಮಾಡಿ ಅದನ್ನು ಆಕ್ರಮಿಸಿದಾಗ ಅವರನ್ನು ಪ್ರತಿಭಟಿಸಿದ ಎಥಿಯೋಪಿಯನ್ ನಾಯಕ ರಾಸ್ ದೆಸ್ತಾ ಎಂಬಾತನ ಹೆಸರಿನಲ್ಲಿ ಈ ಆಸ್ಪತ್ರೆ ನಡೆಯುತ್ತಿದೆ! ಯುದ್ಧ ಕಾಲದಲ್ಲಿ ರಾಸ್ ದೆಸ್ತಾ ಇಟಾಲಿಯನ್ನರಿಂದ ಹತನಾದರೂ ಆಸ್ಪತ್ರೆ ಅವರ ಆಡಳಿತದಲ್ಲಿರುವದು ಒಂದು ವಿಶೇಷ. ಏಕೆಂದರೆ ಎಥಿಯೋಪಿಯನ್ನರು ಇಂದಿಗೂ ಮುಸೋಲಿನಿಯ ನೆನಪು ಬಂದೊಡನೆ ಉರಿದೇಳುತ್ತಾರೆ. ಹಾಗಿದ್ದರೂ ಎಥಿಯೋಪಿಯವನ್ನು ಸುಧಾರಿಸಲು ಇಟಾಲಿಯನ್ನರು ಕೋಟಿಗಟ್ಟಲೆ ಹಣವನ್ನು ತಂದು ಸುರಿದರು ಎಂಬ ಮಾತು ಮಾತ್ರ ನಿಜ.

ಚಕ್ರವರ್ತಿಗಳ ಕುಟುಂಬ ಅತಿ ಶ್ರೀಮಂತ ಕುಟುಂಬ. ಹೆಲೆ ಸಿಲಾಸಿಯವರಲ್ಲಿ ಮಾತ್ರ ಹಣದ ಮೋಹ ಕಂಡುಬರುವದಿಲ್ಲ. ಸಾರ್ವಜನಿಕ ಕೆಲಸಗಳಿಗಾಗಿ ಚಕ್ರವರ್ತಿಗಳು ತಮ್ಮ ಖಾಸಗಿ ಹಣವನ್ನು ಯಾವಾಗಲೂ ಕೊಡುತ್ತಿರುತ್ತಾರೆ. ಯಾವದಾದರೊಂದು ಸ್ಥಳದಲ್ಲಿ ಒಂದು



ಒಳ್ಳೆಯ ಆಸ್ಪತ್ರೆಯೋ ಶಾಲೆಯೋ ಇರುವದು ಅವಶ್ಯವೆಂದೆನಿಸಿದಾಗ ಚಕ್ರವರ್ತಿಗಳು ತಟ್ಟನೆ ಮುಂಬಾಗಿ ಅದಕ್ಕೆ ಬೇಕಾದ ಹಣವನ್ನು ತಮ್ಮ ಖಾಸಗಿ ಬೊಕ್ಕಸದಿಂದ ಒದಗಿಸಿಬಿಡುತ್ತಾರೆ.

ಯಾರನ್ನೂ ಸಂಪೂರ್ಣವಾಗಿ ನಂಬದ ಈ ಚಕ್ರವರ್ತಿ ಪ್ರತಿಯೊಂದು ಕೆಲಸವನ್ನೂ ಸ್ವತಃ ನೋಡಿಕೊಳ್ಳುತ್ತಾರೆ. ಹೇಲೆ ಸಿಲಾಸಿಯ ಸರಕಾರವೆಂದರೆ ವೈಯಕ್ತಿಕವಾದ ಅರಮನೆ ಸರಕಾರ. ಅಧಿಕಾರವೆಲ್ಲವೂ ಇಲ್ಲಿ ಕೇಂದ್ರೀಕೃತವಾಗಿದೆ. ದೇಶದ ಸುಧಾರಣೆಗಾಗಿ ಸಾಕಷ್ಟು ತಜ್ಞರ ಕೊರತೆಯಿರುವದಾದರೂ ಹೇಲೆ ಸಿಲಾಸಿ ತಮಗೆ ಸಾಧ್ಯವಿರುವದನ್ನೆಲ್ಲ ಮಾಡುತ್ತಿದ್ದಾರೆ. ಅವರು ನಿಸ್ಸೀಮ ದೇಶಭಕ್ತರು. ಎಥಿಯೋಪಿಯನ್ನರೆಲ್ಲ ಆಧುನಿಕ ಜಗತ್ತಿನ ಜನರ ಮಟ್ಟಕ್ಕೆ ಬರಬೇಕು ಎಂಬುದು ಅವರ ಹಂಬಲ.

ಇಟಲಿಯು ಎಥಿಯೋಪಿಯುವನ್ನು ಆಕ್ರಮಿಸಿದ ಐದು ವರ್ಷಗಳ ಕಾಲ (೧೯೩೬-೪೧) ಚಕ್ರವರ್ತಿ ಹೇಲೆ ಸಿಲಾಸಿ ಇಂಗ್ಲಂಡಿನಲ್ಲಿ ವಾಸವಾಗಿದ್ದರು. ಮೊದಲು ಕೆನ್ಸಿಂಗ್ಟನ್‌ದಲ್ಲಿ, ಬಳಿಕ ಬಾಥ್‌ದಲ್ಲಿ ಅವರಿದ್ದರು. ಅವರು ಏಕಾಂತ ಜೀವನ ನಡೆಸುತ್ತಿದ್ದರಿಂದಲೂ ಕ್ವಚಿತ್ತಾಗಿ ಸಾರ್ವಜನಿಕರೆದುರು ಬರುತ್ತಿದ್ದರಿಂದಲೂ ಅವರು ಜನಪ್ರಸಿದ್ಧಿ ಪಡೆಯಲಿಲ್ಲ

ಅವರ ಮಕ್ಕಳು ಇಂಗ್ಲಂಡಿನಲ್ಲಿ ಶಿಕ್ಷಣ ಪಡೆದಿದ್ದಾರೆ. ಯುವರಾಜ ಮೆರಿಡ್ ಅಝುಮಕ್ ಅಸ್ಫಾ-ಉಪೆನ್‌ರು ಲಿವರಪೂಲ್ ವಿಶ್ವವಿದ್ಯಾಲಯದಲ್ಲಿ ಶಿಕ್ಷಣ ಮುಗಿಸಿದ್ದಾರೆ ಚಕ್ರವರ್ತಿಗಳ ಮಗಳು ರಾಜಕುವರಿ ಶೇಹಿ ಪೆಂಝ್ಯಾನ್ಸದಲ್ಲಿ ಶಿಕ್ಷಣ ಪಡೆದು ಅನಂತರ ಲಂಡನ್ನಿನ ಗಾಯ್ಸ್ ಆಸ್ಪತ್ರೆಯಲ್ಲಿ ವಿದ್ಯಾರ್ಥಿ ದಾದಿಯಾಗಿದ್ದಳು.

ಬ್ರಿಟಿಶರು ೧೯೪೧ ರಲ್ಲಿ ಎಥಿಯೋಪಿಯವನ್ನು ವಿಮೋಚನಗೊಳಿಸಿದಾಗ ಹೇಲೆ ಸಿಲಾಸಿ ತಿರುಗಿ ಅಲ್ಲಿಗೆ ಹೋಗುವಂತಾಯಿತು. ಅವರು ಇಂಗ್ಲಂಡಿನ ಆತಿಥ್ಯವನ್ನು ಮರೆಯಲಿಲ್ಲ. ಇಂಗ್ಲಂಡಿನಲ್ಲಿ ೧೯೫೩ರಲ್ಲಿ ಮಹಾಪೂರದಿಂದ ಅನಾಹುತವೊದಗಿದಾಗ ಅವರು ತುಂಬ ಧನಸಹಾಯ ಮಾಡಿದರು.

೧೯೫೪ ರಲ್ಲಿ ಅವರು ಅಮೇರಿಕ, ಮೆಕ್ಸಿಕೊ ಮತ್ತು ಕಾನಡಾಗಳಲ್ಲಿ ಸಂಚರಿಸಿ ಬಂದರು.

ಎಥಿಯೋಪಿಯ ಇಂಗ್ಲಂಡಿಗಿಂತ ಆರು ಪಟ್ಟು ದೊಡ್ಡದಾದ ರಾಜ್ಯ. ಇಲ್ಲಿ ಇದುವರೆಗೆ ಒಮ್ಮೆಯೂ ಜನಗಣತಿ ನಡೆದಿಲ್ಲವಾದರೂ ಜನಸಂಖ್ಯೆ ಎರಡು ಕೋಟಿಯಿರಬೇಕು ಎಂದು ಅಂದಾಜಿದೆ. ಇಲ್ಲಿಯ ಪಶುಸಂಪತ್ತು ಒಂದೂ ಮುಕ್ಕಾಲು ಕೋಟಿಯಿರಬೇಕು ಎಂದು ನಂಬಲಾಗಿದೆ.

ಜಗತ್ತಿನಲ್ಲಿಯೇ ಅತಿ ಸುಂದರವಾದ ನಾಡುಗಳಲ್ಲಿ ಎಥಿಯೋಪಿಯ ಒಂದು. ವಿಮಾನದಿಂದ ರಾಜಧಾನಿಯಾದ ಅಡೀಸ ಅಬಾಬಾಕ್ಕೆ ಹೋಗುವಾಗ ಮೊದಮೊದಲು ಒಂದು ಸುಂದರ ನಾಡಿಗೆ ಹೋಗುತ್ತಿದ್ದೇವೆ ಎಂಬ ಕಲ್ಪನೆ ಕೂಡ ಆಗುವದಿಲ್ಲ. ವಿಸ್ತಾರವಾದ, ನಿರ್ಜನವಾದ, ಮರುಭೂಮಿಯ ಮೇಲೆ ಹಾರುತ್ತಿರುವಾಗ ಒಮ್ಮಿಂದೊಮ್ಮೆ ಅತ್ಯಂತ ಫಲವತ್ತಾದ ಹಸಿರು ಪೀಠಭೂಮಿ ಕಣ್ಣಿಗೆ ಬೀಳಲಿದೆ ಎಂಬ ಕಲ್ಪನೆ ಬರುವದಾದರೂ ಹೇಗೆ?

ವಿಮಾನ ಮುಂದುವರಿದಂತೆ ಈ ಫಲವತ್ತಾದ ಪೀಠಭೂಮಿ ಕಂಗೊಳಿಸತೊಡಗುತ್ತದೆ. ಅಲ್ಲಲ್ಲಿ ಚಿಕ್ಕ ಚಿಕ್ಕ ಹಳ್ಳಿಗಳು ನೆಲೆಸಿರುವದು ಕಾಣಿಸುತ್ತದೆ. ಪ್ರತಿಯೊಂದು ಹಳ್ಳಿಯ ಸುತ್ತಲೂ ನೀಲಗಿರಿ ಎಣ್ಣೆಯ ಗಿಡಗಳ ಗುಂಪುಗಳಿವೆ. ಬಳಿಕ ತ್ರಿಕೋಣಾಕೃತಿಯ ಝುಕುಲಾ ಪರ್ವತ ಕಾಣಿಸುತ್ತದೆ. ವಿಮಾನ ಕೆಳಗಿಳಿಯತೊಡಗಿದಂತೆ ರೂಪರಹಿತವಾದ ದೊಡ್ಡದೊಂದು ನಗರ—ಆಡೀಸ ಅಬಾಬಾ—ಕಂಡುಬರುತ್ತದೆ. ಸಮುದ್ರಪಾತಳಿಗೆ ೭,೮೦೦ ಅಡಿ ಎತ್ತರದಲ್ಲಿ ಇದೆ ಆಡೀಸ್ ಅಬಾಬಾ. ಅಡೀಸ್ ಅಬಾಬಾ ಎಂದರೆ ''ಹೊಸ ಹೂವು'' ಎಂದರ್ಥ.

ಕೆನ್ಯಾದ ಬಿಳಿಯ ರೈತನೊಬ್ಬ ಈ ಭೂಪ್ರದೇಶವನ್ನು ಕಂಡಾಗ "ನನಗೆ ಇಲ್ಲಿಯ ನೂರಿನ್ನೂರು ಎಕರೆ ಭೂಮಿಯನ್ನು ಕೊಟ್ಟು ನೋಡಲಿ, ಜಗತ್ತಿನಲ್ಲಿ ಯಾವ ರೈತನೂ ಮೀರಿಸಲಾರದ ಬೆಳೆ

ವಿಕ್ರಮವನ್ನು ಸ್ಥಾಪಿಸುತ್ತೇನೆ" ಎಂದು ಹೇಳಿದ ನೆಂದು ಎಥಿಯೋಪಿಯದಲ್ಲಿ ಆರು ತಿಂಗಳ ಕಾಲ ಸಂಚರಿಸಿ ಬಂದ ಪೇಕನ್‌ಹ್ಯಾಮ ಎಂಬ ಬ್ರಿಟಿಶ್ ಗೃಹಸ್ಥರು ಹೇಳಿದ್ದಾರೆ.

ಕ್ಷೇತ್ರದಲ್ಲಿ ಅಡಿಸ್ ಅಬಾಬಾ ಪ್ಯಾರಿಸ್ ನಗರದಷ್ಟೇ ವಿಸ್ತಾರವಾಗಿದ್ದು ಅಲ್ಲಿ ಸುಮಾರು ೫೦ ಲಕ್ಷ ಜನವಸತಿಯಿದೆ.

ಎಥಿಯೋಪಿಯಕ್ಕೆ ಅದನ್ನು ನೋಡಲೆಂದೇ ಬರುವವರು ಕಡಿಮೆ. ಅಲ್ಲಿಗೆ ಬರುವ ವಿದೇಶೀಯರೆಲ್ಲ ಯಾವದೊಂದು ಕೆಲಸ ಮಾಡಲು — ಶಿಕ್ಷಕನಾಗಿಯೋ, ಇಂಜನಿಯರನಾಗಿಯೋ, ಡಾಕ್ಟರನಾಗಿಯೋ —ಬರುತ್ತಾರೆಂದೇ ಅಲ್ಲಿಯ ಜನ ತಿಳಿಯುತ್ತಾರೆ.

ಎಥಿಯೋಪಿಯದಲ್ಲಿ ಸಾರಿಗೆ ಸಂಪರ್ಕವೇ ಒಂದು ದೊಡ್ಡ ಸಮಸ್ಯೆಯಾಗಿದೆ. ಒಂದೆರಡು ರಾಜಮಾರ್ಗಗಳನ್ನು ಬಿಟ್ಟರೆ ಉಳಿದೆಲ್ಲವೂ ಪಾಷಾಣಯುಗದ ರಸ್ತೆಗಳಂತಿವೆ ದೇಶದ ಬಹು ಭಾಗಗಳಲ್ಲಿ ಜೀಪಗಾಡಿಯೊಂದೇ ವಾಹನವಾಗ ಬಲ್ಲದು. ಎಥಿಯೋಪಿಯದ ಆರು ನಗರಗಳಲ್ಲಿ ಮಾತ್ರ ತಂತಿ ಸಂಪರ್ಕವಿದೆ. ಆಕಾಶವಾಣಿ ಸರಿಯಾಗಿ ನಡೆದರೆ ಇನ್ನೊಂದು ಹತ್ತು ನಗರಗಳ ಸಂಪರ್ಕವನ್ನು ಅದರ ಮೂಲಕ ಬೆಳೆಸಿ ಕೊಳ್ಳಬಹುದು.

ವಿದೇಶದ ತಜ್ಞರು ಮತ್ತು ಅಮೇರಿಕೆಯ ನಾಲ್ಕಂಶಗಳ ಯೋಜನೆಯ ಮೂಲಕ ದೊರೆತ ಸಾಲದ ಸಹಾಯದಿಂದ ಎಥಿಯೋಪಿಯದಲ್ಲಿ ತುಂಬ ಸುಧಾರಣೆಗಳಾಗಿವೆ. ಅಡೀಸ ಆಬಾಬಾದಲ್ಲಿ ಆಧುನಿಕ ಮಾದರಿಯ ಇಮಾರತುಗಳ ಜೊತೆಯಲ್ಲಿ ಹಳೆಯ ಕಾಲದ ಮಣ್ಣಿನ ಗುಡಿಸಲುಗಳು ( ಇವಕ್ಕೆ ಅಲ್ಲಿ ತುಕುಲ್ ಎನ್ನುತ್ತಾರೆ. ) ಕಾಣಿಸುತ್ತವೆ. ಮಣ್ಣಿನ ಗೋಡೆಗಳ, ಹುಲ್ಲುಛಾವಣಿಯ ಈ ಮನೆಗಳಿಗೆ ಕಿಡಕಿಗಳಿರುವದಿಲ್ಲ. ಹೊಗೆ ಕಿಂಡಿಗಳೂ ಇರುವದಿಲ್ಲ. ಮನೆಯ ಒಂದೇ ಒಂದು ಬಾಗಿಲಾದ ಮುಂಬಾಗಿಲೇ ಕಿಡಕಿ ಮತ್ತು ಹೊಗೆ ಕಿಂಡಿಗಳ ಕಾರ್ಯವನ್ನೂ ಮಾಡುತ್ತದೆ

ಎಥಿಯೋಪಿಯನ್ನರ ಸಾಮಾನ್ಯ ಉಡುಪು ಒಂದು ನಿಲುವಂಗಿ (ಇದಕ್ಕೆ ಶಮ್ಮಾ ಎನ್ನುತ್ತಾರೆ). ಎಥಿಯೋಪಿಯ ಎನ್ನುವದು ಗ್ರೀಕ್ ಶಬ್ದವಾಗಿದ್ದು ಅದರ ಅರ್ಥ '' ಸುಟ್ಟ ಮೋರೆ '' ಎಂದಾಗುತ್ತದೆ ಎಥಿಯೋಪಿಯಕ್ಕೆ ಅಬಿಸೀನಿಯಾ ಎಂಬ ಇನ್ನೊಂದು ಹೆಸರಿದ್ದರೂ ಎಥಿಯೋಪಿಯನ್ನರಿಗೆ ಆ ಹೆಸರು ಸೇರುವದಿಲ್ಲ. ಏಕೆಂದರೆ ಅಬಿಸೀನಿಯ ಎಂಬುದು ಅರಬ ಮೂಲ ಶಬ್ದವಾಗಿದ್ದು ಅದರ ಅರ್ಥ " ಸಂಕರವಾದದ್ದು " ಎಂದಾಗುತ್ತವೆ.

ಎಥಿಯೋಪಿಯ ಕ್ರಿಶ್ಚನ್ ದೇಶವಾದರೂ ಅರ್ಧದಷ್ಟು ಜನರು ಮುಸ್ಲಿಮರು ಮತ್ತು ಅನಾಗರಿಕ ಧರ್ಮದವರಾಗಿದ್ದಾರೆ. ಆದರೆ ಆಳುವ ವರ್ಗ ಕ್ರಿಶ್ಚನ್ ಧರ್ಮದ್ದು. ೧೫೦೦ ವರ್ಷಗಳಿಂದಲೂ ಅಲ್ಲಿ ಕ್ರಿಶ್ಚನ್ ಮಠಗಳು ಕಾರ್ಯ ಮಾಡುತ್ತ ಬಂದಿವೆ. ಅಲ್ಲಿ ಪ್ರತಿ ಐವರು ಪ್ರೌಢ ಗಂಡಸರಲ್ಲಿ ಒಬ್ಬನು ಪಾದ್ರಿಯಾಗಿರುತ್ತಾನೆ ಎಂದು ಎಥಿಯೋಪಿಯವನ್ನು ಅಭ್ಯಸಿಸಿದ ಒಬ್ಬರು ಹೇಳಿದ್ದು, ಇದರಿಂದ ಅಲ್ಲಿ ಕ್ರಿಶ್ಚನ್ ಧರ್ಮದ ಪ್ರಭಾವ ಎಷ್ಟಿದೆಯೆಂಬುದು ವ್ಯಕ್ತವಾಗುತ್ತದೆ. ಹೇಲಿ ಸಿಲಾಸಿ ಅತ್ಯಂತ ಧರ್ಮಿಷ್ಠ ಕ್ರಿಶ್ಚನ್ನರಾಗಿದ್ದಾರೆ.

ಬೈಬಲ್ಲಿನಲ್ಲಿ ಪ್ರಸಿದ್ಧರಾದ ಸೊಲೊಮನ್ ಮತ್ತು ಶೇಬಾದ ರಾಣಿಯರ ಸಂಯೋಗದಿಂದ ಜನಿಸಿದ ಮೆನೆಲಿಕ್ ಎಂಬಾತ ಎಥಿಯೋಪಿಯ ರಾಜ್ಯವನ್ನು ಸ್ಥಾಪಿಸಿದ ಎಂದು ಹೇಳುತ್ತಾರೆ. ಎಥಿಯೋಪಿಯದ ರಾಜರೆಲ್ಲರೂ ಈತನ ವಂಶದವರೇ ಎಂದು ಭಾವಿಸಲಾಗುತ್ತದೆ.

ಎಥಿಯೋಪಿಯದಲ್ಲಿ ಹೊರಡುವ ಪತ್ರಿಕೆಗಳು ತೀರ ಕಡಿಮೆ. ೧೯೫೪ರಲ್ಲಿ ಅಲ್ಲಿ ಎರಡೇ ಎರಡು ವಾರಪತ್ರಿಕೆಗಳಿದ್ದವು ಎಂದು ಜಾನ್ ಗುಂಥರರು ಹೇಳಿದ್ದಾರೆ ಇವೆರಡೂ ಸಂಪೂರ್ಣವಾಗಿ ಸರಕಾರದ ನಿಯಂತ್ರಣದಲ್ಲಿ ಹೊರಡುವ ಪತ್ರಿಕೆಗಳಾಗಿದ್ದವು. ಒಂದು ಇಂಗ್ಲೀಷ್ ಮತ್ತು ಎಥಿಯೋಪಿಯದ ಮುಖ್ಯ ಭಾಷೆಯಾದ ಅಮ್ಹಾರಿಕ್‌ದಲ್ಲಿ, ಇನ್ನೊಂದು ಫ್ರೆಂಚ್ ಮತ್ತು ಅಮ್ಹಾರಿಕ್‌ದಲ್ಲಿ ಹೊರಡುತ್ತಿದ್ದವು. ಪ್ರಕಟವಾಗುವ ಪ್ರತಿ

ಯೊಂದು ಪಂಕ್ತಿಯೂ ನಿಯಂತ್ರಣಾಧಿಕಾರಿಯ ದೃಷ್ಟಿಗೆ ೫-೬ ದಿನ ಮುಂಚಿತವಾಗಿ ಬೀಳಲೇ ಬೇಕಾಗುವದರಿಂದ ದಿನಪತ್ರಿಕೆ ಹೊರಡಿಸುವ ಪ್ರಶ್ನೆಯೇ ಇಲ್ಲ ಎಂದು ಬ್ರಿಟಿಶ್ ಸಂಪಾದಕರೊಬ್ಬರು ಆಗ ಹೇಳಿದ್ದರು.

ಪತ್ರಿಕೆಗಳ ಮೇಲಿರುವ ನಿರ್ಬಂಧಗಳಲ್ಲಿ ಇವು ಕೆಲವು: ಚಕ್ರವರ್ತಿಯ ಹೆಸರು ಉಲ್ಲೇಖವಾಗುವಾಗಲೆಲ್ಲ ಆತನ ಹೆಸರು ಪ್ರಾರಂಭಕ್ಕೇನೇ ಬರಬೇಕು; ಮತ್ತು ಆತನ ಹೆಸರಿನ ಮೊದಲು ಇನ್ನಾರ ಹೆಸರೂ ಬರಬಾರದು. ಚಕ್ರವರ್ತಿಗೆ ಸಂಬಂಧಪಟ್ಟು ಬರುವ ಸರ್ವನಾಮವು ಕೂಡ ದೊಡ್ಡ (Capital) ಅಕ್ಷರಗಳಲ್ಲಿ ಬರಬೇಕು. (ಇಂಗ್ಲೀಷಿನಲ್ಲಿ ದೇವರಿಗೆ ಮಾತ್ರ ಈ ಗೌರವ ಸಲ್ಲುತ್ತದೆ.) ಸತ್ತವರ ಚಿತ್ರ ಪ್ರಕಟವಾದ ಪುಟದಲ್ಲಿ ಜೀವಂತ ವ್ಯಕ್ತಿಯ ಚಿತ್ರ ಬರಬಾರದು. (ಹಾಗಾದಲ್ಲಿ ಬದುಕಿರುವವನೂ ಸಾಯುತ್ತಾನೆ ಎಂಬ ನಂಬಿಕೆ ರೂಢವಾಗಿದೆ.) ಸತ್ತವರ ಚಿತ್ರ-ವಿರುವ ಗುಂಪಿನ ಚಿತ್ರ ಕೂಡ ಪ್ರಕಟವಾಗಕೂಡದು.

ಎಥಿಯೋಪಿಯದಲ್ಲಿ ನಿಜವಾದ ಚುನಾವಣೆ ಎಂಬುದು ನಡೆದದ್ದಿಲ್ಲ. ಇದೂ ಒಂದು ಪ್ರಜಾ-ಪ್ರಭುತ್ವದೇಶ ಎಂದು ಸರಕಾರಿ ನೌಕರರು ಹೇಳಿದರೆ ಹೇಳಬೇಕು. ಇಲ್ಲಿ ರಾಜಕೀಯ ಪಕ್ಷಗಳಿಲ್ಲ. ಸ್ವತಂತ್ರ ಅಭಿಪ್ರಾಯ ಪ್ರಕಟನೆಗೆ ಅವಕಾಶವಿಲ್ಲ. ನಮ್ಮ ದೃಷ್ಟಿಯಲ್ಲಿ ನಾಗರಿಕ ಸ್ವಾತಂ-ತ್ರ್ಯವೆನ್ನುವದು ಕೂಡ ಇಲ್ಲಿಲ್ಲ. ಒಂದು ಶಾಸನ ಸಭೆ ಇದ್ದರೂ ಅರಸರೇ ಅದರ ಸದಸ್ಯರನ್ನು ಆರಿಸಿಕೊಂಡು ರಾಜ್ಯವನ್ನು ಮನೆಯ ಯಜಮಾನನಂತೆ ಆಳುತ್ತಾರೆ.

ಎಥಿಯೋಪಿಯದ ಹಳ್ಳಿಗಳಲ್ಲಿ ಜೀವನ ಇನ್ನೂ ಶತಮಾನಗಳ ಹಿಂದಿನದೇ ಆಗಿದೆ. ಇನ್ನೂ ಮೋಟರ ಕಾರನ್ನಾಗಲಿ, ಸಿಮೆಂಟಿನಿಂದ ಕಟ್ಟಿದ ಮನೆಯನ್ನಾಗಲಿ ನೋಡದ ಜನ ಅಲ್ಲಿಯ ಹಳ್ಳಿಗಳಲ್ಲಿದ್ದಾರೆ.

ಇಲ್ಲಿಯ ಸಾರ್ವಜನಿಕ ಉತ್ಸವಗಳಲ್ಲಿ ಧಾರ್ಮಿಕ ಉತ್ಸವಗಳೇ ಪ್ರಧಾನವಾದವು. ಚಿಮುಕಾಟ ಹಬ್ಬದ ಸಡಗರ ನೋಡತಕ್ಕಂಥಾದ್ದು. ಹಬ್ಬ ಜರುಗುವ ಊರಿಗೆ ಸುತ್ತುಮುತ್ತಲಿನ ಹಳ್ಳಿಗಳ ಪಾದ್ರಿಗಳು, ಧರ್ಮಗುರುಗಳು ಬರುತ್ತಾರೆ. ಅವರ ಹಿಂದೆ ಅವರವರ ಊರಿನ ಅವರ ಅನುಯಾಯಿಗಳು ಹಿಂಡುಗಟ್ಟಿ ಬರುತ್ತಾರೆ. ಎಲ್ಲರೂ ಹಬ್ಬದ ಉಡುಪು ಧರಿಸಿ ನಗಾರಿಯನ್ನು ಬಾರಿಸುತ್ತಿರುತ್ತಾರೆ. ಪಾದ್ರಿಗಳು ಕೂಡ ಗಂಭೀರವಾಗಿ ತಾಳಕ್ಕೆ ಸರಿಯಾಗಿ ಹಿಂದೆ ಮುಂದೆ ತೊನೆಯುತ್ತ ನರ್ತಿಸುತ್ತಾರೆ..

ಎಥಿಯೋಪಿಯದ ಸ್ಥಿತಿಗತಿಯನ್ನು ಕಂಡಾಗ ಅದು ಸುಧಾರಿಸಲು ತುಂಬ ಕಷ್ಟವಿದೆ ಎಂದೆನಿಸುವದು. ಆದರೆ ಅದು ಮಾಡಿಕೊಂಡ ಸುಧಾರಣೆಗಳು ಅಲ್ಪವಾಗಿಲ್ಲವೆನ್ನುವದನ್ನು ಗಮನಿಸಿದರೆ ಅದರ ಪ್ರಗತಿಯ ಬಗ್ಗೆ ಆಶೆಯುಂಕುರಿಸುವದು. ಎಥಿಯೋಪಿಯವು ಸ್ವತಂತ್ರ ನಾಡು. ಆಫ್ರಿಕೆಯಲ್ಲಿ ಇಜಿಪ್ತವನ್ನು ಬಿಟ್ಟರೆ ಇನ್ನೆಲ್ಲ ದೇಶಗಳಿಗಿಂತಲೂ ಇದು ಹೆಚ್ಚು ಕಾಲದಿಂದ ಸ್ವತಂತ್ರ ನಾಡಾಗಿ ಉಳಿದಿದೆ ಅದು ೧೯೩೬ ರಿಂದ ೧೯೪೧ ರ ವರೆಗೆ ಇಟಲಿಯ ಆಕ್ರಮಣಕ್ಕೊಳಗಾಗಿ ಅದರ ಆಡಳಿತಕ್ಕೊಳಪಟ್ಟ ಅವಧಿಯನ್ನು ಬಿಟ್ಟರೆ ೩೦೦೦ ವರ್ಷಗಳ ಇತಿಹಾಸದಲ್ಲಿ ಪರರು ಎಥಿಯೋಪಿಯವನ್ನು ಗೆದ್ದಿದ್ದಿಲ್ಲ.

ಇಥಿಯೋಪಿಯದ ಜನರಲ್ಲಿ ಒಕ್ಕಟ್ಟಿದೆ; ಪ್ರಗತಿಯ ಹಂಬಲವಿದೆ, ತಮ್ಮನ್ನು ಮುನ್ನಡೆಸುವ ಅರಸನಲ್ಲಿ ನಂಬಿಕೆಯಿದೆ. ಆಧುನಿಕ ಜಗತ್ತಿನ ಸಂಪರ್ಕ ಬೆಳೆದು ಬರುತ್ತಿರುವದರಿಂದ ಈ ನಾಡು ಬೇಗಬೇಗನೆ ಮುಂದಕ್ಕೆ ಬಂದೀತು ಎನ್ನುವದರಲ್ಲಿ ಸಂಶಯವಿಲ್ಲ.



ಕಳ್ಳ ಸಾಗಾಟಗಾರರ ಪ್ರತಿಭೆ ಅಪ್ರತಿಮವಾದುದು.
ಆದರೆ ಅವರು ಒಂದಿಲ್ಲೊಂದು ದಿನ ಸಿಕ್ಕಿಬೀಳುತ್ತಾರೆ.

# ಸುಂಕದ ಕಟ್ಟೆಯವರಿಗೆ ಮಂಕುಬೂದಿ

ಅವನೀಂದ್ರ ವಿದ್ಯಾಲಂಕಾರ

ಭಾರತ-ಪಾಕಿಸ್ತಾನಗಳ ಗಡಿಯಲ್ಲಿ ಸುಂಕದಧಿಕಾರಿಗಳು ಸದಾ ಕಣ್ಣಲ್ಲಿ ಎಣ್ಣೆ ಹಾಕಿಕೊಂಡಿರಬೇಕಾಗುತ್ತದೆ. ಏಕೆಂದರೆ ಭಾರತದ ರೂಪಾಯಿಗಳನ್ನು ಪಾಕಿಸ್ತಾನಕ್ಕೆ ಕಳ್ಳತನದಿಂದ ಸಾಗಿಸುವ ಜನರು ಕಲ್ಪನಾತೀತವಾದ ಉಪಾಯಗಳನ್ನು ಅವಲಂಬಿಸುತ್ತಾರೆ. ಭಾರತವು ತನ್ನ ರೂಪಾಯಿಯ ಮೌಲ್ಯವಿಚ್ಛೇದನವನ್ನು ಮಾಡಿದ ನಂತರ ಪಾಕಿಸ್ತಾನ ಸರಕಾರದ ದರದ ಪ್ರಕಾರ ಪಾಕಿಸ್ತಾನ ರೂಪಾಯಿಯ ಬೆಲೆ ಭಾರತದ ರೂಪಾಯಿಗಿಂತ ಹೆಚ್ಚಾದರೂ ವ್ಯವಹಾರದಲ್ಲಿ ಹಾಗಾಗಿಲ್ಲ. ಭಾರತದ ೬೮ ರೂಪಾಯಿಗಳಿಗೆ ಪಾಕಿಸ್ತಾನದ ೧೦೦ ರೂಪಾಯಿಗಳ ಬೆಲೆ ವ್ಯವಹಾರದಲ್ಲಿರುವದರಿಂದ ಪಾಕಿಸ್ತಾನದಲ್ಲಿ ಭಾರತದ ರೂಪಾಯಿಗಳ ಬೇಡಿಕೆ ಬಲವಾಗಿರುತ್ತದೆ. ಅಂತೇ ಸಾಹಸಿಗಳು ಭಾರತದ ರೂಪಾಯಿಗಳನ್ನು ಕಳ್ಳತನದಿಂದ ಪಾಕಿಸ್ತಾನಕ್ಕೆ ಒಯ್ಯುತ್ತಾರೆ. ಪಾಕಿಸ್ತಾನದ ಕಸೂರ ಎಂಬ ಊರಿನ ಬಳಿಯಲ್ಲಿ ಖೊಟ್ಟಿ ನೋಟುಗಳನ್ನು ಛಾಪಿಸುವ ಕಂಪನಿಯೊಂದನ್ನು ಪಾಕ ಪೋಲೀಸರು ಪತ್ತೆ ಹಚ್ಚಿದರು. ಈ ಮುದ್ರಣಾಲಯದಲ್ಲಿ ಪಾಕಿಸ್ತಾನದ ನೋಟುಗಳನ್ನಲ್ಲ, ಆದರೆ ಭಾರತದ ನೋಟುಗಳನ್ನು ಮುದ್ರಿಸುತ್ತಿದ್ದರು ಎಂಬ ಸಂಗತಿಯಿಂದ ಪಾಕಿಸ್ತಾನದಲ್ಲಿ ಭಾರತದ ನೋಟುಗಳಿಗೆ ಎಷ್ಟು ಮಹತ್ವವಿದೆಯೆಂದು ಸ್ಪಷ್ಟವಾಗುವದು.

ಒಮ್ಮೆ ಒಬ್ಬ ಪಾಕಿಸ್ತಾನಿ ಮನುಷ್ಯ ಭಾರತದಿಂದ ಮರಳುವಾಗ ಬಹಳ ಬುದ್ಧಿವಂತಿಕೆಯಿಂದ ಸಾಗಿದ್ದ. ಅವನ ಹತ್ತರ ಹೇಳಿಕೊಳ್ಳುವಂಥ ಸಾಮಾನೇನೂ ಇರಲಿಲ್ಲ. ಆದರೆ ಅವನ ಅಂಗಿಯು ತೋಳಿನ ಹತ್ತರ ಬಹಳ ಉಬ್ಬಿತ್ತು. ಸುಂಕದಧಿಕಾರಿಗಳಿಗೆ ಸಂಶಯ ಬಂದು ಅಂಗಿಯ ಹೊಲಿಗೆಯನ್ನು ಬಿಚ್ಚಿಸಿ ನೋಡಲು ಅವರಿಗೆ ಭಾರತದ ನೂರುನೂರು ರೂಪಾಯಿಗಳ ನೋಟುಗಳನ್ನು ಒಳಗಿಟ್ಟು ಅಂಗಿಗೆ ಹೊಲಿಗೆ ಹಾಕಿದ್ದು ಸಿಕ್ಕಿತು.

ಬುರಖಾ ಧರಿಸಿದ ಪಾಕ ಮಹಿಳೆಯೊಬ್ಬಳು ನಿಸ್ಸಂಕೋಚ ಭಾವದಿಂದ ಭಾರತದ ಗಡಿ ದಾಟಿ ಪಾಕಿಸ್ತಾನಕ್ಕೆ ಹೊರಟಿದ್ದಳು. ಹೆಂಗಸು, ಮೇಲಾಗಿ ಬುರಖಾ ಧರಿಸಿದವಳು. ಸಹಜವಾಗಿ ಯಾರಿಗಾದರೂ ಸಂದೇಹ ಬಂದೀತೇ? ಆದರೆ ಸುಂಕದಧಿಕಾರಿಗಳದು ಕಾಕದೃಷ್ಟಿ. ಅವರು ಬುರಖಾ ಪರೀಕ್ಷಿಸಿ ನೋಡಿದರು. ಬುರುಖಾದ ಎರಡು ಭಾಗಗಳು ಮುಂದಕ್ಕೆ ಕೂಡುವ ಸ್ಥಳದಲ್ಲಿ ಒಳಗೆ ಭಾರತದ ನೂರು ನೂರು ರೂಪಾಯಿಗಳ ನೋಟುಗಳನ್ನಿಟ್ಟು ಹೊಲಿಗೆ ಹಾಕಲಾಗಿತ್ತು.

" ಧರ್ಮಯುಗ " ದಿಂದ

ಧರ್ಮಕ್ಕೂ ಕಳ್ಳತನಕ್ಕೂ ಸಂಬಂಧ ಕಲ್ಪಿಸುವದು ಕಷ್ಟ. ಆದರೆ ಶ್ರೀಮಂತಿಕೆಯ ಹಂಬಲದಲ್ಲಿ ಎಂಥೆಂಥ ವಿರೋಧಾಭಾಸಗಳೂ ಒಂದಾಗುವದುಂಟು. ಭಾರತದ ಸುಂಕದಧಿಕಾರಿಗಳು ಮೌಲ್ವಿ ಸಾಹೇಬರೊಬ್ಬರ ಸಾಮಾನುಗಳನ್ನು ತಪಾಸಿಸತೊಡಗಿದ್ದರು. ಮೌಲ್ವಿ ಸಾಹೇಬರು ನಿರ್ಲಿಪ್ತಭಾವದಿಂದ ಕುರಾನನ್ನು ಗಟ್ಟಿಯಾಗಿ ಓದುತ್ತಿದ್ದರು. ಈ ಅಧಿಕಾರಿಗಳನ್ನು ಹೇಗೆ ಮೋಸಗೊಳಿಸುತ್ತಿದ್ದೇನೆಂದು ಅವರು ಮನಸ್ಸಿನಲ್ಲಿಯೇ ನಗುತ್ತಿರಲೂಬಹುದು. ಆದರೆ ಅಷ್ಟರಲ್ಲಿ ಒಬ್ಬ ಅಧಿಕಾರಿ "ಮೌಲಾನಾ, ನಿಮ್ಮ ಕುರಾನನ್ನು ಒಂದಿಷ್ಟು ಇತ್ತ ಕೊಡಿ" ಎಂದ. ಮೌಲಾನಾಸಾಹೇಬರು ಇಲ್ಲವೆಂದು ಹೇಗಂದಾರು? ಅವರ ಸುಖಸ್ವಪ್ನ ಒಡೆಯಿತು. ಕುರಾನದ ಹೊರಗಿನ ರಟ್ಟಿನೊಳಗೆ ಭಾರತದ ನೋಟುಗಳು ಇಡಲ್ಪಟ್ಟಿದ್ದವು.

ಈ ಬಗೆಯ ವ್ಯವಹಾರ ಎಂದಿನಿಂದಲೂ ನಡೆಯುತ್ತಿದೆ. ದ್ವಿತೀಯ ಮಹಾಯುದ್ಧದ ಮೊದಲು ಜಪಾನವು ತನ್ನ ಯೆನ್ ನಾಣ್ಯಗಳ ಮೌಲ್ಯ ವಿಚ್ಛೇದನವನ್ನು ಮಾಡಿತ್ತು. ಶಾಂಘಾಯಿಯಲ್ಲಿ 'ಯೆನ್' ವಿನಿಮಯ ಜೋರಾಗಿ ನಡೆಯುತ್ತಿತ್ತು. ಜನರು ಶಾಂಘಾಯಿಯಲ್ಲಿ ಯೆನ್‌ಗಳನ್ನು ಸಂಪಾದಿಸಿ ಕಳ್ಳತನದಿಂದ ಜಪಾನಕ್ಕೆ ಒಯ್ಯುತ್ತಿದ್ದರು. ಶಾಂಘಾಯಿ ಅಂತರಾಷ್ಟ್ರೀಯ ವ್ಯಾಪಾರ ಕೇಂದ್ರವಾಗಿದ್ದುದರಿಂದ ಅಲ್ಲಿಂದ "ಯೆನ್" ಗಳನ್ನು ಒಯ್ಯಲು ಯಾವ ನಿರ್ಬಂಧವೂ ಇರಲಿಲ್ಲ. ಆದರೆ ಜಪಾನದ ಗುಪ್ತಚಾರರು ಶಾಂಘಾಯಿಯಲ್ಲಿದ್ದುಕೊಂಡು ಯೆನ್ ಸಾಗಿಸುವವರ ಪತ್ತೆ ಹಚ್ಚಿ ತಮ್ಮ ದೇಶದಧಿಕಾರಿಗಳಿಗೆ ತಿಳಿಸುತ್ತಿದ್ದುದರಿಂದ ಜಪಾನಿ ಸುಂಕದಧಿಕಾರಿಗಳಿಗೆ ಈ ಕಳ್ಳ ಸಾಗಾಟ ತಡೆಯಲು ತುಂಬ ಸಹಾಯವಾಗುತ್ತಿತ್ತು.

ಒಮ್ಮೆ ಸಿಂಧಿ ವ್ಯಾಪಾರಿಯೊಬ್ಬ ಈ ಗುಪ್ತಚಾರರನ್ನು ಮೋಸಗೊಳಿಸಲು ಒಂದು ಅಪೂರ್ವ ಹಂಚಿಕೆ ಹೂಡಿದ. ಆತ ತನ್ನ ಹೆಂಡತಿಯ ತೊಡೆಯನ್ನು ಸೀಳಿ ಒಳಗೆ ಬಹಳಷ್ಟು ಯೆನ್‌ಗಳನ್ನು ತುಂಬಿ ಬಳಿಕ ಅದನ್ನು ಹೊಲಿದು ಮೊದಲಿನಂತೆ ಕಾಣುವಂತೆ ಮಾಡಿದ. ಆದರೆ ಜಪಾನದ ಗುಪ್ತಚಾರರ ಚಾತುರ್ಯದಿಂದ ಆತ ಜಪಾನನ್ನು ಪ್ರವೇಶಿಸಿದೊಡನೆ ಸಿಕ್ಕಿಬಿದ್ದ. ಅದಕ್ಕೂ ಮೊದಲು ಜಪಾನಿ ಅಧಿಕಾರಿಗಳು ಮಹಿಳೆಯರನ್ನು ತಪಾಸಣೆಗೆ ಗುರಿಪಡಿಸುತ್ತಿರಲಿಲ್ಲ. ಈ ಘಟನೆಯ ನಂತರ ಅವರು ಹೆಂಗಸರನ್ನೂ ತಪಾಸಿಸತೊಡಗಿದರು.

ಕಲಕತ್ತೆಯ ಡಾಯ ಮಂಡಬಂದರದಲ್ಲಿ ಜಪಾನದ ಹಡಗು ಬಂದಾಗಲೆಲ್ಲ ಸುಂದರವಾದ ರೇಶಿಮೆ ಬಟ್ಟೆಗಳಿಂದ ಮುಚ್ಚಲ್ಪಟ್ಟ ಎರಡು [illegible] ಶವಗಳನ್ನು ಹಡಗಿನಿಂದ ಇಳಿಸಿ ಸಾಗಿಸುತ್ತಿರುವದರ ರಹಸ್ಯ ಸುಂಕದ ಅಧಿಕಾರಿಗಳಿಗೂ ಪೋಲೀಸರಿಗೂ ಬಹಳ ದಿನಗಳ ವರೆಗೆ ಗೊತ್ತಾಗಲಿಲ್ಲ. ರೇಶಿಮೆ ಬಟ್ಟೆಗಳಿಗೆ ಕೊಡಬೇಕಾದ ಸುಂಕವನ್ನು ತಪ್ಪಿಸಲು ಕೆಲ ವ್ಯಾಪಾರಿಗಳು ಈ ಗತ್ತು ಹುಡುಕಿದ್ದರು. ರೇಶಿಮೆ ಅರಿವೆಗಳನ್ನು ಸಾಕ್ಷಾತ್ ಶವದೋಪಾದಿಯಲ್ಲಿ ಕಟ್ಟಿಗೆ ಮೇಲೆ ರೇಶಿಮೆ ಬಟ್ಟೆ ಹೊದಿಸಿ ಹೆಗಲ ಮೇಲೆ ಹೊತ್ತುಕೊಂಡು "ರಾಮ ನಾಮ ಸತ್ಯ ಹೈ!" ಎಂದು ಗಟ್ಟಿಯಾಗಿ ಉಚ್ಚರಿಸುತ್ತ ಹಡಗಿನಿಂದಿಳಿದು ಸ್ಮಶಾನದತ್ತ ಹೋಗುತ್ತಿದ್ದರು. ಯಾರಿಗೂ ಬಹಳ ದಿನಗಳ ವರೆಗೆ ಈ ಜನರಲ್ಲಿ ಸಂದೇಹವುಂಟಾಗಲಿಲ್ಲ.

ಆದರೆ ದಿನಗಳೆದಂತೆ ಅಧಿಕಾರಿಗಳಿಗೆ ಇದರಲ್ಲಿ ಒಂದು ವಿಶೇಷ ಕಂಡುಬಂದಿತು. ಜಪಾನಿ ಹಡಗಗಳಿಂದಲೆ ಶವಗಳು ಹೊರಬರುವದು ಹೆಚ್ಚಾಗಲು ಜಪಾನಿ ಹಡಗಗಳಲ್ಲಿ ಜನ ಈ ರೀತಿ ಸಾಯುವ ಕಾರಣವೇನು? ಎಂದು ಅವರು ವಿಚಾರಿಸಿದಾಗ ಹಾದಿಯಲ್ಲಿ ಹಡಗದಲ್ಲಿ ಜನ ಸಾಯುವದು ಕ್ವಚಿತ್ ಎಂದು ತಿಳಿಯಿತು.

ಆ ಬಳಿಕ ಬಂದ ಜಪಾನಿ ಹಡಗದಿಂದ ಶವಗಳನ್ನು ಹೊತ್ತುಕೊಂಡವರು ಇಳಿದೊಡನೆ ಅಧಿಕಾರಿಗಳು ಶವಗಳನ್ನಿಳಿಸಿಕೊಂಡು ಪರೀಕ್ಷಿಸಿದರು. ಗುಟ್ಟು ಹೊರಬಿತ್ತು.

ಹಾರಾ ಸ್ಟೇಶನ್ನಿನಲ್ಲಿ ೫,೦೦೦ ರೂಪಾಯಿ ಬೆಲೆಯ ಸಾಬೂನುಗಳನ್ನು ಬನಾರಸಕ್ಕೆ ಕಳಿಸಲೆಂದು ಕೆಲವರು ತಂದಿದ್ದರು. ಸುಂಕದ ಅಧಿಕಾರಿಗಳು ಸಾಬೂನಿನ ವಡೆಗಳನ್ನು ತಪಾಸಿಸಿದಾಗ

ಪ್ರತಿಯೊಂದರೊಳಗೂ ಅರ್ಧ ಸೇರು ಅಫೀಮನ್ನು ಬಚ್ಚಿಟ್ಟದ್ದು ಕಂಡುಬಂತು.

ಪಾಂಡಿಚೇರಿ ಫ್ರೆಂಚರದಾಗಿದ್ದಾಗ ಅಲ್ಲಿ ಫ್ರಾನ್ಸಿನಿಂದ ಬರುವ ಅನೇಕ ವಸ್ತುಗಳಿಗೆ ಸುಂಕ ಹಾಕುತ್ತಿರಲಿಲ್ಲ. ಭಾರತಕ್ಕೆ ಬರುವಾಗ ಅವುಗಳ ಮೇಲೆ ವಿಪರೀತ ಸುಂಕ ಬಿದ್ದು ಅವುಗಳ ಬೆಲೆ ಪಾಂಡಿಚೇರಿಗಿಂತ ಎಷ್ಟೋ ಪಟ್ಟು ಹೆಚ್ಚಾಗುತ್ತಿತ್ತು. ಇದಕ್ಕಾಗಿ ಅನೇಕರು ಪಾಂಡಿಚೇರಿಯಿಂದ ಆ ಸಾಮಾನುಗಳನ್ನು ಭಾರತ ಪ್ರದೇಶಕ್ಕೆ ಕಳ್ಳತನದಿಂದ ಸಾಗಿಸುವದರಲ್ಲಿ ಮಗ್ನರಾಗಿರುತ್ತಿದ್ದರು.

ಫ್ರೆಂಚ ರೇಶಿಮೆ ನೋಡಲು ಚೀನೀ ರೇಶಿಮೆಗಿಂತಲೂ ಸುಂದರವಾದದ್ದು. ಈ ರೇಶಿಮೆಯನ್ನು ಸುಂಕ ತಪ್ಪಿಸಿ ಮದ್ರಾಸಕ್ಕೆ ತರುವ ಅಟ್ಟಹಾಸ ನಡೆದು ಒಮ್ಮೆ ಮದ್ರಾಸ ಪೇಟೆಯೆಲ್ಲ ಫ್ರೆಂಚ ರೇಶಿಮೆಯಿಂದ ತುಂಬಿಹೋಗಿತ್ತು. ಅಧಿಕಾರಿಗಳು ಬಹಳ ಪ್ರಯಾಸದ ನಂತರ ಈ ರೇಶಿಮೆಯನ್ನು ದೇಶಿ ನಾವೆಗಳ ಮೂಲಕ ತರುತ್ತಿರುವದನ್ನೂ ಹಡಗು ಋತು-ರಂಧ್ರಗಳನ್ನು ಕ್ರಮದಂತೆ ತೆಂಗಿನ ನಾರಿನಿಂದ ತುಂಬುವ ಬದಲು ಈ ರೇಶಿಮೆಯಿಂದ ತುಂಬಿ ಪತ್ತೆ ಹತ್ತದಂ ರೇಶಿಮೆಯನ್ನು ತರುತ್ತಿರುವದನ್ನೂ ಕಂಡುಹಿ ದರು.

ಈಗ ನಮ್ಮಲ್ಲಿ ಬಹಳ ಕಡೆಗಳಲ್ಲಿ ಪಾನಪ್ರ ಬಂಧ ಜಾರಿಯಲ್ಲಿದೆ. ಕಳ್ಳ ಸಾಗಾಟಗಾರರು ಸ ಯನ್ನು ಸಾಯಕಲ್ ಟ್ಯೂಬುಗಳೇ ಮುಂತಾ ಸಾಧನಗಳಲ್ಲಿ ತುಂಬಿ ತರುವ ಸುದ್ದಿಯನ್ನು ಕೇಳ ತ್ತೇವೆ. ಕಳ್ಳ ವ್ಯಾಪಾರದಿಂದ ಅತ್ಯಧಿಕ ಲಾ ವಾಗುವದೆಂಬ ಆಶೆಯಿಂದ ಕಳ್ಳ ವ್ಯಾಪಾರಿಗಳ ನೂರಾರು ಬಗೆಯ ತಂತ್ರಗಳನ್ನು ಉಪಯೊ ಗಿಸುತ್ತಾರೆ.

ಮನುಷ್ಯನ ಬುದ್ಧಿಯ ಚುರುಕುತನಕ್ಕೆ ಸೀಮೆ ಯಿಲ್ಲವಾದ್ದರಿಂದ ಕಳ್ಳರ ಒಂದು ತಂತ್ರ ಬಯ ಲಿಗೆ ಬಂದರೆ ಅವರು ಮತ್ತೊಂದು ತಂತ್ರವನು ಹುಡುಕಿಕೊಳ್ಳುತ್ತಾರೆ. ಕಳ್ಳರಲ್ಲಿಯೂ ಅವರನು ಹಿಡಿಯುವವರಲ್ಲಿಯೂ ಬುದ್ಧಿಯ ಸ್ಪರ್ಧೆ ಎಂ ನಿಂದಲೂ ನಡೆದು ಬಂದಿದ್ದು ಮಾನವ ಸ್ವಭ ವದ ರೀತಿಯನ್ನು ನೋಡುವಾಗ ಎಂದೆಂದಿಗೂ ನಡೆಯುತ್ತಲೇ ಇರುವದು ಎಂದು ಹೇಳಬೇಕ ಗುತ್ತದೆ.



## ಆರೋಗ್ಯ ಸೂತ್ರ

ನಲುವತ್ತು ಮುಟ್ಟುವ ಮೊದಲು ಸಾಧ್ಯವಿದ್ದಷ್ಟು ಹೆಚ್ಚು ತಿನ್ನಿರಿ; ನಲುವತ್ತು ಮೀರಿದ ಮೇಲೆ ಸಾಧ್ಯವಿದ್ದಷ್ಟು ಕಡಿಮೆ ತಿನ್ನಿರಿ. — ಸಂಡೇ ಟೈಂಸ್ ಡಾಕ್ಟರ್




**ಒಂದು ನಿಷ್ಪ್ರಯೋಜಕ ವೃಕ್ಷ ಕೋಟ್ಯಂತರ ರೂಪಾಯಿ ಬೆಲೆ ಬಾಳುವ ಉದ್ದಿಮೆಗೆ ಆಧಾರವಾಯಿತು.**

ನ್ಯೂಸ್ ಪ್ರಿಂಟ್ ಅಥವಾ ವೃತ್ತಪತ್ರ ಕಾಗದವನ್ನು ''ಸ್ವಾತಂತ್ರ್ಯದ ಮೂಲ ಸಾಮಗ್ರಿ'' ಎಂದು ಕರೆಯಲಾಗಿದೆ. ಪ್ರಜಾ ಸ್ವಾತಂತ್ರ್ಯದ ಆಯುಧಗಳಾದ ವರ್ತಮಾನ ಪತ್ರಗಳ ಜೀವನಾಧಾರ ಅದೇ. ಭಾರತದ ೬,೫೨೦ ವರ್ತಮಾನ ಪತ್ರಗಳ ಒಟ್ಟು ಪ್ರಸಾರ ೫೪ ಲಕ್ಷದಷ್ಟಿದೆ. ಸಾಕ್ಷರತೆ ಭರದಿಂದ ಹೆಚ್ಚುತ್ತಿರುವ, ಮತ್ತು ಜನರಿಗ ಸುದ್ದಿಗಳನ್ನು ಅರಿತುಕೊಳ್ಳುವ ಅಪೇಕ್ಷೆ ಬೆಳೆಯುತ್ತಿರುವ ಇಂದಿನ ಕಾಲದಲ್ಲಿ ಪತ್ರಿಕೆಗಳ ಪ್ರಸಾರ ಇನ್ನೂ ಬೆಳೆಯುವುದು ಖಂಡಿತ. ಆಗಲೆ ಅಂಕೆ ಸಂಖ್ಯೆಗಳು ಇದನ್ನು ನಿರ್ದೇಶಿಸುತ್ತಿವೆ. ೧೯೪೧-೪೨ ರಲ್ಲಿ ಭಾರತದಲ್ಲಿ ಬರಿ ೧೪,೦೦೦ ಟನ್ ನ್ಯೂಸ್ ಪ್ರಿಂಟ್ ಬಳಕೆಯಾಗಿದ್ದರೆ ಸದ್ಯಕ್ಕೆ ಅದರ ಬೇಡಿಕೆ ೯೦,೦೦೦ ಟನ್ನಿಗೇರಿದೆ. ೧೯೬೦ ರೊಳಗೆ ಭಾರತಕ್ಕೆ ಪ್ರತಿವರ್ಷ ೧,೦೦,೦೦೦ ಟನ್ ನ್ಯೂಸ್ ಪ್ರಿಂಟ್ ಬೇಕಾಗುವುದು.

ಇಷ್ಟೆಲ್ಲ ಕಾಗದಕ್ಕೆ ಭಾರತ ಈವರೆಗೆ ವಿದೇಶಗಳನ್ನೇ ಅವಲಂಬಿಸಿತ್ತು. ಇತರ ಕಾಗದಗಳು ಭಾರತದಲ್ಲಿ ತಯಾರಾಗತೊಡಗಿ ಅನೇಕ ದಶಮಾನಗಳು ಕಳೆದರೂ ನ್ಯೂಸ್ ಪ್ರಿಂಟ್ ಉತ್ಪಾದನೆಯ ಪ್ರಯತ್ನಗಳಾಗಿರಲಿಲ್ಲ. ಇದರ ಫಲವಾಗಿ ಕೋಟ್ಯಂತರ ರೂಪಾಯಿಗಳು ನ್ಯೂಸ್ ಪ್ರಿಂಟಿನ ಮುಖ್ಯ ಉತ್ಪಾದಕರಾದ ಕೆನಡಾ, ಫಿನ್ಲಂಡ್, ನಾರ್ವೆ ಮತ್ತು ಆಸ್ಟ್ರಿಯಾ ದೇಶಗಳಿಗೆ ಹರಿದುಹೋಗುತ್ತಿತ್ತು.

ಒಂದಾಣೆಗೆ ನಾಲ್ಕಾರು ಪುಟಗಳ ವರ್ತಮಾನ ಪತ್ರವನ್ನು ಕೊಡಬೇಕಾದರೆ ಅದರ ಕಾಗದ ಅಗ್ಗವಾಗಿರಬೇಕು. ಆದರೆ ಅತಿ ವೇಗದಿಂದ ನಡೆಯುವ ರೋಟರಿ ಮುದ್ರಣ ಯಂತ್ರಗಳ ಓಟವನ್ನು ತಡೆದುಕೊಳ್ಳುವ ತ್ರಾಣ ಆ ಕಾಗದಕ್ಕಿರಬೇಕು. ಇದಕ್ಕಾಗಿ ನ್ಯೂಸ್ ಪ್ರಿಂಟ್ ಕಾಗದ ತಯಾರಿಸಲು ಯಂತ್ರದಿಂದ ಕುಟ್ಟಿ ತಯಾರಿಸಿದ ಅಗ್ಗವಾದ ಕಟ್ಟಿಗೆಯ "ಯಾಂತ್ರಿಕ ಪಲ್ಪ"ನ್ನು ಬಹುಭಾಗ ಉಪಯೋಗಿಸುತ್ತಾರೆ. ಕಾಗದಕ್ಕೆ ತ್ರಾಣ ತರುವ ಸಲುವಾಗಿ ಅಲ್ಪಾಂಶ ರಾಸಾಯನಿಕ ಪಲ್ಪು ಬೆರಸಬೇಕಾಗುತ್ತದೆ

"ಮಾರ್ಚ್ ಆಫ್ ಇಂಡಿಯಾ" ದಿಂದ ರೂಪಾಂತರ

ರಾಸಾಯನಿಕ ಪಲ್ಪು ತುಟ್ಟಿಯಾದ ಪದಾರ್ಥ.

ಇತರ ಉತ್ತಮ ವರ್ಗದ ಕಾಗದಗಳು ಭಾರತದಲ್ಲಿ ತಯಾರಾಗುತ್ತಿದ್ದರೂ ನೂಸ್‌ಪ್ರಿಂಟ್ ತಯಾರಿಸಲು ಭಾರತದಲ್ಲಿ ಮುಖ್ಯ ತೊಂದರೆಯೆಂದರೆ ಯೋಗ್ಯ ಮರಗಳ ಅಭಾವ. ಪಾಶ್ಚಾತ್ಯ ದೇಶಗಳಲ್ಲಿ ನೂಸ್‌ಪ್ರಿಂಟ್ ತಯಾರಿಸಲು ಉಪಯೋಗಿಸುವ ಪೈನ್, ಸ್ಪ್ರೂಸ್ ಮತ್ತು ಫರ್ ಮೊದಲಾದವುಗಳ ಸಜಾತೀಯ ವೃಕ್ಷಗಳು ಹಿಮಾಲಯ ಪರ್ವತಗಳಲ್ಲಿ ಸಾಕಷ್ಟು ದೊರೆಯಬಹುದಾದರೂ ಅವು ಹೆಚ್ಚಾಗಿ ದುರ್ಗಮ ಪ್ರದೇಶಗಳಲ್ಲಿರುವುದರಿಂದ ಸಾಗಾಟ ವೆಚ್ಚವೇ ಬಹಳವಾಗಿ ಕಾಗದದ ಬೆಲೆ ಹೆಚ್ಚಾಗುತ್ತದೆ.

ಹೀಗೆ ಭಾರತದಲ್ಲಿ ನ್ಯೂಸ್‌ಪ್ರಿಂಟ್ ಅಗ್ಗವಾಗಿ ತಯಾರಾಗುವ ಸಂಭವ ನಿರಾಶಾದಾಯಕವಾಗಿ ಕಾಣಿಸುತ್ತಿದ್ದಾಗ ದೆಹರಾದೂನ ಅರಣ್ಯ ಸಂಶೋಧನ ಸಂಸ್ಥೆಯಲ್ಲಿ ನಡೆದ ಸಂಶೋಧನೆಗಳಲ್ಲಿ ಸಾಲಾಯಿ ವೃಕ್ಷಗಳು ನ್ಯೂಸ್‌ಪ್ರಿಂಟ್ ಉತ್ಪಾದನೆಗೆ ಅನುಕೂಲವಾಗಬಹುದೆಂದು ಗೊತ್ತಾಯಿತು. ಕೆಲ ಕಾಲ ಈ ಸಂಶೋಧನೆ ಅರಣ್ಯ ಸಂಶೋಧನ ಸಂಸ್ಥೆಯ ಕಡತಗಳಲ್ಲಿ ಹಾಗೇ ಹಳಸಿದ ಮೇಲೆ, ಕಾಗದದ ಉದ್ಯಮದ ಅನುಭವ ಲವಲೇಶವೂ ಇಲ್ಲದ ಖಾಸಗಿ ವ್ಯಕ್ತಿಯೊಬ್ಬನ ಮನವನ್ನು ಅದು ಆಕರ್ಷಿಸಿತು. ಮಧ್ಯಪ್ರದೇಶದ ಖಾಂಡವಾ ಭಾಗದ ಅರಣ್ಯಗಳಲ್ಲಿ ಸಲಾಯಿ ಮರ ಧಾರಾಳವಾಗಿ ಬೆಳೆಯುತ್ತದೆ. ಅಲ್ಲಿಯೇ ಬಿದಿರೂ ಬೆಳೆಯುತ್ತದೆ. ಸಲಾಯಿಯಿಂದ ವೃತ್ತಪತ್ರ ಕಾಗದವನ್ನು ತಯಾರಿಸುವ ಕಾರಖಾನೆಯನ್ನು ಮಧ್ಯ ಪ್ರದೇಶದಲ್ಲಿ ಏಕೆ ತೆರೆಯಬಾರದು?

ಸಲಾಯಿ ಕಟ್ಟಿಗೆ ಮತ್ತು ಖಾಂಡವಾ ಅರಣ್ಯಗಳಲ್ಲಿ ಬೆಳೆಯುವ ಒಂದು ಜಾತಿಯ ಬಿದಿರಿನ ಮಾದರಿಗಳನ್ನು ಅಮೇರಿಕಕ್ಕೆ ಕಳಿಸಿ ತಜ್ಞರ ಅಭಿಪ್ರಾಯ ಕೇಳಲಾಯಿತು. ದೊಡ್ಡ ಪ್ರಮಾಣದಲ್ಲಿ ನ್ಯೂಸ್‌ಪ್ರಿಂಟ್ ಉತ್ಪಾದನೆಗೆ ಅವು ಅತ್ಯುತ್ತಮವಾಗಿವೆಯೆಂದು ಅಲ್ಲಿಂದ ತೀರ್ಪು ಬಂತು. ೧೯೪೭ ಜನವರಿಯಲ್ಲಿ ನಾಯರ್ ಪ್ರೆಸ್ ಸಿಂಡಿಕೇಟ್ ಲಿಮಿಟೆಡ್ ಸಂಸ್ಥೆಯವರು ಮುಂಬಯಿಯಲ್ಲಿ ನ್ಯಾಶನಲ್ ನ್ಯೂಸ್‌ಪ್ರಿಂಟ್ ಆ್ಯಂಡ್ ಪೇಪರ್ ಮಿಲ್ಸ್ ಲಿಮಿಟೆಡ್ (ನೇಪಾ) ಎಂಬ ಸಮಷ್ಟಿಬಂಡವಳದ ಕಂಪನಿಯನ್ನು ಸ್ಥಾಪಿಸಿದರು.

ಇಟಾರಸಿ-ಭುಸಾವಳ ರೇಲ್ವೆ ಮಾರ್ಗದಲ್ಲಿ ಖಾಂಡವಾದಿಂದ ೩೦ ಮೈಲಿನ ಮೇಲೆ ಸುಂದ ಪರ್ವತಗಳ ತಪ್ಪಲಿನಲ್ಲಿ ಹೊಚ್ಚ ಹೊಸ ಔದ್ಯೋಗಿಕ ಪಟ್ಟಣವೊಂದು ತಲೆಯೆತ್ತಿತು. ಅದಕ್ಕೆ "ನೇಪಾ ನಗರ" ಎಂದೇ ಹೆಸರಿ ಲಾಗಿದೆ. ಅರಣ್ಯರಾಜಿಗಳ ಮಧ್ಯದಲ್ಲಿ ತಪತಿ ನದೀ ತೀರದಲ್ಲಿ ಹುಟ್ಟಿದ ಈ ಪಟ್ಟಣದಲ್ಲಿ ಕ ಗಳಿಗೆ ಪ್ರೀತಿಕರವಾದ ನವಿಲಿನ ಕೇಕೆಯನ್ನು ಇಂದೂ ಕೇಳಬಹುದು. ರಾತ್ರಿಗಳಲ್ಲಿ ಸರಿಗಳ ತೋಳಗಳ ಆಕ್ರೋಶವೂ ಹೃದಯಗಳನ್ನು ನಡುಗಿಸುವುದುಂಟು. ನೇಪಾನಗರದಲ್ಲಿ ಜನ ವಸತಿ ಪ್ರಾರಂಭವಾದ ಮೇಲೊಮ್ಮೆ ೧೫ ಅಡಿ ಉದ್ದವಾದ ಹೆಬ್ಬಾವೊಂದು ಮನೆಗಳ ಸಮೀ ದಲ್ಲೇ ಗುಂಡಿಕ್ಕಿ ಕೊಲ್ಲಲ್ಪಟ್ಟಿತು.

ನೇಪಾ ನಗರ ಕಾಗದ ಕಾರಖಾನೆಗೆ ಅತ ತ್ತಮ ಸ್ಥಳವೆನ್ನಬೇಕು. ಸುತ್ತಲ ೨೦-೩೦ ಮೈಲ ಅಂತರದಲ್ಲಿ ಕಾಗದ ತಯಾರಿಕೆಗೆ ಅಗತ್ಯವಾ ಸಲಾಯಿ ವೃಕ್ಷಗಳು ೭,೦೦,೦೦೦ ಎಕರೆಗಳ ಹುಲುಸಾಗಿ ಬೆಳೆಯುತ್ತಿವೆ. ಇಲ್ಲಿ ೧೦ ಲಕ್ಷ ಟನ್ ಸಲಾಯಿ ದಿಂಡುಗಳು ಪ್ರತಿ ವರ್ಷ ಹೊರ ಬಲ್ಲವು. ಯಾವ ಕಾಲದಲ್ಲಿಯೂ ಪೂರೈಕೆ ನಿ ಬಾರದೆಂದು ಮಧ್ಯಪ್ರದೇಶ ಸರಕಾರ ಸಾಲಾಯಿ ವೃಕ್ಷಗಳ ನಿರಂತರ ಬೆಳೆಗೆ ಯೋಗ್ಯ ವ್ಯವಸ್ಥೆ ಳನ್ನು ಮಾಡಿದೆ.

ನ್ಯೂಸ್‌ಪ್ರಿಂಟ್ ಉದ್ದಿಮೆಗೆ ಯಾಂತ್ರಿ ಪಲ್ಪಿನೊಡನೆ ಬೇಕಾದ ಇನ್ನೊಂದು ಕಚ್ಚಾ ಪದಾರ್ಥ ರಾಸಾಯನಿಕ ಪಲ್ಪು. ಹತ್ತಿರದ ಬೆ ತುಲ ಮತ್ತು ಹೋಶಂಗಾಬಾದ ಅರಣ್ಯಗಳ ಬೆಳೆಯುವ ಬಿದಿರಿನಿಂದ ಉತ್ತಮ ರಾಸಾಯನಿ ಪಲ್ಪನ್ನು ತಯಾರಿಸಲಾಗುತ್ತದೆ. ವರ್ಷವೆ ಶುದ್ಧವಾದ ನೀರು ತಪತೀ ನದಿಯಿಂದ ದೊ ಯುತ್ತದೆ. ಪ್ರತಿ ದಿನ ಬೇಕಾಗುವ ೮೦ ಲ ಗ್ಯಾಲನ್ ನೀರು ಬೇಸಗೆಯಲ್ಲಿ ನದಿಯಿಂ

ದೊರೆಯುವುದು ಕಷ್ಟವೆಂದು ಮನಗಂಡು ಮಧ್ಯ ಪ್ರದೇಶ ಸರಕಾರ ೧೫ ಅಡಿ ಎತ್ತರವಾದ ಆಣೆ ಕಟ್ಟನ್ನು ಕಟ್ಟಿ ೮೦ ಕೋಟಿ ಗ್ಯಾಲನ್ ನೀರು ನಿಲ್ಲಲು ಅನೂಕೂಲ ಮಾಡಿಕೊಟ್ಟಿದೆ.

ನೇಪಾ ಕಾಗದ ಮಿಲ್ಲಿನ ಪ್ರಾರಂಭಿಕ ಇತಿಹಾಸ ಅಷ್ಟು ಚೆನ್ನಾಗಿರಲಿಲ್ಲ. ೧೯೪೯ರ ಕೊನೆಯೊಳಗೇ ಕಂಪನಿಯ ಹಣಕಾಸಿನ ವ್ಯವಹಾರ ಅವ್ಯವಸ್ಥೆಯ ಸ್ಥಿತಿಯನ್ನು ತಲುಪಿಬಿಟ್ಟಿತ್ತು. ಆದರೆ ಇಷ್ಟು ಮಹತ್ವದ ರಾಷ್ಟ್ರೀಯ ಉದ್ಯಮವನ್ನು ಅದರ ಪಾಡಿಗೆ ಮುಳುಗಲು ಬಿಡುವುದು ಸಾಧ್ಯವಿರಲಿಲ್ಲ. ಮಧ್ಯಪ್ರದೇಶ ಸರಕಾರ ಸ್ವತಃ ಅದರ ಭಾರವನ್ನು ವಹಿಸಿಕೊಂಡಿತು.

ಇಂದು ನೇಪಾ ಕಾರಖಾನೆ ದೇಶದ ಉತ್ಕೃಷ್ಟ ಯಂತ್ರಸಜ್ಜಿತ ಕಾಗದ ಕಾರಖಾನೆಗಳಲ್ಲಿ ಒಂದಾಗಿದೆ. ಅದು ೨೨೬ ಅಂಗುಲ ಅಗಲದ ಕಾಗದವನ್ನು ತಯಾರಿಸಬಲ್ಲದು. ಕಳೆದ ವರ್ಷ ಅದು ಉತ್ಪಾದನೆಯನ್ನು ಪ್ರಾರಂಭಿಸಿದಾಗ ತಾನೇ ತಯಾರಿಸಿಕೊಂಡ ಸಲಾಯಿ ಯಾಂತ್ರಿಕ ಪಲ್ಪನ್ನುಪಯೋಗಿಸಿದರೂ ರಾಸಾಯನಿಕ ಪಲ್ಪನ್ನು ವಿದೇಶಗಳಿಂದ ಆಯಾತ ಮಾಡಬೇಕಾಗುತ್ತಿತ್ತು. ಆದರೆ ಈಗ ಸುತ್ತ-ಮುತ್ತಲ ಬಿದಿರಿನಿಂದಲೇ ದಿನಕ್ಕೆ ೪೦-೪೫ ಟನ್ ಸಲ್ಫೇಟ್ ರಾಸಾಯನಿಕ ಪಲ್ಪನ್ನು ಸಿದ್ಧಪಡಿಸುವ ಬೃಹತ್ ಯಂತ್ರಗಳು ಕೆಲಸಮಾಡತೊಡಗಿವೆ. ಯಾಂತ್ರಿಕ ಪಲ್ಪನ್ನು ದಿನಕ್ಕೆ ೯೦ ಟನ್ನಿನಂತೆ ತಯಾರಿಸುವ ಯಂತ್ರಗಳಿವೆ.

ನೇಪಾ ಕಾರಖಾನೆ ದಿನಕ್ಕೆ ೧೦೦ ಟನ್ ನ್ಯೂಸ್ ಪ್ರಿಂಟನ್ನು ಉತ್ಪಾದಿಸಬಲ್ಲದು. ವರ್ಷಕ್ಕೆ ೩೦,೦೦೦ ಟನ್ ಉತ್ಪಾದನೆ ಮಾಡಬಲ್ಲ ನೇಪಾ ನಗರ ಕಳೆದ ವರ್ಷ (೧೯೫೬) ಜನವರಿಯಲ್ಲಿ ಉತ್ಪಾದನೆ ಪ್ರಾರಂಭಿಸಿದಂದಿನಿಂದ ಅಕ್ಟೋಬರದ ವರೆಗೆ ೩,೦೦೦ ಟನ್ ಕಾಗದವನ್ನು ತಯಾರಿಸಿತು. ಇಂದು ಅದು ದಿನಕ್ಕೆ ೬೦ ಟನ್ನಿನಂತೆ ಉತ್ಪಾದಿಸುತ್ತಿದೆ. ಬೇಗನೆ ಅದು ತನ್ನ ಪರಮಾವಧಿ ಸಾಮರ್ಥ್ಯವನ್ನು ಮುಟ್ಟಿ ದಿನಕ್ಕೆ ೧೦೦ ಟನ್ ನ್ಯೂಸ್ ಪ್ರಿಂಟನ್ನು ದೇಶಕ್ಕೆ ಒದಗಿಸಲಿದೆ.

ನೇಪಾ ಪರಮಾವಧಿ ಉತ್ಪಾದನೆಯನ್ನು ಪ್ರಾರಂಭಿಸಿದಮೇಲೂ ದೇಶದ ನ್ಯೂಸ್ ಪ್ರಿಂಟ್ ಅವಶ್ಯಕತೆಯಲ್ಲಿ ೧/೩ ಅಂಶವನ್ನಷ್ಟೇ ಪೂರೈಸಬಲ್ಲದೆಂದು ಮರೆಯಬಾರದು. ಆದ್ದರಿಂದ ಇತರ ಕಡೆಗಳಲ್ಲಿ ನ್ಯೂಸ್‌ಪ್ರಿಂಟ್ ಕಾರಖಾನೆಗಳ ಉದಯಕ್ಕೆ ನೆರವಾಗಲು ಅದನ್ನು ಸಜ್ಜುಗೊಳಿಸಲಾಗುತ್ತಿದೆ. ನೇಪಾ ಕಾರಖಾನೆಯ ಸಂಶೋಧನ ವಿಭಾಗವು ನಿರಂತರವಾಗಿ ನ್ಯೂಸ್‌ಪ್ರಿಂಟ್ ಉತ್ಪಾದನೆಗೆ ಇತರ ಕಚ್ಚಾ ಸಾಮಗ್ರಿಗಳು ಎಷ್ಟು ಪ್ರಯೋಜನಕಾರಿಯಾಗಬಹುದೆಂದು ಪರೀಕ್ಷಿಸುತ್ತಿದೆ. ಮದ್ರಾಸ ರಾಜ್ಯದಲ್ಲಿ ಸಿಗುವ ಸಲಾಯಿ ಜಾತಿಯ ವೃಕ್ಷಗಳೂ ಇತರ ಕೆಲ ಕಟ್ಟಿಗೆಗಳೂ ಪರಿಶೀಲನೆಯಲ್ಲಿವೆ. ಪ್ರಥಮ ನ್ಯೂಸ್ ಪ್ರಿಂಟ್ ಕಾರಖಾನೆಯು ಬರಲಿರುವ ಹೊಸ ಕಾರಖಾನೆಗಳಿಗಾಗಿ ಕೆಲಸಗಾರರನ್ನು ತರಬೇತುಗೊಳಿಸುವ ಸ್ಥಳವೂ ಆಗಿದೆ.

ನೇಪಾ ಅಲ್ಲದೆ ದಕ್ಷಿಣದಲ್ಲೊಂದು ಮತ್ತು ಬಂಗಾಲದಲ್ಲಿ ಇನ್ನೊಂದು ನ್ಯೂಸ್‌ಪ್ರಿಂಟ್ ಕಾರಖಾನೆಯನ್ನು ೧೯೬೦ ರೊಳಗಾಗಿ ಅಣಿಗೊಳಿಸುವ ಯೋಜನೆಗಳಾಗಿವೆ. ಮದ್ರಾಸಿನಲ್ಲಿ ಚರ್ಮಹದ ಮಾಡಲು ಉಪಯೋಗಿಸುವ ವ್ಯಾಟಲ್ ಎಂಬ ಕಟ್ಟಿಗೆಯು ಬಿದಿರಿನಂತೆ ರಾಸಾಯನಿಕ ಪಲ್ಪಿನ ತಯಾರಿಕೆಗೆ ಉತ್ತಮವಾಗಿದೆಯೆಂದು ಕಂಡುಬಂದಿದೆ. ಯಾಂತ್ರಿಕ ಪಲ್ಪಿನ ನಿರ್ಮಾಣಕ್ಕೆ ಕಬ್ಬಿನ ಹಿಪ್ಪೆ ಅನೂಕೂಲವಾಗಿದೆಯೆಂದೂ ಎರಡು ಟನ್ ಒಣ ಹಿಪ್ಪೆಯಿಂದ ಒಂದು ಟನ್ ಪಲ್ಪು ತಯಾರಿಸಬಹುದೆಂದೂ ಸಂಶೋಧನೆಗಳು ತೋರಿಸಿಕೊಟ್ಟಿವೆ. ಭಾರತದ ಸಕ್ಕರೆ ಕಾರಖಾನೆಗಳಲ್ಲಿ ವರ್ಷಕ್ಕೆ ೧೫ ಲಕ್ಷ ಟನ್ ಕಬ್ಬಿನ ಹಿಪ್ಪೆ ಬಾಯ್ಲರುಗಳಲ್ಲಿ ನೀರು ಕುದಿಸಲು ಉಪಯೋಗವಾಗುತ್ತಿದೆ. ಈ ಬಾಯ್ಲರುಗಳಿಗೆ ಕಲ್ಲಿದ್ದಲು ಉಪಯೋಗಿಸುವುದಾದರೆ ಅದೆಲ್ಲ ನ್ಯೂಸ್‌ಪ್ರಿಂಟ್ ತಯಾರಿಕೆಗೆ ಒದಗಬಲ್ಲದು.

ಇದೆಲ್ಲ ಸಾಧ್ಯವಾಗಲು ಇನ್ನೂ ಕೆಲ ವರ್ಷಗಳು ಬೇಕಾಗಬಹುದಾದರೂ ನೇಪಾ ಕಾರಖಾನೆ ಆಗಲೇ ಸಾಧಿಸಿದ್ದು ಅಲ್ಪವಲ್ಲ. ಅದು ವರ್ಷಕ್ಕೆ ಒಂದು ಕೋಟಿ ರೂಪಾಯಿಯಷ್ಟು ವಿದೇಶಿ ವಿನಿಮಯವನ್ನು ದೇಶಕ್ಕೆ ಉಳಿಸಿಕೊಡುತ್ತಿದೆ. ದೇಶವು ವಿದೇಶಿ ವಿನಿಮಯದ ಕೊರತೆಯಿಂದ ಬಳಲುತ್ತಿರುವಾಗ ಬೇರೆ ವಿಧದಿಂದ ಯಾವ ಉಪಯೋಗಕ್ಕೂ ಬಾರದ ಸಲಾಯಿ ವೃಕ್ಷಗಳಿಂದ ಇಷ್ಟು ದೊಡ್ಡ ಉದ್ಯಮವೊಂದು ತಲೆಯೆತ್ತಿದ್ದು ಸಾಲದೆ?

---

## ಇಪ್ಪತ್ತರಿಂದ ಮುಂದೆ —

ಇಪ್ಪತ್ತನೆಯ ವಯಸ್ಸಿನಲ್ಲಿ ನಾವು ಜಗತ್ತು ನಮ್ಮ ಬಗ್ಗೆ ಏನು ವಿಚಾರ ಮಾಡುವುದೆಂದು ಗಣಿಸುವುದೇ ಇಲ್ಲ. ಮೂವತ್ತರಲ್ಲಿ ಜಗತ್ತು ನಮ್ಮ ವಿಷಯ ಏನು ಆಲೋಚಿಸುತ್ತಿದೆ ಎಂದೇ ನಮಗೆ ಚಿಂತೆ. ನಲುವತ್ತಾಯಿತೋ ಜಗತ್ತು ನಮ್ಮ ಬಗ್ಗೆ ಆಲೋಚಿಸುತ್ತಲೇ ಇರಲಿಲ್ಲ ಎಂದು ನಾವು ಕಂಡುಕೊಳ್ಳುತ್ತೇವೆ.

— ಟುಡೇಸ ಚಕ್‌ಲ್

## ಸಂಶೋಧನೆ

ಅವಳು ಅಸೂಯಾ ಪರಳಾದ ತರುಣಿ. ಪ್ರತಿ ಸಂಜೆಯೂ ಗಂಡನ ಅಂಗಿಯನ್ನು ಪರೀಕ್ಷಿಸಿ ಅವನ ಅಪರಾಧವನ್ನು ಪತ್ತೆ ಹಚ್ಚಿ ಅವನ ಕೋಟಿನಲ್ಲಿ ಒಂದು ಕೂದಲು ಕಾಣಿಸಿಕ್ಕೊಡನೆಯೇ ರಾದ್ಧಾಂತ ಮಾಡಿಬಿಡುತ್ತಿದ್ದಳು.

ಒಂದು ಸಂಜೆ ಅವನ ಕೋಟಿನಲ್ಲಿ ಒಂದೇ ಒಂದು ಕೂದಲೂ ಅವಳಿಗೆ ದೊರಕದಾದಾಗ ಅಳುತ್ತ ಕುಳಿತುಬಿಟ್ಟಳವಳು: “ಆ? ಈ ಬಾರಿ ಕೂದಲಿಲ್ಲದ ಸಾಣೆ ತಲೆಯ ಹೆಣ್ಣಿನ ಬೆನ್ನು ಹತ್ತಿದ್ದೀರಾ?” ಅವಳು ಉದ್ಗರಿಸಿದಳು.

ಸುಶಿಕ್ಷಿತರು ರೈತರಾಗಲು ಯಾಕೆ
ಹಿಂಜರಿಯುತ್ತಾರೆ ?

# ನಾನು ಸುಶಿಕ್ಷಿತ ರೈತನಾದದ್ದು

[ ಒಂದು ಸತ್ಯ ಅನುಭವ ]

ಆರ್. ಬಿ. ಕುಲಕರ್ಣಿ

ಆ ಒಂದೇ ಒಂದು ಘಟನೆ ನನ್ನ ಜೀವನದ ದಾರಿಯನ್ನೇ ಬದಲಿಸಿತು. ಅದರಲ್ಲಿ ಅಗಾಧವಾದ, ಅದ್ಭುತವಾದ ಯಾವ ಅಂಶವೂ ಇರಲಿಲ್ಲ. ಆದರೂ ಇಪ್ಪತ್ತು ವರ್ಷಗಳ ಹಿಂದೆ ನಡೆದ ಆ ಘಟನೆಯು ನಿನ್ನೆ ಮೊನ್ನೆ ನಡೆದಂತೆ ಇಂದಿಗೂ ನನ್ನ ಮನಸಿನಲ್ಲಿ ಅಚ್ಚೊತ್ತಿದೆ.

ಒಮ್ಮೊಮ್ಮೆ ನನ್ನಷ್ಟಕ್ಕೆ ನಾನೇ ವಿಚಾರಿಸುವದುಂಟು: ನಾನು ಅಂದಿನ ಘಟನೆಯಿಂದ ಭಾವ-ನಾವಶನಾಗಿ ಹಳ್ಳಿಯನ್ನು ಬಿಟ್ಟು ಶಹರ ಸೇರಿದ್ದು ಸರಿಯೋ ತಪ್ಪೋ? ಇದರ ನಿರ್ಣಯ ಕೊಡಲು ಇಂದಿಗೂ ಅಸಮರ್ಥನಾಗಿರುವೆ. ಅಂತೂ ಶಹರ ಸೇರಿ ಸುಶಿಕ್ಷಿತರ ಗುಂಪಿನಲ್ಲಿ ಕೂಡಿಕೊಂಡೆ. ಇಂದು ಯಾರೂ ನನ್ನನ್ನು "ಜೀತದಾಳು" ಎಂದು ಕರೆಯುವದಿಲ್ಲ. ನಿಜವಾಗಿ ಕೇಳಿದರೆ ಇಂದು ನಾನು ಜೀತದ ಆಳೇ. ಆದರೆ ಏನು ಮಾಡಲಿ? ಜಗತ್ತಿನ ರೀತಿ ವಿಚಿತ್ರವಾಗಿದೆ. ಅಂದು ಭೂಮಿತಾಯಿಯ ಚೊಚ್ಚಲು ಮಗನಾಗಿ ಹಕ್ಕಿಯಂತೆ ಸ್ವತಂತ್ರನಾಗಿದ್ದ ನನ್ನನ್ನು ಜನ ಜೀತದಾಳೆಂದು ಭಾವಿಸಿತು. ಆ ಸ್ವತಂತ್ರ ರೈತಜೀವನಕ್ಕೆ ತಿಲಾಂಜಲಿ ಬಿಟ್ಟು ಪತ್ರಿಕೋದ್ಯಮಿಯಾಗಿ ಪರಾವಲಂಬಿ ಜೀವನಕ್ಕಿಳಿದ ನನ್ನನ್ನು ಜನ "ರಾಯರೇ" ಎನ್ನುತ್ತದೆ. ಸ್ವರ್ಗದಿಂದ ಶಿವನ ಜಡೆಗೆ, ಅಲ್ಲಿಂದ ಭೂಮಿಗೆ ಬಿದ್ದು ಹಾಗೇ ಅಧಃಪತನ ಹೊಂದುತ್ತ ಗಂಗಾನದಿ ಕೊನೆಗೆ ಸಮುದ್ರ ಪಾಲಾದಂತೆ ನನ್ನ ಸ್ಥಿತಿ ಆಯಿತು ಎಂದು ಒಮ್ಮೊಮ್ಮೆ ನನಗೆ ಕೆಡಕೆನಿಸುತ್ತದೆ. ಆದರೇನು? ದಾಸ್ಯಕ್ಕೆ ಒಗ್ಗಿಕೊಂಡ ಸಾಕಿದ ನಾಯಿ ಸ್ವಾತಂತ್ರ್ಯಕ್ಕೆ ಅಳುಕುವಂತೆ ನಾನಾಗಿದ್ದೇನೆ. ಇನ್ನು ನಾನು ರೈತಜೀವನದ ಸ್ವಾತಂತ್ರ್ಯಕ್ಕೆ ಮರಳಲಾರೆ.

ಅದು ನಡೆದದ್ದು ಹೀಗೆ. ಪದವೀಧರನಾದ ಮೇಲೆ ಸುಶಿಕ್ಷಿತ ನಿರುದ್ಯೋಗಿಗಳ ಗುಂಪಿನಲ್ಲಿ ಸೇರಿ ನೌಕರಿ ಸಿಗುವ ಮೊದಲೇ "ಅತ್ಯಂತ ವಿಧೇಯ ಸೇವಕ" ಎಂದು ಕೊನೆಗೊಳ್ಳುವ ಅರ್ಜಿಗಳನ್ನು ಬರೆಯುತ್ತ ಕೂಡ್ರಲು ನನ್ನ ಮನಸ್ಸು ಒಪ್ಪಲಿಲ್ಲ. ಆದ್ದರಿಂದ ಸುಶಿಕ್ಷಿತರು ಮಾಡದ ಒಂದು ಕೆಲಸವನ್ನು ನಾನು ಮಾಡಿದೆ. ನಾನು ರೈತನಾಗಲು ನಿರ್ಧರಿಸಿದೆ. ಹಿರಿಯರಿಂದ ಬಂದ ಭೂಮಿಯನ್ನು ಉತ್ತು ಉದರನಿರ್ವಾಹ ಮಾಡುವೆನೆಂದು ಹಳ್ಳಿಗೆ ಹೋಗಿ ನೆಲಸಿದೆ.

—ಮತ್ತು ನಾನು ಅದರಲ್ಲಿ ಯಶಸ್ವಿಯಾದೆ.

"ರಾಯರ ಒಕ್ಕಲುತನ" ಎಂದು ನಮ್ಮ ಹಳ್ಳಿಗಳಲ್ಲಿ ರೈತರು ಮೇಲ್ವರ್ಗದವರ ಕೃಷಿಯನ್ನು-

ಉಪಹಾಸ ಮಾಡುತ್ತಾರೆ. ಅದಕ್ಕೆ ನಾನು ಗುರಿಯಾಗಬಾರದೆಂದು ಒಕ್ಕಲುತನದ ಪ್ರತಿಯೊಂದು ಕೆಲಸವನ್ನು ಸ್ವತಃ ಮಾಡಲು ಸಿದ್ಧನಾದೆ. ಕಷ್ಟವೇನೋ ಆಯಿತು. ಬೆಳಗಿನ ಝಾವದಿಂದ ಸಂಜೆಯ ವರೆಗೆ ಬಿಡ.ವಿಲ್ಲದ ದುಡಿತ ಅನಿವಾರ್ಯವಾಯಿತು. ಆದರೆ ಕಲಿತ ವಿದ್ಯೆಯಿಂದ ಬಂದ ಶೋಧಕ ಬುದ್ಧಿಯನ್ನು ಒಕ್ಕಲುತನಕ್ಕೆ ಅಳವಡಿಸಿದ್ದರಿಂದ ಭೂಮಿತಾಯಿ ದುಡಿತಕ್ಕೆ ತಕ್ಕ ಫಲವಿತ್ತಳು. ನೆರೆಹೊರೆಯಲ್ಲಿ ತಲೆ-ತಲಾಂತರಗಳಿಂದ ಒಕ್ಕಲುತನದಲ್ಲಿ ಪಳಗಿದವರ ಹೊಲಗಳಿಗಿಂತ ನನ್ನ ಹೊಲಗಳು ಹುಲುಸಾಗಿ ಬೆಳೆದು ಎದ್ದು ಕಾಣುತ್ತಿದ್ದವು. ದಾರಿಗುಂಟ ಹೋಗುವ ಜನರು ನಿಂತು ಬೆಳೆ ನೋಡಿ ಪ್ರಶಂಸೋದ್ಗಾರಗಳನ್ನು ಹೊರಡಿಸುವಂತಾಯಿತು. ಕೂಸಿನ ವರ್ಣನೆಯನ್ನು ಇತರರ ಬಾಯಿಂದ ಕೇಳಿದಾಗ ತಾಯಿಯ ಮುಖ ಅರಳುವಂತೆ ನನ್ನ ಮುಖ ಅರಳುತ್ತಿತ್ತು.

ಇದು ಮೂರು ವರ್ಷ ಸಾಗಿತು. ನಾನೀಗ ನೆರೆಹೊರೆಯ ಹಳ್ಳಿಗಳಲ್ಲಿ ಆದರ್ಶ ರೈತನೆಂದು ಹೆಸರಾದೆ. ರೈತರು ಆತ್ಮೀಯ ಭಾವನೆಯಿಂದ ಒಕ್ಕಲುತನದ ವಿಚಾರಗಳಲ್ಲಿ ನನ್ನ ಸಲಹೆ ಕೇಳತೊಡಗಿದರು. ನಾನು ಒಂದು ತರಹದ ಅನಧಿಕೃತ "ಕೃಷಿ ಪಂಡಿತ"ನೇ ಆದೆನೆನ್ನಿ.

ಅಷ್ಟರಲ್ಲಿ ಇದು ನಡೆಯಿತು....

ಜನೆವರಿ ತಿಂಗಳು. ಜೋಳದ ಪೀಕು ಕಾಳು ಹಿಡಿದು ಬೆಳಸಿಗೆ ಬಂದಿತ್ತು. ಹಕ್ಕಿಯ ಹಿಂಡುಗಳನ್ನು ಚದರಿಸಲು ಕವಣೆಕಲ್ಲು ತೂರಿ ತೂರಿ, ಕೂಗಿ ಕೂಗಿ ದಣಿದಿದ್ದೆ. ಬಿಸಿಲು ಏರಿದಂತೆ ಹಕ್ಕಿಗಳು ಹಳ್ಳದ ದಂಡೆಯ ಜಾಲಿಗಿಡಗಳಲ್ಲಿ ವಿಶ್ರಾಂತಿ ಪಡೆದಿದ್ದವು. ಇದೇ ಸಂಧಿಯನ್ನು ಸಾಧಿಸಿ ಮನೆಗೆ ಹೋಗಿ ಊಟ ತೀರಿಸಿಕೊಂಡು ಬರುವದು ನನ್ನ ರೂಢಿ. ಆಮೇಲೆ ಇದ್ದೇ ಇದೆ ಹಕ್ಕಿ ಕಾವಲು, ರಾತ್ರಿ ಹೊಲದ ಬದಿಯಲ್ಲೇ ಕಂಬಳಿ ಹೊದ್ದು ಶಯನ, ಚಳಿಯಾದರೆ ಎದ್ದು ಜಾಲಿಕೊರೆಯ ಜ್ವಲನ....

ಅಂದು ಮಧ್ಯಾಹ್ನವೂ ಎಂದಿನಂತೆ ಮನೆಗ
ಹೊರಡಲು ಅಣಿಯಾಗಿದ್ದೆ. ಮನೆಯಲ್ಲಿ ಎಮ್ಮೆ
ಇತ್ತು. ಅದಕ್ಕಾಗಿ ಮೇವು ಹೊತ್ತುಕೊಂಡು
ಹೋಗುವ ಸಿದ್ಧತೆ ಮಾಡಿಕೊಂಡಿದ್ದೆ. ಅಷ್ಟರಲ್ಲಿ
ಮಧ್ಯಮ ವಯಸ್ಸಿನ ಗೃಹಸ್ಥನೊಬ್ಬ ಕುದುರೆ
ಹತ್ತಿಕೊಂಡು ದಾರಿಗುಂಟ ಊರ ಕಡೆಗೆ ಹೊ
ಟವನು ನಮ್ಮ ಹೊಲದ ಹತ್ತಿರ ಗಕ್ಕನೆ ಕುದುರೆ
ಯನ್ನು ನಿಲ್ಲಿಸಿ, ಮೇವಿನ ದೊಡ್ಡ ಹೊರೆಯನ್ನು
ತಲೆಗೇರಿಸಿಕೊಳ್ಳುವ ಸಾಹಸದಲ್ಲಿದ್ದ ನನ್ನ
"ಇಲ್ಲಿ ಬಾ ತಮ್ಮಾ" ಎಂದು ಕೈ ಮಾಡಿ ಕರೆದ

"ಇಲ್ಲಿ ಕುಲಕರ್ಣಿ ಭೀಮರಾಯಪ್ಪನವ
ಹೊಲ ಯಾವುದು ?"

"ಇದೇ ಅವರ ಹೊಲ; ಯಾಕರೀ ?"
ಎಂದು ನಾನು ಅವನ ಮುಖ ನೋಡಿದೆ.

ಆ ಗೃಹಸ್ಥ ಸುತ್ತಲೂ ಪ್ರಶಂಸಾತ್ಮಕ ದೃಷ್ಟಿ
ಬೀರಿ, "ಹಳ್ಳ ದಾಟಿದ ಮೇಲೆ ದಾರಿ ಭೀಮರಾ
ಯರ ಹೊಲದಲ್ಲಿಯೇ ಹಾದು ಹೋಗುತ್ತದ
ಅಂತ ಹೇಳಿದ್ದರು. ಅದಕ್ಕೇ ಕೇಳಿದೆ. ಬೆ
ಬಹಳ ನೆಟ್ಟಗದೆ... ಹೊಲಾ ಏನು ಲಾವಣೀ
ಮಾಡಿದ್ದೀಯೋ ಕೋರು ಪಾಲಿನಿಂದಲೊ ?
ಎಂದು ಕೇಳಿದ.

ಈ ಪ್ರಶ್ನೆಯಿಂದ ನಾನು ಕ್ಷಣಕಾಲ ಅಪ್ರತಿ
ನಾದೆ. ಆದರೆ ಬೆಳೆಯ ಪ್ರಶಂಸೆ ಕೇಳಿ ಉಬ್ಬಿದ
ನಾನು ಪ್ರಶ್ನೆಯ ವ್ಯಂಗ್ಯಾರ್ಥವನ್ನು ಹಚ್ಚಿಕೊ
ಳ್ಳದೆ ಇದು ರೈತನಿಗೆ ಕೊಟ್ಟು ಬೆಳೆಸಿದ ಬೆಳೆಯ
ಎಂದು ಆ ಗೃಹಸ್ಥನಿಗೆ ತಿಳಿಸಬೇಕೆಂದು
"ಮನೀಲೆ ಸಾಗುವಳಿ ಮಾಡಿದ ಭೂಮಿ ಇದು
ಎಂದೆ.

"ಭೀಮರಾಯ ಸ್ವಂತ ಸಾಗುವಳಿ ಮಾ
ತ್ತಾನೆಂದು ನಾನೂ ಕೇಳಿದ್ದೆ. ಆದರೂ ನೀನ
ಹೊಲದಲ್ಲಿದ್ದದ್ದು ನೋಡಿ ಕೇಳಬೇಕಾಯಿತ
ನೀನು ಅವರಲ್ಲಿ ಜೀತಾ ನಿಂತು ಎಷ್ಟು ವರ್ಷವಾ
ಯಿತು ?"

ನನಗೆ ಮರ್ಮಾಘಾತವಾಯಿತು. ಭೂಮಿಯನ್ನು ಸ್ವಂತ ಸಾಗುವಳಿ ಮಾಡುವ ನನ್ನನ್ನು ಈತನು ಆಳುಮಗನೆಂದು ಭಾವಿಸಿಕೊಂಡನಲ್ಲ! ಅವನ ಗ್ರಹಿಕೆಯನ್ನು ಹೋಗಲಾಡಿಸಬೇಕೆಂದೊಮ್ಮೆ ತೋರಿದರೂ ಮರುಕ್ಷಣದಲ್ಲಿ ನನ್ನನ್ನು ಆಳುಮಗನೆಂದು ಭಾವಿಸಿದ ಈ ಕುಂಠನಿಗೆ ನಾನೇ ಭೀಮರಾಯರ ಮಗ, ಇಷ್ಟು ಬೆಳೆ ಬರುವಂತೆ ಮಾಡಿದವ ನಾನೇ ಎಂದು ಯಾಕೆ ಹೇಳಬೇಕು? ಆಳುಮಗನೆಂದು ಭಾವಿಸಿದರೆ ಭಾವಿಸಿದ. ನನಗೇನು ಈತ ಹೆಣ್ಣು ಕೊಡಬೇಕಾಗಿದೆಯೆ? ಎಂದುಕೊಂಡು ಆಳ್ಮಗನಂತೆಯೇ ಅವನಿಗೆ ಉತ್ತರ ಕೊಡಲು ನಿರ್ಧರಿಸಿದೆ.

"ನಾನರೀ? ಸಣ್ಣವನಿದ್ದಾಗಿಂದ ಅವರ ಮನ್ಯಾಗೇ ಇದ್ದನರೀ. ಅವರೇ ನನ್ನ ಬೆಳಸಿ ದೊಡ್ಡವನ್ನ ಮಾಡ್ಯಾರರೀ" ಎಂದು ಸತ್ಯಕ್ಕೆ ಹತ್ತಿರವಾಗಿರುವಂತೆ ನುಡಿದೆ.

ಗೃಹಸ್ಥ ಕುದುರೆಯೇರಿ ಮುಂದೆ ಸಾಗಿದ. ನಾನು ಚಾಟಿ (ಹಸಿ ಜೋಳದ ದಂಟು) ಹೊರೆ ಹೊತ್ತು ಅವನ ಬದಿಯಲ್ಲೇ ಸಾಗಿದ್ದೆ. ಸ್ವಲ್ಪ ಹೊತ್ತು ಮೌನವಾಗಿದ್ದ ಬಳಿಕ ಆತ ಕುದುರೆಯನ್ನು ನಿಲ್ಲಿಸಿ ನನ್ನ ಕಡೆ ಹೊರಳಿ, "ಏ ತಮ್ಮಾ, ಈಗೇನು ಮನಿಗೆ ಹೊಂಟಿರುವಿಯೇನು?" ಎಂದು ಮಾತಿಗೆ ಆರಂಭಿಸಿದ.

"ಹೂನ್ರಿ" ಎಂದು ಹೇಳಿ ನಾನು ಅವನನ್ನು ದಾಟಿ ಮುಂದೆ ಹೋಗುವದರಲ್ಲಿದ್ದೆ. ಅಷ್ಟರಲ್ಲಿ ಅವನು, "ಎಂಥಾ ದೊಡ್ಡ ಹೊರೆ ಹೊತ್ತೀದಿ. ಸ್ವಲ್ಪ ಇಳಸಲ್ಲ. ಎಲೆ ಅಡಿಕೆ ಹಾಕಿಕೊಂಡು ಹೋಗೋಣಂತೆ" ಎಂದು ಕುದುರೆಯಿಂದಿಳಿದ.

ನಾನು ಅವನಿಗೆ ಯಾಕೆ ವಿಧೇಯನಾಗಿ ವರ್ತಿಸಿದೆನೋ ನನಗೇ ಗೊತ್ತಿಲ್ಲ. ನನ್ನಲ್ಲಿ ಆಗಲೇ ಆಳುಮಗನ ಮನೋವೃತ್ತಿ ಬಂದುಬಿಟ್ಟಿತ್ತೇನೋ. ಅಥವಾ ನನ್ನೊಳಗಿನ ತುಂಟತನದ ಆಟದಿಂದ ಈ ಮನುಷ್ಯ ಇನ್ನೇನೇನು ಮೂಢ ಕಲ್ಪನೆಗಳನ್ನು ಮಾಡಿಕೊಂಡಿದ್ದಾನೋ ನೋಡೋಣವೆಂಬ ಕಿಡಿಗೇಡಿ ವಿಚಾರದಿಂದ– ಇರಬಹುದು. ನಾನು ಹೊರೆ ಇಳಿಸಿದೆ. ಗೃಹಸ್ಥ ಗಿಡದ ನೆರಳಲ್ಲಿ ಕುಳಿತು ಚಂಚಿ ಬಿಚ್ಚಿದ. ಅಥವಾ ಮನದಲ್ಲಿ ಮೆಲುಕು ಹಾಕುತ್ತಿದ್ದ ವಿಚಾರಗಳನ್ನೇ ಬಿಚ್ಚಿದ ಎಂದರೂ ತಪ್ಪಲ್ಲ.

"ಭೀಮರಾಯರ ಮಗ ರಾಮರಾಯರು ಊರಲ್ಲಿ ಇದ್ದಾರೇನು?" ಅವನು ಅಡಿಕೆಯ ಹೋಳನ್ನು ನನ್ನ ಕೈಗೆ ದಾಟಿಸುತ್ತ ಕೇಳಿದ ಮೊದಲನೇ ಪ್ರಶ್ನೆ.

"ಇದ್ದಾರರೀ"ಎಂದು ಚುಟುಕು ಉತ್ತರವಿತ್ತು ಅಡಿಕೆಹೋಳನ್ನು ಬಾಯಿಗೆ ಹಾಕಿಕೊಂಡೆ.

"ಅವರು ಇನ್ನೂ ಯಾಕೆ ಲಗ್ನ ಆಗಿಲ್ಲ? ಬಿ. ಎ. ಆಗಿ ಮೂರು ವರ್ಷ ಆಯಿತಂತಲ್ಲ!" ನನ್ನ ಮುಖವನ್ನು ನೇರವಾಗಿ ನೋಡದೆ ಅವನು ಅಡಕೊತ್ತಿನಿಂದ ತನಗಾಗಿ ಅಡಕೆಯನ್ನು ಸಣ್ಣಾಗಿ ಕತ್ತರಿಸತೊಡಗಿದ.

ನಾನು ಗೊಂದಲದಲ್ಲಿ ಬಿದ್ದೆ. ನಾನು ಇನ್ನೂ ಯಾಕೆ ಲಗ್ನವಾಗಿಲ್ಲ? ನನಗೂ ಅದು ಸರಿಯಾಗಿ ಗೊತ್ತಿದ್ದಿಲ್ಲ. ನನ್ನ ಒಕ್ಕಲತನದ ಹವ್ಯಾಸದಲ್ಲೇ ಮುಳುಗಿದ್ದ ನಾನು ಆ ವಿಚಾರವನ್ನೇ ಮಾಡಿರಲಿಲ್ಲ.

ನನ್ನ ಮನಸಿನ ಗೊಂದಲ ಅವನಿಗೆ ತಿಳಿಯಿತೋ ಏನೋ. ಕತ್ತರಿಸಿದ ಅಡಿಕೆಯನ್ನು ಬಾಯಿಗೆ ಹಾಕಿಕೊಂಡು, "ರಾಮರಾಯರ ಸಂಗಡ ಇಂಥ ವಿಷಯ ಮಾತಾಡುವ ಸಲಿಗೆ ನಿನಗೆ ಇರಲಿಕ್ಕಿಲ್ಲ. ಹೋಗಲಿ ಬಿಡು. ಅವರು ಸ್ವಭಾವದಲೇ ಹ್ಯಾಂಗಪ್ಪಾ?" ಎಂದ.

ನನ್ನ ಕುತೂಹಲ ಕೆರಳಿತು. "ರಾಮಣ್ಣೋರು ದೇವರಂಥ ಮನಶ್ಯಾ ಅಂತ ಊರೆಲ್ಲ ಹೇಳೋ ಮಾತು. ನನಗಂತೂ ಅವರು ಜೀವದ ಗೆಳೆಯರ ಹಾಂಗ ಅದಾರು. ಕೂಡಿ ಆಡಿದವರು" ಎಂದು ಬಳಿಕ, "ಯಾಕರಿ, ಒಳ್ಳೇ ಕೇಳಲಿಕ್ಕೆ ಹತ್ತೀರಿ? ಎಂದು ನಾನೂ ಒಂದು ಬಾಣ ಬಿಟ್ಟೆ.

ಅವರಿಗೆ ಆನಂದವೆನಿಸಿರಬೇಕು. ದೊಡ್ಡ ವೀಳ್ಯದೆಲೆಗೆ ಸುಣ್ಣ ಹಚ್ಚಿ ನನ್ನ ಕಡೆ ಒಗೆದು

ಆತ್ಮೀಯತೆಯಿಂದ, "ರಾಮರಾಯರ ಲಗ್ನ ಈ ವರ್ಷ ಮಾಡುವದು ಗೊತ್ತಾಗಿದೆಯೇನು? ನಾನೂ ಹೀಗೆ ವರ ನೋಡಬೇಕಂತ ಹೊರಟದ್ದು. ಅದಕ್ಕೇ ನಿನ್ನ ಕೇಳಿದೆ ಏನಪಾ" ಎಂದು ತಂಬಾಕಿನ ಪುಡಿಯನ್ನು ಫಕ್ಕನೆ ಬಾಯಿಗೆ ಹಾಕಿಕೊಂಡು, "ನೀನು ತಂಬಾಕದ ಅಭ್ಯಾಸ ಏನಾರೆ—?" ಎಂದು ಸಲಿಗೆಯಿಂದಲೇ ಕೇಳಿದ.

ಈ ಆಟ ಬಹಳ ದೀರ್ಘಕ್ಕೆ ಹೋಯಿತೆಂದು ನನಗನಿಸಿತು. "ಇಲ್ಲ ಬಿಡರಿ" ಎಂದವನೇ ನಾನು ಗಡಿಬಿಡಿಯಿಂದ ಎದ್ದೆ. ಆದರೆ ಆ ಗೃಹಸ್ಥ ಮಹಾ ಮುತ್ಸದ್ದಿ ಇದ್ದ. ಆತ ಆಗ್ರಹದಿಂದ, "ಕೂಡ್ರೀ ತಮ್ಮಾ, ಇಷ್ಟ್ಯಾಕ ಅವಸರಾ ಮಾಡತಿ? ನಿನ್ನ ಹೆಸರರೇ ಏನಪಾ?" ಎಂದ.

"ನನ್ನ ಹೆಸರರೆ? ರಾಮು ಅಂತ ಕರೀತಾರರಿ" ಎಂದುತ್ತರಿಸಿ ನಿರ್ಧಾರದಿಂದ ಬಾಟಿಯ ಹೊರಗೆ ಕೈ ಹಾಕಿದೆ. ಗಿಡಕ್ಕೆ ಕಟ್ಟಿದ ಹಸಿದ ಕುದುರೆ ಲಗಾಮು ಹರಿಯುವಂತೆ ಜೋಲಿ ಹೊಡೆದದ್ದರಿಂದ ಅದಕ್ಕೊಂದು ಹಿಡಿ ಬಾಟಿ ಒಗೆದೆ. ಅಷ್ಟರಲ್ಲಿ ಆ ಗೃಹಸ್ಥ, "ಒಳ್ಳೇ ಹೆಸರು. ರಾಮಾ, ರಾಮರಾಯರು ಎಂಥಾ ಕನ್ಯಾ ಒಪ್ಪತಾರಂತ ನಿನಗನಿಸತದಪಾ? ಕೂಡಿ ಆಡಿದವ ಅಂತೀದೀ. ಅವರ ಮನಸಿನೊಳಗಿನ ಮಾತು ತಿಳಿದಿರಬೇಕಲಾ?"

"ಛೇ ಬಿಡರಿ. ಇಂಥ ಮಾತನೂ ಅವರು ಆಡಿದ್ದು ಕೇಳಿಲ್ಲ ನಾ" ಎಂದು ಹುಚ್ಚು ನಗೆ ನಕ್ಕುಬಿಟ್ಟೆ.

"ಆದಿರಲಿ. ಅವರು ನೋಡಿದ ಕನ್ಯಾ ಯಾವ ಯಾವ ಕಾರಣದಿಂದ ನಪಾಸ ಮಾಡಿದರು? ಇದಾದರೂ ಗೊತ್ತಿದ್ದೀತಲ್ಲಾ ನಿನಗೆ?" ಎಂದು ಅವರು ಹಟದಿಂದ ಸವಾಲು ಹಾಕಿದರು.

ಈ ಪ್ರಶ್ನೆ ನನ್ನನ್ನು ನಿಜವಾಗಿ ಯೋಚನೆಗೊಳಗು ಮಾಡಿತು. ನಾನು ಕಾಲೇಜಿನಲ್ಲಿದ್ದಾಗ ಹೆಣ್ಣು ತೋರಿಸಲು ಡಜನ್‌ಗಟ್ಟಳೆ ಜನ ಬಂದಿದ್ದರು. ಈಚೆಗೆ ಹಳ್ಳಿ ಸೇರಿ ರೈತನಾದ ಮೇಲೆ ತಪ್ಪಿ ಕೂಡ ಒಬ್ಬರೂ ವರಾನ್ವೇಷಿಗಳು ಇತ್ತ
ಸುಳಿದಿರಲಿಲ್ಲೆಂಬ ಸಮಸ್ಯಾತ್ಮಕ ಸತ್ಯ ನನ
ಮನಸಿನಲ್ಲಿ ಒಮ್ಮೆಲೇ ಮಿಂಚಿತು.

"ಖರೇ ಹೇಳಬೇಕೆಂದರೆ ಚಿಕ್ಕ ಧಣೇರು ಈ
ಊರಿಗೆ ಬಂದ ಬಳಿಕ ಒಬ್ಬರೂ ಕನ್ಯಾ ತೋರಿ
ಲಿಕ್ಕೇ ಬಂದಿಲ್ಲ. ಅಂದ ಮೇಲೆ ಯಾಕ ನಪಾ
ಮಾಡಿದರು ಅಂತ ಹ್ಯಾಂಗ ಹೇಳಲಿ?"

ನನ್ನ ಸತ್ಯವಾಕ್ಯ ಆ ಗೃಹಸ್ಥನನ್ನು ಚಕಿ
ಗೊಳಿಸಿತು. ಅದರಿಂದ ಅವನಿಗೆ ಸಂತೋ
ವಾದಂತೆ ತೋರಲಿಲ್ಲ. "ಒಬ್ಬರೂ ಕನ
ತೋರಿಸಲಿಕ್ಕೆ ಬಂದಿಲ್ಲ ಅಂತೀಯಾ? ನಿನ
ಮಾತು ನಂಬಲ್ಯಾ ರಾಮಾ?" ಎಂದು ಕೇಳಿದ

"ನಾ ಹೇಳಿದ್ದು ಖರೇ ಮಾತರೀ ಯಪ್ಪಾ
ಬೇಕಾದರೆ ನಂಬರಿ, ಬ್ಯಾಡಾದರೆ ಬಿಡರಿ" ನಾನ
ಸ್ವಲ್ಪ ರೊಚ್ಚಿನಿಂದ ಹೇಳಿ ಹೊರಡತೊಡಗಿದೆ.

ಗೃಹಸ್ಥ ತಂಬಾಕು ಉಗುಳಿ ಕ್ಷಮಾಯಾಚ
ಧ್ವನಿಯಿಂದ, "ಹಾಂಗೇನೂ ತಿಳಕೋಬ್ಯಾ
ಯಾಕೆ ಕೇಳಿದೆ ಅಂದರೆ ನನ್ನ ಮಗಳು ತುಸ
ಸಾದಗಪ್ಪು. ಸಾಲಿ ಕಲಿತಿಲ್ಲ. ಆದರೆ ನಾಲ
ಸೇರು ರಾಬದ ಮನಿ ಕೆಲಸ ಬೊಗಸಿ ಅಡಿ
ಊಟ ನೀಗಿಸಿಕೊಂಡು ಹೋಗಬಲ್ಲಳು. ಈಗಿ
ಕಲಿತ ಹುಡುಗರು ಹುಡಗಿ ಚಂದ ಇರಬೇ
ಕಂತಾರೆ, ಸಂಗೀತ ಬರಬೇಕಂತಾರೆ, ಸಾಲಿ ಕ
ತಿರಬೇಕಂತಾರೆ. ಅದಕ್ಕೇ ನಿನ್ನ ಕೇಳಿದೆ ನಿಮ
ರಾಯರ ಮನಸ್ಸು. ಆದರೆ ನೀ ಏನು ಪತ್ತೆಹ
ಗೊಡಲಿಲ್ಲ" ಎಂದು ಮತ್ತೆ ಅಡಿಕೆ ಕತ್ತರಿ
ತೊಡಗಿದ.

ನನಗೆ ಈ ಕನ್ಯಾಪಿತನ ಮೇಲೆ ಕನಿಕ
ಬಂತು. "ಹಾಂಗೇನೂ ಇದ್ದಾಂಗಿಲ್ಲರಿ. ರಾಮ
ಜ್ಞೋರು ಕಲಿತವರಾದರೂ ಹಳ್ಳಿ ಒಳಗೆ ಬೆಳೆ
ವರು. ಕಪ್ಪು ಭೂಮಿ ಮ್ಯಾಲ ಅವರಿಗೆ ಬ
ಪ್ರೀತಿರಿ. ಕಪ್ಪು ಬಣ್ಣಾ ಅಂತ ಕನ್ಯಾ ನಪಾ
ಮಾಡೋ ಪೈಕಿ ಅಲ್ಲರಿ."

ಆ ಗೃಹಸ್ಥ ಮುಂದೆ ಸರಿದು ನನ್ನ ಸಮೀಪ
ಬಂದು, "ನೋಡು ರಾಮಾ, ರಾಮರಾಯ
ಸಲಿಗಿ ಅದs ಅಂದಿ. ಕೂಡಿ ಆಡಿದವ ಅಂ

ಹೇಳಿದಿ. ನಮ್ಮ ಮಗಳನ್ನು ನೋಡಿ ಕಪ್ಪು ಅಂತ ಬ್ಯಾಡಾ ಅನಬಾರದು, ಹಾಂಗ ನೀ ನೋಡಿಕೋಬೇಕ ಏನಪಾ. ವರದಕ್ಷಿಣಿಯೊಳಗ ಮಾತು ಮುರಕೊಳ್ಳಧಾಂಗ ನೋಡಿಕೊಳ್ಳೂದು ನಿನ್ನ ಕೂಡಿತು. ಲಗ್ನ ಕೂಡಿ ಬಂದರೆ ಇಲ್ಲಿ ನೋಡು, ನಿನ್ನ ತಲಿಗೆ ಸುತ್ತಿದ ಈ ಚಿಂದಿ ತೆಗದು ಒಂದು ಜರದ ರುಮಾಲ ಸುತ್ತಿಸತೀನಿ. ಮರೀಬ್ಯಾಡ" ಎಂದು ಕಚೇರಿಯ ಕಾರಕೂನ ನನ್ನು ಒಲಿಸಿಕೊಳ್ಳುವ ಕಲೆಯಲ್ಲಿ ನುರಿತ ಅವನು ನನ್ನನ್ನೂ ಬುಟ್ಟಿಗೆ ಹಾಕಿಕೊಂಡ ಸಮಾಧಾನದಿಂದ ಎದ್ದು ಕುದುರೆ ಹತ್ತಿದ.

ಬಾಟಿ ಹೊತ್ತು ಮನೆಯ ದಾರಿ ಹಿಡಿದ ನನ್ನ ತಲೆಯಮೇಲಿನ ಹಸಿ ಹೊರೆಯ ಭಾರಕ್ಕಿಂತ ಆ ಗೃಹಸ್ಥ ಹೇಳಿದ ಮಾತಿನ ಭಾರ ಅಸಹನೀಯವೆನಿಸಿತು. ನಾಳೆ ಈ ಗೃಹಸ್ಥನಿಗೆ ತಾನು ಆಳು ರಾಮನೆಂದು ತಿಳಿದಿದ್ದವನೇ ವರ ರಾಮರಾಯ ಎಂದು ತಿಳಿದಾಗ ಏನು ಪ್ರತಿಕ್ರಿಯೆಯಾದೀತು? ಅವನು ನಾಚಿ ಕ್ಷಮಾಪಣೆ ಕೇಳಬಹುದೆ? ಅಥವಾ ಒಮ್ಮೆಲೇ ಮಾತುಕಥೆ ಮುರಿದು ಹೊರಟು ಹೋಗಬಹುದೆ? ವಿಚಾರಿಸಿದಷ್ಟೂ ಎರಡನೆಯ ಸಂಭವವೇ ಹೆಚ್ಚಾಗಿದ್ದಂತೆ ನನಗೆ ಖಚಿತವಾಗತೊಡಗಿತು. ನನ್ನಲ್ಲಿ ಏನೋ ಕೊರತೆಯಿದ್ದದ್ದರಿಂದಲೇ ಬಿ. ಎ. ಆಗಿಯೂ ಈ ರೈತ ಜೀವನಕ್ಕಿಳಿದಿದ್ದೇನೆಂದು ಅವನು ಭಾವಿಸಬಹುದು. ಯಾಕೆ ಯಾರೂ ಕನ್ಯಾ ತೋರಿಸಲಿಕ್ಕೆ ಬಂದಿಲ್ಲವೆಂದು ಅರ್ಥವಾದವನಂತೆ ಅವನು ಗೋಣು ಹಾಕಬಹುದು. ಕಾಲೇಜಿನಲ್ಲಿದ್ದಾಗ ಕನ್ಯೆ ತೋರಿಸಲಿಕ್ಕೆ ಸಾಲುಗಟ್ಟಿ ಬರುತ್ತಿದ್ದವರು ಈಗ ಅಂತರ್ಧಾನರಾಗಲು ಕಾರಣವೇನೆಂದು ನನಗೆ ಈಗ ಖಂಡಿತವಾಯಿತು. ಅವನೆಲ್ಲಾದರೂ ನಮ್ಮ ಮನೆಗೆ ನನ್ನನ್ನು ಕಾಣಬೇಕೆಂದು ಬಂದರೆ ನನಗೆ ಅವನನ್ನು ಎದುರಿಸುವ ಧೈರ್ಯ ಬರಲಾರದೆಂದೇ ಅನಿಸಿತು.

ಮನೆಯನ್ನು ಸಮೀಪಿಸುತ್ತಿದ್ದಾಗ ಇನ್ನೊಂದು ಪ್ರಶ್ನೆ ಧುತ್ತೆಂದು ನನ್ನ ಮುಂದೆ ನಿಂತಿತು. ಅನುಭವಸ್ಥನಾದ ಕನ್ಯಾಪಿತೃವೇ ನನ್ನನ್ನು ಆಳುಮಗನೆಂದು ಭ್ರಮಿಸಿದಾಗ ನನ್ನ ರೂಪವನ್ನು ಕನ್ಯೆಯರು ಎಷ್ಟು ಮೆಚ್ಚಬಹುದು? ಅಪ್ರಿಯವಾದ, ಭೀಕರವಾದ ಸತ್ಯವನ್ನು ಅವಶ್ಯಕತೆಗಿಂತಲೂ ಮೊದಲೇ ಅರಿತುಕೊಳ್ಳಲು ಮನುಷ್ಯನಲ್ಲಿ ಒಮ್ಮೊಮ್ಮೆ ಅದಮ್ಯವಾದ ತವಕವುಂಟಾಗುತ್ತದೆ. ನನಗೂ ಹಾಗೆಯೇ ಆಯಿತು. ಮನೆಗೆ ಬಂದವನೇ ಮೊದಲು ನನ್ನ ಕೊಟಡಿಗೆ ಹೋಗಿ ಕನ್ನಡಿ ನೋಡಿಕೊಂಡೆ.

ಕನ್ನಡಿಗಳಿಗೆ ಯಾವಾಗಲೂ ಮನುಷ್ಯರ ಮನೋಗತವನ್ನು ದೃಢಪಡಿಸುವ ಗುಣವಿರುತ್ತದೆ. ನೀವು ಉತ್ತರಗಳನ್ನು ಅಪೇಕ್ಷಿಸದಿರುವಾಗ ಅವು ಏನನ್ನೂ ನಿಮಗೆ ತಿಳಿಸುವುದಿಲ್ಲ. ನಿಮಗೆ ನೀವು ಪ್ರತಿ-ಮನ್ಮಥನೆಂಬ ಭಾವನೆಯಿದ್ದರೆ ಅವು ಅದನ್ನೇ ಒತ್ತಿ ಹೇಳುವವು. ಆದರೆ ನೀವು ಅಕರಾಳ ವಿಕಾರ ಮೂರ್ತಿಗಳೆಂಬ ಸಂಶಯ ನಿಮಗಿದ್ದರೆ ಅದನ್ನು ನಿಸ್ಸಂದಿಗ್ಧವಾಗಿ ದೃಢಪಡಿಸಲು ಕನ್ನಡಿಯಷ್ಟು ನಿರ್ದಾಕ್ಷಿಣ್ಯ ವಿಮರ್ಶಕ ನಿಮಗೆ ಸಿಗಲಾರ.

ನಾನು ಕನ್ನಡಿಯಲ್ಲಿ ಕಂಡ ನನ್ನ ಮುಖ ನನ್ನ ತಲೆ ತಿರುಗಿಸಿತು. ಮೊದಲೇ ಬಿಳಿಯದೆಂದು ಯಾರೂ ಭ್ರಮಿಸಲಾರದಂಥ ಬಣ್ಣ ನನ್ನದು. ಈಗ ಅದು ಬಿಸಿಲು ಮಳೆಗಾಳಿಯ ಪರಿಣಾಮವಾಗಿ ಸುಟ್ಟ ಹಂಚಿನ ವರ್ಣ ತಾಳಿತ್ತು. ಹೊರೆಹೊತ್ತಾಗ ತಲೆಗೆ ಅಣೆಯಬಾರದೆಂದು ಸುತ್ತಿದ್ದ ಹೆಡಿಗೆಯಂಥ ರುಮಾಲು ನಿಜವಾಗಿ ಚಿಂದಿಯೇ. ಅದರ ಹರಕು ಚುಂಗುಗಳು ರಾಜಮಹಾರಾಜರ ಕಿರೀಟಗಳಿಂದ ಜೋಲುತ್ತಿದ್ದ ಮುತ್ತಿನ ಸರಗಳಂತೆ ಜೋತಾಡುತ್ತಿದ್ದವು. ಹುಲುಸಾಗಿ ಬೆಳೆದ ಕಪ್ಪು ಗಡ್ಡದ ಮುಖ ಅರ್ಧಭಾಗ ಹುಲ್ಲು ಬೆಳೆದ ನಡುಗಡ್ಡೆಯಂತೆ ಕಂಗೊಳಿಸುತ್ತಿತ್ತು.

ಇಲ್ಲ, ಏನೂ ಸಂಶಯವಿದ್ದಿಲ್ಲ. ಸ್ವತಃ ಕಪ್ಪಾಗಿದ್ದರೂ ಯಾವ ಕುರುಡಿ ಹುಡುಗಿ ತಾನೇ ನನ್ನನ್ನು ಮದುವೆಯಾಗಲೊಪ್ಪುವಳು? ಆ ಗೃಹ

ಸ್ಥನು ನನ್ನನ್ನು ಆಳುಮಗನೆಂದು ಭ್ರಮಿಸಿದ್ದರಲ್ಲಿ ತಪ್ಪೇನೂ ಇಲ್ಲವೆಂದು ಅವನನ್ನು ಅಪರಾಧ ಮುಕ್ತನನ್ನಾಗಿ ಮಾಡಿದೆ. ನಾನೇ ರಾಮರಾಯ ಎಂದು ಹೇಳದೆ ಇದ್ದದ್ದು ಬುದ್ಧಿವಂತಿಕೆಯೇ ಆಯಿತು ಎಂದು ನನಗೇ ಕೆಲ ಗುಣಗಳನ್ನೂ ಹಾಕಿಕೊಂಡೆ! ಹೇಗೋ ಎರಡು ತುತ್ತು ಉಂಡು, ಆ ಮನುಷ್ಯ ಬಂದುಗಿಂದಾನೆಂಬ ಭಯದಿಂದ ಬೇಗನೆ ಮನೆ ಬಿಟ್ಟು ಹೊಲದ ಕಡೆ ಹೊರಟೆ.

ಆದರೆ ದೀಪದ ಹುಳ ಯಾವ ದಿಕ್ಕಿಗೆ ಹೋದರೂ ದೀಪದ ಮೇಲೆಯೇ ನುಗ್ಗುವದಂತೆ. ನಾಳಿನ ದಿನ ನನ್ನ ಗಡ್ಡಕ್ಕೆ ಮೊದಲು ವಿಮೋಚನೆಯಾಗಬೇಕೆಂದು ಹೇಳಲು ನಾಪಿತನ ಮನೆಯ ಮುಂದೆ ಹಾಯ್ದು ಹೋಗಬೇಕೆಂದಾಗ ದಾರಿಯಲ್ಲಿ ಊರ ಬ್ರಹ್ಮವೃಂದದ ಹರಟೆಯ ಅಡ್ಡೆಯಾದ ಗೋಪಾಲಕೃಷ್ಣನ ಗುಡಿಯ ಪಟಾಂಗಣದಲ್ಲಿ ನನ್ನ ತಂದೆಯೊಡನೆ ಹರಟೆ ಹೊಡೆಯುತ್ತ ಕುಳಿತ ಅದೇ ಗೃಹಸ್ಥನನ್ನೇ ನಾನು ಕಾಣಬೇಕೆ? ಇಬ್ಬರೂ ಹಳೇ ಗೆಳೆಯರೆಂಬಲ್ಲಿ ಸಂದೇಹಕ್ಕೆಡೆಯಿದ್ದಿಲ್ಲ.

ನಾನು ಅವರ ದೃಷ್ಟಿಗೆ ಬೀಳದೆ ನುಸುಳಿ ಹೋಗಬೇಕೆಂದರೆ ನನ್ನ ತಂದೆ ನನ್ನನ್ನು ನೋಡಿಯೇ ಬಿಟ್ಟರು. "ಏ ರಾಮಾ, ಬಾ ಇಲ್ಲಿ. ಮನೆಗೆ ಹೋಗಿ ನಾಲ್ಕು ಎಲೆ ತಂದುಕೊಡು." ಎಂದು ಅವರು ಕರೆದು ಹೇಳಿದರು. ಅವರ ಚರ್ಚೆಯಲ್ಲಿ ತಾಂಬೂಲದ ಕೊರತೆಯಾಗಿತ್ತಂತೆ.

ಅವರ ಬದಿಯಲ್ಲಿ ಕುಳಿತ ಆ ಗೃಹಸ್ಥ, "ನೋಡಪಾ ರಾಮಾ, ನಮ್ಮ ಕುದುರೆ ಕರಿ ಗೂಟಕ್ಕೆ ಕಟ್ಟಿದೆ. ಇಲ್ಲೇ ಗೋವಿಂದಪ್ಪನ ಮನೆಯಲ್ಲಿ. ಬರೂ ಮುಂದೆ ಒಂದು ಸೂಡು ಬಾಟಿ ತಂದು ಅದರ ಮುಂದೆ ಒಗೀತಿಯಾ?" ಎಂದು ಬಿಟ್ಟೇ ಹಚ್ಚಿದ.

ನಾನೀಗ ಎಂಥ ಅಪಮಾನವನ್ನೂ ಸೋಸುವಷ್ಟು ನಿರ್ವಿಣ್ಣನಾಗಿ ಬಿಟ್ಟಿದ್ದೆ. ಆದರೆ ಅಲ್ಲೇ ಕೆಳಗೆ ಕುಳಿತಿದ್ದ ತಳವಾರ ಜಕ್ಕ ಉರಿದೆದ್ದ.

"ಯಾವ ಊರವರ್ರೀ ನೀವು?" ಎಂ ಅವನು ಆ ಗೃಹಸ್ಥನಿಗೆ ಉಗ್ರಸ್ವರದಲ್ಲಿ ಕೇಳಿ

ಗೃಹಸ್ಥ, "ಯಾಕಪಾ, ನಾವು ಶಹರದವರು ಎಂದು ಪ್ರಶ್ನೆಯ ಮರ್ಮ ಅರಿಯದೆ ಉತ್ತ ವಿತ್ತ.

"ಶಾರದವರಂತೆ ಶಾರದವರು. ಏನಂತ ತಿ ದೀರಿ ರಾಮಣ್ಣೋರನ್ನ? ಧಣ್ಯಾರು ವಾಲಿಕಾ ರಗ ಹೇಳಿಧಾಂಗ ಬಾಟಿ ತಂದು ಹಾಕಂತ ಅ ರಿಗೆ ಹೇಳತೀರಿ? ನನಗ ಹೇಳ್ರಿ. ನಿಮ್ಮ ಕುದರೀನ ಬಾಟೀ ಒಳಗ ಹುಗದ ಬಿಡತೀನಿ" ಎಂದ ಜಕ್ಕ.

ಆ ಗೃಹಸ್ಥ ನನ್ನ ಮುಖ ನೋಡಿದ. ಸತ್ಯ ಅವನಿಗೆ ಮೆಲ್ಲಮೆಲ್ಲನೆ ಹೊಳೆಯಿತು. ಆತ ಗುರುತು ಹತ್ತದಷ್ಟು ವಿವರ್ಣನಾಗಿ ಹೋದ. ಅವನ ಸ್ಥಿತಿ ನೋಡಿ ನಮ್ಮ ತಂದೆ, "ದೊಡ್ಡವ ರಿಗೆ ಹಾಂಗೆಲ್ಲ ಮಾತಾಡಬಾರದು" ಎಂದು ಜಕ್ಕಪ್ಪನಿಗೆ ಸಿಟ್ಟು ಮಾಡಿದರು. ನಾನು ಅಲ್ಲಿ ನಿಲ್ಲದೆ ಹೊಲದ ಕಡೆ ಸಾಗಿಬಿಟ್ಟೆ.

ಆ ರಾತ್ರಿ ನಾನೇ ನನ್ನೊಡನೆ ಬಹು ದೀರ್ಘವಾದ ಸಂವಾದವನ್ನು ನಡೆಸಿದೆ. ನೇಗಿಲಯೋಗಿಯೆಂದು ಸಮಾಜದ ತಿರಸ್ಕಾರಭಾಜನನಾಗಿ ಬಾಳಬೇಕೋ ಅಥವಾ ಸಮಾಜದಲ್ಲಿ ಎಲ್ಲರಂತೆ ಬದುಕಲು ನೇಗಿಲಿಗೆ ಶರಣುಹೊಡೆಯಬೇಕೋ? ಅಂದಿನ ನನ್ನ ವ್ಯಗ್ರ ಚಿತ್ತವೃತ್ತಿಯಲ್ಲಿ ನನಗೆ ಭೂಮಿತಾಯಿಯನ್ನು ತ್ಯಜಿಸದೆ ಮಾರ್ಗವೇ ಇಲ್ಲೆಂದು ತೋರಿತು. ನಾನು ಸ್ವಂತ ಕೈಯಿಂದ ಬೆಳೆಸಿದ ಹೊಲಗಳನ್ನು ತ್ಯಜಿಸುವದು ಸುಲಭವಾಗಿರಲಿಲ್ಲ. ಆದರೆ ನಾನು ಗಟ್ಟಿ ಮನಸು ಮಾಡಿ ನಿರ್ಧಾರಕ್ಕೆ ಬಂದೆ. ನಾನು ಸಮಾಜದಲ್ಲಿ ಬಾಳಲು ಬಯಸುತ್ತಿದ್ದೆ. ಆದ್ದರಿಂದ ಸಮಾಜದ ಪ್ರೀತ್ಯರ್ಥವಾಗಿ ಒಕ್ಕಲುತನವನ್ನು ಬಲಿಕೊಟ್ಟು ಶಹರದೂರಿಗೆ ಹೊರಟೆ.



ಅವರ ಅಜ್ಜಿ ಕೊಟ್ಟ ಶಿಕ್ಷೆಯು ಫಲವಿದಂತೆ !

# ದೌಲತ ರಾವಜಿ: ಕೂದಲಿನ ಕಸರತ್ತು



೪೫ ಜನರು ಕುಳಿತ ಬಸ್ಸೊಂದನ್ನು ತನ್ನ ಕೂದಲಿಗೆ ಕಟ್ಟಿಕೊಂಡು ಅದನ್ನು ೬೦೦ ಯಾರ್ಡುಗಳ ವರೆಗೆ ಎಳೆದುಕೊಂಡು ಹೋಗುವ ಒಬ್ಬಾತನನ್ನು ಕಂಡಾಗ ನಿಮಗೆ ಆಶ್ಚರ್ಯವಾಗುವದು. ಇಷ್ಟೇ ಅಲ್ಲ, ಈ ಮನುಷ್ಯ ಎಷ್ಟು ವರ್ಷಗಳ ವರೆಗೆ ಸಾಧನೆಮಾಡಿ ಈ ಅದ್ಭುತ ಶಕ್ತಿಯನ್ನು ಸಂಪಾದಿಸಿದ್ದಾನೋ ಎಂದು ನೀವು ಉದ್ಗಾರಗಳನ್ನು ಕೂಡ ಹೊರಡಿಸುವಿರಿ.

ಆದರೆ ಈ ಬಗೆಯ ಅದ್ಭುತ ಶಕ್ತಿಯನ್ನು ಪಡೆದಿರುವ ನಾಸಿಕದ ದೌಲತ ರಾವಜಿ ಗಾಯಕವಾಡರು ಮಾತ್ರ ತಾವು ಇದಕ್ಕಾಗಿ ಅಂಥ ವಿಶೇಷ ಸಾಧನೆಯನ್ನೇನೂ ಮಾಡಿರುವದಿಲ್ಲ ಎನ್ನುತ್ತಾರೆ.

ದೌಲತ ರಾವಜಿ ೩೦ ವರ್ಷದ ತರುಣರು. ನಾಸಿಕ ಸ್ಟೇಟ ಟ್ರಾನ್ಸಪೋರ್ಟ ಆಫೀಸಿನಲ್ಲಿ ಶಿಪಾಯಿಯಾಗಿ ದುಡಿಯುತ್ತಿದ್ದಾರೆ. ಸಾಮಾನ್ಯ ಶಿಪಾಯಿಯಾಗಿದ್ದರೂ ಇವರ ಹೆಸರು ಸುತ್ತಮುತ್ತಲಿನ ಪ್ರದೇಶದಲ್ಲಿ ಮನೆಮಾತಾಗಿದೆ. ಕೇವಲ ಶಿಪಾಯಿಯಾಗಿದ್ದರೂ ಸಹಸ್ರಾರು ಜನರು ಅವರನ್ನು ಬಲ್ಲರು. ಈ ಖ್ಯಾತಿಗೆ ಅವರು ತಮ್ಮ ಉದ್ದನ್ನ ಕೂದಲುಗಳಿಂದ ಅದ್ಭುತ ಚಮತ್ಕಾರಗಳನ್ನು ಮಾಡಿ ತೋರಿಸುವದೇ ಕಾರಣವಾಗಿದೆ.

೪೫ ಜನರು ಕುಳಿತ ಬಸ್ಸನ್ನು ೬೦೦ ಯಾರ್ಡುಗಳ ವರೆಗೆ ಜಗ್ಗಿಕೊಂಡು ಹೋಗುವದೊಂದೇ ಅವರ ಕೂದಲಿನ ಶಕ್ತಿಯ ಪ್ರದರ್ಶನ ಕಾರ್ಯವಲ್ಲ ಒಂದು ಗಡಗಡೆಗೆ ಅವರ ಕೂದಲನ್ನು ಕಟ್ಟಿ ೧೦೦ ಅಡಿ ಎತ್ತರದ ವರೆಗೆ ಅವರನ್ನು ಜಗ್ಗಬಹುದು. ತೊಲೆಗೆ ಕೂದಲು ಕಟ್ಟಿಕೊಂಡು ತೂಗಾಡುವಾಗ ಅವರು ಕಾಲಿಗೆ ನಾಲ್ಕು ಭಾರವಾದ ಸಾಯಕಲ್ಲುಗಳನ್ನು ಕಟ್ಟಿಕೊಳ್ಳಬಲ್ಲರು.

ಜನ ಅವರನ್ನುಕಂಡು ಆಶ್ಚರ್ಯಪಡುತ್ತಾರೆ. ಎಂಥೆಂಥ ಕಷ್ಟಗಳನ್ನು ಸಹಿಸಿ, ಎಷ್ಟೆಷ್ಟು ಪ್ರಯಾಸಪಟ್ಟು ಈ ಶಕ್ತಿಯನ್ನು ಪಡೆದಿರಬೇಕು ಎಂದು ಲೆಕ್ಕ ಹಾಕುತ್ತಾರೆ. ದೌಲತ ರಾವಜಿಯವರನ್ನು

"ಲೈಟ್" ನಿಂದ

ಕೇಳಿದರೆ ತಮ್ಮ ಕೂದಲಿಗೆ ಯಾವ ಬಗೆಯ ವಿಶಿಷ್ಟ ತರಬೇತಿಯನ್ನೂ ಕೊಟ್ಟಿಲ್ಲವೆನ್ನುತ್ತಾರೆ. ಸಶಾಸ್ತ್ರೀಯ ಅಂಗಸಾಧನೆಯನ್ನೂ ಅವರು ಮಾಡಿಲ್ಲ. "ಇದೆಲ್ಲ ನನ್ನ ಅಜ್ಜಿಯಿಂದ ಲಭಿಸಿದ ಪರಂಪರೆ" ಎನ್ನುತ್ತಾರವರು.

"ಎಂಥ ಮಾತು? ಇವನ ಅಜ್ಜಿ ಇಂಥ ವಿಲಕ್ಷಣ ಪರಂಪರೆಯನ್ನು ಬಿಟ್ಟು ಹೋಗಿದ್ದಾದರೂ ಹೇಗೆ?" ಎಂಬ ಸಂದೇಹ ದೌಲತ ರಾವಜಿಯವರ ಮಾತುಗಳನ್ನು ಕೇಳಿದಾಗ ಮೂಡುವದು ಸಹಜ. ಆದರೆ ದೌಲತರೇ ಅತ್ಯಂತ ಹೆಮ್ಮೆಯಿಂದ "ನನ್ನ ಅಜ್ಜಿ ಮೊನ್ನೆಮೊನ್ನೆ ಸತ್ತಳು. ಸಾಯುವಾಗ ಅವಳಿಗೆ ೧೩೫ ವರ್ಷಗಳಾಗಿದ್ದವು. ಇಷ್ಟು ದೀರ್ಘ ಕಾಲ ಬದುಕಿದ್ದರೂ ಅವಳ ಒಂದು ಹಲ್ಲು ಕೂಡ ಬಿದ್ದಿರಲಿಲ್ಲ. ನವನಾಗರಿಕ ಹೆಣ್ಣು ತನ್ನ ಮಗುವನ್ನು ಎತ್ತಿಕೊಳ್ಳುವಷ್ಟೇ ಲೀಲಾಜಾಲವಾಗಿ ನನ್ನ ಅಜ್ಜಿ ಎಮ್ಮೆ-ಆಕಳುಗಳನ್ನು ಎತ್ತುತ್ತಿದ್ದಳು. ಆದರೆ ಇಂಥ ಶಕ್ತಿಶಾಲಿನಿಯಾದ ನನ್ನ ಅಜ್ಜಿಯ ಸಿಟ್ಟು ನನಗೆ ಯಮಪ್ರಾಯವಾಗುತ್ತಿತ್ತು. ನಾನು ತಪ್ಪು ಮಾಡಿದಾಗಲೆಲ್ಲ ಅವಳು ನನ್ನ ಕೂದಲು ಹಿಡಿದು ನನ್ನನ್ನೆತ್ತಿ ಅತ್ತಿತ್ತ ಎಸೆದುಬಿಡುತ್ತಿದ್ದಳು. ಅದರ ಪ್ರತಿಕ್ರಿಯೆಯೋ ಎಂಬಂತೆ ನಾನು ನನ್ನ ಕೂದಲನ್ನು ಕತ್ತರಿಸಿಕೊಳ್ಳಬಾರದೆಂದು ನಿರ್ಧರಿಸಿದೆ. ಅನಂತರ ಎರಡು ಸಲ ನನ್ನ ಕೂದಲನ್ನು ಕತ್ತರಿಸಿಕೊಂಡೆನಾದರೂ ಆರು ವರ್ಷದವನಾದ ನಂತರ ನಾನು ಒಮ್ಮೆಯೂ ನನ್ನ ಕೂದಲಿಗೆ ಕತ್ತರಿಯನ್ನು ಸೋಂಕಗೊಟ್ಟಿಲ್ಲ" ಎನ್ನುವರು.

ದೌಲತ್ ರಾವಜಿ ಸದಾ ಸಂತಸಚಿತ್ತರು. ಹೆಂಡತಿ, ಇಬ್ಬರು ಮಕ್ಕಳೊಂದಿಗೆ ಸುಖ-ಸಂಸಾರ ಸಾಗಿಸುತ್ತಿದ್ದಾರೆ. ನಾಸಿಕ ಸ್ಟೇಟ್ ಟ್ರಾನ್ಸಪೋರ್ಟದವರು ಕೆಲಸಗಾರರಿಗಾಗಿ ಕಟ್ಟಿಸಿದ ಚಾಳಿನಲ್ಲಿ ವಾಸಿಸುತ್ತಾರೆ.

ಮೊದಲು ದೌಲತರು ಪೋಲೀಸ ಶಾಖೆಯಲ್ಲಿ ನೌಕರರಾಗಿದ್ದರು. ಅಲ್ಲಿ ಆರು ವರ್ಷ ದುಡಿದ ನಂತರ ಅಹಮದಾಬಾದದಲ್ಲಿ ಸಂಭವಿಸಿದ ಜಾತೀಯ ದಂಗೆಯೊಂದರಲ್ಲಿ ಅವರಿಗೆ ಓರ್ವ ಪುಂಡನ ಗುಂಡಿನೇಟು ತಗಲಿತು. ಆ ಬಳಿಕ ಅವರು ಪೋಲೀಸ ನೌಕರಿಯನ್ನು ಬಿಟ್ಟು ೧೯೪ ರಲ್ಲಿ ಸ್ಟೇಟ ಟ್ರಾನ್ಸಪೋರ್ಟ ಕಚೇರಿಯಲ್ಲಿ ಕೆಲಸ ಹಿಡಿದರು.

ಹಾಗೆಂದು ಅವರು ಪೋಲೀಸ ಶಾಖೆಯ ಸಂಪರ್ಕವನ್ನು ಕಳೆದುಕೊಂಡಿಲ್ಲ. ಅಥವಾ ಪೋಲೀಸ ಶಾಖೆ ಅವರ ಸಂಪರ್ಕವನ್ನು ಕಾಯ್ದುಕೊಂಡು ಬಂದಿದೆಯೆಂದರೂ ಸರಿಯೇ.

ಪೋಲೀಸ ಶಾಖೆಯ ಕೆಲಸಗಾರರ ಮತ್ತು ಅವರ ಆಶ್ರಿತರ ಬಗ್ಗೆ ನಿಧಿ ಕೂಡಿಸಬೇಕಾದ ಸಂದರ್ಭ ಬಂದಾಗಲೆಲ್ಲ ದೌಲತರ ಪ್ರಯೋಜನವನ್ನು ಅವರು ಹೊಂದುತ್ತಾರೆ. ತಮ್ಮ ಕೂದಲಿನ ಶಕ್ತಿಸಾಮರ್ಥ್ಯದ ಪ್ರಯೋಗಗಳನ್ನು ಮಾಡಿ ದೌಲತರು ಹಣ ಕೂಡಿಸಿಕೊಡುತ್ತಾರೆ.

ಈ ಅದ್ಭುತ ಮನುಷ್ಯ ತಿನ್ನುತ್ತಿರುವದಾದರೂ ಏನು? ದೌಲತರು ಸಾಮಾನ್ಯರಂತೆ ನಿತ್ಯದ ಊಟವನ್ನೇ ಉಣ್ಣುತ್ತಾರೆ. ತಮ್ಮ ಶಕ್ತಿಪ್ರದರ್ಶನದ ಕಾಲದಲ್ಲಿ ಮಾತ್ರ ಅವರು ಕುರಿಯ ಹೃದಯದ ಹಸಿ ಮಾಂಸವನ್ನು ತಿನ್ನುತ್ತಾರೆ.

# ಚಂದ್ರನ ಹುಟ್ಟು ಮತ್ತು ಸಾವು

ಎಸ್. ರಾಘವೇಂದ್ರಾಚಾರ್ಯ

ಚಂದ್ರನ ಸೃಷ್ಟಿಯನ್ನು ಯಾವ ಮನುಷ್ಯನೂ ಕಂಡಿರಲಿಲ್ಲವಷ್ಟೇ. ಆಗ್ಗೆ ಮಾನವನ ಸೃಷ್ಟಿಯೇ ಆಗಿರಲಿಲ್ಲ. ಆದುದರಿಂದ ಇದಕ್ಕೆ ಪ್ರತ್ಯಕ್ಷ ಪ್ರಮಾಣವಿಲ್ಲ. ಗುಪ್ತವಾಗಿ ನಡೆಸಿದ ಕೊಲೆಯನ್ನು ಬರೀ ಕುರುಹುಗಳಿಂದ ಪತ್ತೇದಾರಿಗಳು ಕಂಡುಹಿಡಿಯುವಂತೆ ವಿಜ್ಞಾನಿಗಳೂ ಚಂದ್ರನ ಸೃಷ್ಟಿಯ ಕತೆಯನ್ನು ವೈಜ್ಞಾನಿಕ ಕುರುಹುಗಳಿಂದ ಊಹಿಸುವರು.

ಚಂದ್ರನ ಸೃಷ್ಟಿ ಹೇಗೆ ಆಯಿತು ಎಂಬುದಕ್ಕೆ ವಿಜ್ಞಾನದ ಸ್ಪಷ್ಟವಾದ ಉತ್ತರವಿಲ್ಲ. ಭೂಮಿಯ ಸೃಷ್ಟಿ ಹೇಗಾಯಿತು ಎಂಬುದಕ್ಕೇ ಉತ್ತರ ಸಿಗದಿದ್ದ ಮೇಲೆ ಚಂದ್ರನ ಸೃಷ್ಟಿ ಹೇಗಾಯಿತೆಂಬುದಕ್ಕೆ ಉತ್ತರ ದೊರಕದಿದ್ದುದು ಏನೂ ಆಶ್ಚರ್ಯವಲ್ಲ. ಭೂಮಿಯ ಸೃಷ್ಟಿಯ ವಿಚಾರವಾಗಿ ಮೂರು ತರದ ಊಹೆಗಳಿವೆ. ಮೊದಲನೆಯದು ನಮ್ಮ ಸೂರ್ಯನಿಂದ ಹುಟ್ಟಿತೆಂಬುದು, ಎರಡನೆಯದು ಇನ್ನೊಂದು ನಕ್ಷತ್ರದಿಂದ ಹುಟ್ಟಿತೆಂಬುದು, ಮೂರನೆಯದು ಆಕಾಶದಲ್ಲಿ ವಿರಳವಾಗಿ ಚದರಿಕೊಂಡಿರುವ ವಸ್ತುಗಳ ಸೂಕ್ಷ್ಮ ಕಣಗಳೇ ಒಟ್ಟು ಸೇರಿ ಹೆಪ್ಪುಗಟ್ಟಿ ಉಂಟಾಗಿರುವುದೆಂಬುದು. ಚಂದ್ರನ ಸೃಷ್ಟಿಯ ವಿಚಾರದಲ್ಲೂ ಎರಡು ಮೂರು ಊಹಾಪೋಹ ವಾದಗಳಿವೆ. ಚಂದ್ರನು ಭೂಮಿಯಿಂದ ಹುಟ್ಟಿತೆಂಬುದು ಅವುಗಳಲ್ಲಿ ಮೊದಲನೆಯ ವಾದ.

ಭೂಮಿಯ ಸೃಷ್ಟಿಕಾಲದಲ್ಲಿ ಅದು ವಾಯುರೂಪದಲ್ಲಿದ್ದರೂ ಕ್ರಮೇಣ ಆರಿ ದ್ರವರೂಪಕ್ಕೆ ಬಂದಿತು. ಬಿಸಿಹಾಲು ಆರಿದಾಗ ಅದರ ಮೇಲೆ ಕೆನೆಯುಂಟಾಗುವಂತೆ ಭೂಮಿಯೂ ಕ್ರಮೇಣ ಆರಿದಾಗ ಅದರ ಮೈಯಲ್ಲಿ ಒಂದು ತರದ ಕೆನೆಯುಂಟಾಯಿತು. ಭೂಮಿ ಆಗಲೂ ತನ್ನ ಅಚ್ಚಿನಲ್ಲಿ ತಿರುಗುತ್ತಿತ್ತು. ಆದರೆ ಈಗಿನಂತೆ ಇಷ್ಟು ನಿಧಾನವಾಗಿ ತಿರುಗುತ್ತಿರಲಿಲ್ಲ. ಈಗ ಭೂಮಿಗೆ ಒಂದು ಸುತ್ತು ತಿರುಗಲಿಕ್ಕೆ ೨೪ ತಾಸು ತಗಲುವುದು. ಆಗ ಅದಕ್ಕೆ ಬರಿ ನಾಲ್ಕು ತಾಸು ತಗಲುತ್ತಿತ್ತಂತೆ. ಅಂದರೆ ಭೂಮಿ ಈಗಿಗಿಂತ ಆರು ಪಾಲು ವೇಗದಿಂದ ಗರಗರನೆ ತಿರುಗುತ್ತಿತ್ತು. ಇದರಿಂದ ಕೇಂದ್ರ ಪರಾಙ್ಮುಖ ಬಲವುಂಟಾಗಿ ಭೂಮಿಯ ಹೊಟ್ಟೆ ಉಬ್ಬರಿಸಿತು. ಸೂರ್ಯನ ಆಕರ್ಷಣದಿಂದಾಗಿ ಭೂಮಿಯಲ್ಲಿ ಭರತ ಇಳಿತ ಉಂಟಾಯಿತು. ಈಗ ಭರತ ಇಳಿತಗಳು ಸಾಗರಗಳಲ್ಲಿ ಮಾತ್ರ ಉಂಟಾಗುವುವು. ಆದರೆ ಆ ಕಾಲದಲ್ಲಿ ಸಮುದ್ರವಿರಲಿಲ್ಲ. ಇಡೀ ಭೂಮಿಯೇ ದ್ರವವಾಗಿತ್ತು. ಅದರ ಮೇಲೆ ಭರತ ಇಳಿತದ ಅಲೆಗಳು ಉಂಟಾದವು. ಸೂರ್ಯನ ಇದಿರಿಗಿರುವ ಮೈಯಲ್ಲಿ ಒಂದು ಉಬ್ಬು, ಅದರ ಸರೀ ಹಿಂದುಗಡೆ ಇನ್ನೊಂದು ಉಬ್ಬು ಇರುವುದು ಭರತದ ಲಕ್ಷಣ. ಹೀಗೆ ದಿನಕ್ಕೆರಡು ಬಾರಿ, ಅಂದರೆ ಎರಡೆರಡು ಗಂಟೆಗಳಿಗೊಮ್ಮೆ ಭರತ ಇಳಿತಗಳಾದವು. (ಅಂದಿನ ದಿನವು ಈಗಿನ ನಾಲ್ಕು ಗಂಟೆಗಳಷ್ಟು ಎಂಬುದನ್ನು ಹಿಂದೆ ಹೇಳಿರುವೆವಷ್ಟೆ).

ಯಾವುದಾದರೂ ಒಂದು ದ್ರವದ ಬಿಂದುವಿಗೂ ಒಂದು ಸಹಜವಾದ ಸ್ಪಂದನ ಕಾಲವಿದೆ. ಗಣಿತರೀತ್ಯಾ ಇದನ್ನು ಕಂಡುಹಿಡಿಯಬಹುದು. ಭೂಮಿಯಷ್ಟು ಗಾತ್ರದ ದ್ರವದ ಬಿಂದುವಿನ ಸ್ಪಂದನ ಕಾಲವೂ ಎರಡು ಗಂಟೆ. ಈ ಎರಡು ಅವಧಿಗಳೂ ಒಂದೇ ಸಮನಾಗಿ ಇದ್ದುದರಿಂದ ಭೂಮಿಯ ಮೇಲೆ ಉಂಟಾದ ಭರತದ ಅಲೆಗಳು ವೃದ್ಧಿಯಾಗುತ್ತ ಹೋದವು. ಇದಕ್ಕೆ 'ರೆಸನೆನ್ಸ' (Resonance) ಎಂದು ಹೆಸರು. ಪ್ರತಿ ಸರ್ತಿ ಭರತ ಉಂಟಾದಾಗ ಅದರ ಉಬ್ಬು ಹಿಂದಿನ ಉಬ್ಬಿಗಿಂತ ಸ್ವಲ್ಪ ಅಧಿಕವಾಗುತ್ತ ಹೋಗಿ ಕೊನೆಗೆ ಸುಮಾರು ೫೦೦ ವರ್ಷಗಳ

ನಂತರ ಈ ಉಬ್ಬು ಅತ್ಯಧಿಕವಾಗಿ ಭೂಮಿಯಿಂದ ಕಿತ್ತು ಸಿಡಿದೇ ಹೋಯಿತಂತೆ. ಈ ತುಂಡೇ ನಮ್ಮ ಚಂದ್ರನಂತೆ.

ಇದು ನಡೆದಾಗ ಭೂಮಿಯು ದ್ರವರೂಪದಿಂದ ಸ್ವಲ್ಪ ಮುದ್ದೆಯಾಗುತ್ತ ಬರುತ್ತಿತ್ತು. ಆದುದರಿಂದ ಚಂದ್ರನು ಭೂಮಿಯಿಂದ ಕಿತ್ತು ಬಂದಾಗ ಆ ಹೊಂಡ ಭೂಮಿಯಲ್ಲಿ ಶಾಶ್ವತವಾಗಿ ಉಳಿದುಹೋಯಿತು. ಇದರಲ್ಲಿ ಕ್ರಮೇಣ ನೀರು ನಿಂತು ಇದೇ ಶಾಂತ ಸಾಗರವಾಯಿತಂತೆ. ಚಂದ್ರನು ಹೀಗೆ ಸಿಡಿದು ಬಂದಾಗ ಭೂಮಿಯ ಮೇಲೆ ತೇಲುತ್ತಿದ್ದ ತೆಳ್ಳಗಿನ ಕೆನೆಯು ಅಲ್ಲಲ್ಲಿ ಒಡೆದು ಚೆದರಿ ಈಗಿರುವ ಯುರೋಪವು,

ಅ ಸಾವಿರ ಮೈಲು ದೂರದಲ್ಲಿದ್ದನೆಂದೂ ಆ ಆತನು ತನ್ನ ಅಚ್ಚಿನಲ್ಲಿ ತಿರುಗುತ್ತ ಭೂಮಿ ಸುತ್ತು ಬರುತ್ತಿದ್ದನೆಂದೂ ಎಲ್ಲರೂ ಒಪ್ಪುತ್ತಾ

ಚಂದ್ರನ ಮೇಲೆ ಭೂಮಿಯ ಆಕರ್ಷಣಶ ವಿಶೇಷ ಬಿದ್ದು ಭೂಮಿಗೆ ಸಾಪೇಕ್ಷವಾಗಿ ಅವನ ತನ್ನ ಅಚ್ಚಿನಲ್ಲಿ ತಿರುಗುವುದು ನಿಧಾನವಾಗಿ ಕ್ರಮೇಣ ನಿಂತೇಹೋಯಿತು. ಇದೇ ಆಕರ್ಷ ದಿಂದ ಚಂದ್ರನ ಆಕಾರವೂ ಶುದ್ಧಗೋಲದಿಂ ಸ್ವಲ್ಪ ಉದ್ದ ಮೂತಿಯ ಅಂಡಾಕಾರವಾಯಿತ ಚಂದ್ರನು ಭೂಮಿಗೆ ಪ್ರದಕ್ಷಿಣೆ ಬರುವಾಗ ಮುಖವು ಯಾವಾಗಲೂ ಭೂಮಿಗೆ ಇದಿ ಗಿಯೇ ಇರುವುದು. ಚಂದ್ರನು ಈಗ ಆರಿ ಘ



ಚಂದ್ರ ಹೇಗೆ ಹುಟ್ಟಿದ? ಇದಕ್ಕೆ ಪ್ರೊ. ಪಿಕರಿಂಗ್ ಹೇಳುವ ಉತ್ತರವನ್ನು ಚಿತ್ರ ಮೂಲಕ ಇಲ್ಲಿ ತೋರಿಸಿದೆ. ದ್ರವರೂಪದಲ್ಲಿದ್ದ ಭೂಮಿ ಸೂರ್ಯನ ಆಕರ್ಷಣೆಯಿಂದ ಅಂಡಾ ಕಾರವಾಗಿ ಕೊನೆಗೆ ಅದರ ಒಂದು ತುಣುಕು ಹರಿದು ಹಾರಿಹೋದ ಬಗೆಯ ಮೂರು ಅವಸ್ಥೆ ಗಳನ್ನು ಇಲ್ಲಿ ಕಾಣಬಹುದು.

ಆಫ್ರಿಕಾ, ಅಮೇರಿಕಾ ಮೊದಲಾದ ಖಂಡಗಳಾದುವೆಂದು ತರ್ಕಿಸಲಾಗಿದೆ.

ಪ್ರೊಫೆಸರ್ ಪಿಕರಿಂಗನ ಈ ವಾದವು ಬರಿ ಒಂದು ಊಹೆ. ಇದನ್ನು ಇನ್ನು ಕೆಲವು ವಿಜ್ಞಾನಿಗಳು ವಿರೋಧಿಸಿದ್ದಾರೆ. ಚಂದ್ರನ ಜನನದ ರಹಸ್ಯ ಇನ್ನೂ ಸಂಪೂರ್ಣವಾಗಿ ತಿಳಿಯದಿದ್ದರೂ ಅವನು ಹುಟ್ಟಿ ಸುಮಾರು ೪೦೦ ಕೋಟಿ ವರ್ಷಗಳಾದುವೆಂದೂ ಆಗ್ಗೆ ಆತನು ಭೂಮಿಯಿಂದ ಬರಿ

ರೂಪವನ್ನು ತಾಳಿದನು. ಇವನ ಮೇಲೆ ಭರ ಇಳಿತಗಳಾಗುವುದು ನಿಂತುಹೋಯಿತು. ಆದ ಭೂಮಿ ಇನ್ನೂ ಸ್ವಲ್ಪಸ್ವಲ್ಪ ದ್ರವವಾಗಿಯೇ ಇದ್ದ ದರಿಂದ ಅದರಲ್ಲಿ ಭರತದ ಅಲೆಗಳು ಏಳುತ್ತಿದ್ದವ ಈ ಅಲೆಗಳು ಎದ್ದು ಬೀಳುವಾಗ ಅವುಗಳೊಳ ಘರ್ಷಣೆಯುಂಟಾಗಿ ಭೂಮಿ ತನ್ನ ಅಚ್ಚಿನ ಸುತ್ತುವ ವೇಗವು ಕ್ರಮೇಣ ಕಡಿಮೆಯಾಯಿತು ಇದರಿಂದಾಗಿ ಚಂದ್ರನ ವೇಗವು ಅಧಿಕವಾಯಿತ

ಮತ್ತು ಅವನು ಭೂಮಿಯಿಂದ ಹಿಂದೆ ಸರಿಯಲಾರಂಭಿಸಿದನು. ಇದು ಹೇಗೆಂದು ಅದನ್ನು ಕೆಳಗೆ ವಿವರಿಸಿರುವೆನು:

ಚಂದ್ರನು ಭೂಮಿಯ ಕೇಂದ್ರಕ್ಕೆ ಸುತ್ತು ಬರುತ್ತಿರುವನೆಂದು ಹೇಳುವುದು ಸರಿಯಲ್ಲ. ಚಂದ್ರ ಮತ್ತು ಭೂಮಿ ಇವೆರಡೂ ತಮ್ಮ ತಮ್ಮೊಳಗಿನ ಗುರುತ್ವ ಕೇಂದ್ರಕ್ಕೇ (Common centre of gravity) ಸುತ್ತು ಬರುತ್ತವೆ. ಆದರೆ ಭೂಮಿಯು ಭಾರವು ಚಂದ್ರನ ಭಾರಕ್ಕಿಂತ ೮೧ ಪಾಲು ಅಧಿಕವಾಗಿರುವುದರಿಂದ ಈ ಬಿಂದುವು ಭೂಮಿಯ ಕೇಂದ್ರಕ್ಕೆ ಸಮೀಪದಲ್ಲೇ ಇದೆ. ಭೂಮಿ ಮತ್ತು ಚಂದ್ರ ಈ ಕೇಂದ್ರಕ್ಕೆ ವೃತ್ತಾಕಾರದಲ್ಲಿ ಸುತ್ತುಬರುತ್ತವೆ. ಭೂಮಿಯ ದ್ರವ್ಯರಾಶಿ, ವೇಗ ಮತ್ತು ಅವನು ತಿರುಗುವ ವೃತ್ತದ ತ್ರಿಜ್ಯವನ್ನು ಗುಣಿಸಿರಿ. ಅಂತೆಯೇ ಚಂದ್ರನವನ್ನೂ, ಗುಣಿಸಿರಿ. ಈ ಎರಡೂ ಲಬ್ಧಗಳನ್ನು ಕೂಡಿಸಿದರೆ ಒಂದು ಸಂಖ್ಯೆ ಬರುವುದು. ಇದನ್ನು ತಿರುಗುವ ಪದಾರ್ಥಗಳ 'ಏಂಗುಲರ್ ಮೋಮೆಂಟಮ್' ಎಂದು ಕರೆಯುತ್ತಾರೆ. ಈ ಸಂಖ್ಯೆಯು ಸ್ಥಿರವಾಗಿರಬೇಕೆಂಬ ಒಂದು ಭೌತಿಕ ನಿಯಮವನ್ನು ಅನುಭವದಿಂದ ಕಂಡುಹಿಡಿದಿದ್ದಾರೆ. ಆದುದರಿಂದ ಭರತ ಇಳಿತದ ಅಲೆಗಳ ತಿಕ್ಕಾಟದಿಂದ ಭೂಮಿಯ ವೇಗ ಕಡಿಮೆಯಾದರೆ ಅದರ ಪಾಲು ಚಂದ್ರನ ವೇಗ ಅಧಿಕವಾಗಬೇಕು. ಚಂದ್ರನ ವೇಗ ಅಧಿಕವಾಗಿ ಅದು ಸುತ್ತುವಾಗ ಉಂಟಾದ ಕೇಂದ್ರಪರಾಙ್ಮುಖಬಲ ಅಧಿಕವಾಗಿ ಕ್ರಮೇಣ ಅದರ ದೂರವೂ ಅಧಿಕವಾಗುತ್ತ ಹೋಯಿತು.

ಭೂಮಿ ತನ್ನ ಅಚ್ಚಿನಲ್ಲಿ ಒಂದು ಸುತ್ತು ತಿರುಗಲಿಕ್ಕೆ ಬೇಕಾದ ಅವಧಿಯನ್ನು ನಾವು 'ದಿನ' ಎಂದು ಕರೆಯುತ್ತೇವೆ. ಚಂದ್ರನು ಭೂಮಿಗೆ ಒಂದು ಸುತ್ತು ಬರಲಿಕ್ಕೆ ಬೇಕಾಗುವ ಅವಧಿಯನ್ನು ನಾವು 'ತಿಂಗಳು' ಎಂದು ಕರೆಯುತ್ತೇವೆ. ಚಂದ್ರನ ಜನನಕಾಲದಲ್ಲಿ 'ದಿನ' ಮತ್ತು 'ತಿಂಗಳು' ಇವೆರಡೂ ಒಂದೇ ಸಮನಾಗಿದ್ದು ಅದರ ಅವಧಿ ಈಗಿನ ನಾಲ್ಕು ಗಂಟೆಗಳಷ್ಟಿತ್ತು. ಕ್ರಮೇಣ, ಮೇಲೆ ಹೇಳಿದ ಕಾರಣದಿಂದ 'ದಿನ'ದ ಅವಧಿ ಅಧಿಕವಾಗುತ್ತ ಬಂದು ಪ್ರಕೃತ ೨೪ ಗಂಟೆಗಳಷ್ಟಾಗಿದೆ. ಭೂಮಿಯಿಂದ ಚಂದ್ರನ ದೂರ ಹೆಚ್ಚಾಗುತ್ತಾ ಬಂದು ಈಗ ೨೪೦ ಸಾವಿರ ಮೈಲು ದೂರಕ್ಕೆ ಮುಟ್ಟಿದೆ. ತಿಂಗಳಿನ ಅವಧಿ ಈಗ ಸುಮಾರು ೨೯ ದಿನಗಳು. ಭೂಮಿ ಘನರೂಪದಲ್ಲಿದ್ದರೂ ಅದರಲ್ಲಿ ಸಾಗರಗಳಿವೆ. ಚಂದ್ರ ಮತ್ತು ಸೂರ್ಯರ ಆಕರ್ಷಣದಿಂದ ಈ ಸಾಗರಗಳಲ್ಲಿ ಭರತ ಇಳಿತಗಳುಂಟಾಗುತ್ತವೆ. ಭರತದ ಅಲೆಗಳು ಸಮುದ್ರ ದಡಕ್ಕೆ ಬಂದು ಅಪ್ಪಳಿಸುತ್ತವೆ. ಕೆಲವು ಸ್ಥಳಗಳಲ್ಲಿ ಭರತದಲ್ಲಿ ನೀರು ೪೦-೫೦ ಅಡಿ ಮೇಲೆ ಏರುತ್ತದೆ. ಹೀಗೆ ಅಲೆಗಳು ಸಮುದ್ರ ದಡಕ್ಕೆ ಬಂದು ಉರುಳುವಾಗ ನೀರಿಗೂ ನೆಲಕ್ಕೂ ಘರ್ಷಣೆಯುಂಟಾಗಿ ಶಕ್ತಿ ವ್ಯಯವಾಗುತ್ತದೆ. ಈ ಶಕ್ತಿ ಎಲ್ಲಿಂದ ಬರಬೇಕು? ಭೂಮಿ ತನ್ನ ಅಚ್ಚಿನಲ್ಲಿ ತಿರುಗುವಾಗ ಅದಕ್ಕೆ ಚಲನ ಶಕ್ತಿಯಿದೆ. ಈ ಶಕ್ತಿಯೇ ಸ್ವಲ್ಪ ವ್ಯಯವಾಗುತ್ತದೆ. ಅಂದ ಮೇಲೆ ಭೂಮಿ ತಿರುಗುವುದು ನಿಧಾನವಾಗುತ್ತ ಹೋಗುತ್ತದೆಂದಾಯಿತು. ಅಂದರೆ ಒಂದು ಸುತ್ತು ತಿರುಗಲಿಕ್ಕೆ ಭೂಮಿಗೆ ಹೆಚ್ಚು ಸಮಯಬೇಕಾಗುತ್ತದೆಂದರ್ಥ. ಈ ರೀತಿಯಲ್ಲಿ ೧೨೦೦ ಶತಮಾನಗಳಲ್ಲಿ ಭೂಮಿಗೆ ಒಂದು ಸುತ್ತು ತಿರುಗಲಿಕ್ಕೆ ಒಂದು ಸೆಕೆಂಡು ಹೆಚ್ಚು ಸಮಯಬೇಕಾಗುತ್ತದೆಂದು ಎಣಿಸಿದ್ದಾರೆ. ಚಂದ್ರನು ಒಂದು ನೂರು ವರ್ಷಗಳಲ್ಲಿ ಭೂಮಿಯಿಂದ ಐದು ಅಡಿ ಹಿಂದೆ ಸರಿಯುತ್ತದೆ.

ಕಾಲ ಸರಿದಂತೆ ನಮ್ಮ ದಿನದ ಅವಧಿ ಅಧಿಕವಾಗುತ್ತದೆಂದು ಹೇಳಿದೆವಷ್ಟೆ. ಕೊನೆಗೆ ಸುಮಾರು ಐದು ಸಾವಿರ ಕೋಟಿ ವರ್ಷಗಳ ನಂತರ ಭೂಮಿಗೆ ತನ್ನ ಅಚ್ಚಿನಲ್ಲಿ ಒಂದು ಸುತ್ತು ಬರಲಿಕ್ಕೆ ೪೭ ದಿನ (ಈಗಿನ ಲೆಕ್ಕದಲ್ಲಿ) ತಗಲುವುದು. ಚಂದ್ರನು ಭೂಮಿಯಿಂದ ೩೫೦ ಸಾವಿರ ಮೈಲು ದೂರ ಸರಿಯುವನು. ಆಗ ಅವನಿಗೆ ಭೂಮಿಗೆ ಒಂದು ಸುತ್ತು ಬರಲಿಕ್ಕೂ ೪೭ ದಿನ ತಗಲುವುದು. ಅಂದರೆ 'ದಿನ' ಮತ್ತು 'ತಿಂಗಳು' ಇವೆರಡೂ ಒಂದೇ ಅವಧಿಯುಳ್ಳದ್ದಾಗುತ್ತವೆ.

ನಮಗೆ ಈಗ ಸೂರ್ಯ ಮತ್ತು ಚಂದ್ರರು ಪೂರ್ವದಲ್ಲಿ ಉದಯಿಸಿ ಪಶ್ಚಿಮದಲ್ಲಿ ಮುಳುಗು ವಂತೆ ಕಾಣುತ್ತದೆ. ಕೊನೆಗೆ "ದಿನ" ಮತ್ತು "ತಿಂಗಳು" ಒಂದೇ ಆದಾಗ, ಚಂದ್ರನು ಮತ್ತು ಭೂಮಿ ಒಂದೇ ವೇಗದಲ್ಲಿ ತಿರುಗುವುದ ರಿಂದ ಭೂಮಿಯಲ್ಲಿರುವವರಿಗೆ ಚಂದ್ರನು ಒಂದೇ ಸ್ಥಾನದಲ್ಲಿರುವಂತೆ ತೋರುತ್ತದೆ. ಆಗ್ಗ ಭೂಮಿ ಯಲ್ಲಿರುವವರಿಗೆ ಚಂದ್ರೋದಯ ಮತ್ತು ಚಂದ್ರಾಸ್ತಮಾನವೆಂದಿರುವುದಿಲ್ಲ. ಆದುದರಿಂದ ಚಂದ್ರನಿಂದಾಗಿ ಭರತ ಇಳಿತಗಳು ಉಂಟಾಗು ವುದು ನಿಂತುಹೋಗುತ್ತದೆ. ಇದರಿಂದ ಚಂದ್ರನು ಭೂಮಿಯಿಂದ ಹಿಂದೆ ಸರಿಯುವುದು ನಿಂತು ಹೋಗುತ್ತದೆ. ಚಂದ್ರನು ಇದಕ್ಕಿಂತ ದೂರ ಹೋಗಲಾರನು.

ಆದರೆ ಸೂರ್ಯನಿಂದಾಗಿ ಭೂಮಿಯಲ್ಲಿ ಭರತ ಇಳಿತಗಳು ಆಗುತ್ತಲೇ ಇರುವವು. ಇದರಿಂದಾಗಿ ಸ್ವಲ್ಪ ಮಟ್ಟಿಗಾದರೂ ಭೂಮಿಯ ವೇಗವು ಕಡಿ ಮೆಯಾಗುವುದು. ಸೂರ್ಯನ ಆಕರ್ಷಣ, ಭೂಮಿ ಮತ್ತು ಚಂದ್ರ ಇವರಿಬ್ಬರ ಮೇಲೂ ಒಂದೇ ರೀತಿ ಇರುವುದರಿಂದ ಚಂದ್ರನ ವೇಗವೂ ತುಸು ಕಡಿಮೆಯಾಗುವುದು. ಚಂದ್ರನು ಭೂಮಿಯ ಸಮೀಪ ಬರಲು ಸುರುಮಾಡುತ್ತಾನೆ. ಹೀಗೆ ತಿಂಗಳಿನ ಅವಧಿ ಕಡಿಮೆಯಾಗುತ್ತ ಬರು ವುದು. ದಿನದ ಅವಧಿ ಹೆಚ್ಚಾಗುತ್ತ ಹೋಗು ವುದು. ಆಗ 'ತಿಂಗಳಿಗಿಂತ' 'ದಿನ' ಉದ್ದವಾಗಿ ಕಾಣುತ್ತದೆ. ಚಂದ್ರನು ಪಶ್ಚಿಮದಲ್ಲಿ ಉದ ಯಿಸಿ ಪೂರ್ವದಲ್ಲಿ ಮುಳುಗಲಾರಂಭಿಸುವನು! ಸೂರ್ಯನು ಮಾತ್ರ ಈಗಿನಂತೆಯೇ ಪೂರ್ವದಲ್ಲಿ ಉದಯಿಸಿ ಪಶ್ಚಿಮದಲ್ಲಿ ಮುಳುಗುವನು.

ಚಂದ್ರನು ಈಗಲೇ ಭರತದ ಸಮಯದಲ್ಲಿ ಭೂಮಿಯ ಕೆಲವು ಪ್ರದೇಶಗಳಲ್ಲಿ ೫೦ ಅಡಿ ಎತ್ತರದ ಅಲೆಗಳನ್ನು ಹುಟ್ಟಿಸುವನಷ್ಟೆ. ಚಂದ್ರನು ಭೂಮಿಗೆ ಇನ್ನೂ ಸಮೀಪ ಬಂದಾಗ ಈ ಅಲೆಗಳ ಎತ್ತರ ಇನ್ನೂ ಹೆಚ್ಚಾಗುತ್ತ ಹೋಗುತ್ತದೆ. ಹೀಗೆ ಚಂದ್ರನು ಸಮೀಪ ಬರುತ್ತ ಎಷ್ಟೋ ಸಹಸ್ರ ಕೋಟಿ ವರ್ಷಗಳ ನಂತರ ಭೂಮಿಗೆ ಬರೇ ಹತ್ತು ಸಾವಿರ ಮೈ[...] ಗಳಷ್ಟು ಸಮೀಪ ಬರುತ್ತಾನೆ. ಆಗ ಭೂಮಿ[...] ಆಕರ್ಷಣ ಶಕ್ತಿಯಿಂದಾಗಿ ಚಂದ್ರನು ಪುಡಿಪು[...] ಯಾಗಿ ಆ ಧೂಳಿನ ಕಣಗಳು ಭೂಮಿಗೆ ಬಂ[...] ತೆಳ್ಳಗಿನ ಹರವಾದ ಬಳೆಯಂತೆ ಆವರಿಸುತ್ತ[...] ಚಂದ್ರನನ್ನು ಪುಡಿಪುಡಿ ಮಾಡಿ ಭೂಮಿ[...] ಸುತ್ತ ಹೊರ ಅಂಗಳದಲ್ಲಿ, ಹತ್ತು ಸಾ[...] ಮೈಲು ದೂರದಲ್ಲಿ ರಂಗವಲ್ಲಿ ಹಾಕಿದಂತಾ[...] ತ್ತದೆ. ಶನಿಗ್ರಹಕ್ಕೂ ಈಗ ಇರುವ ಬಳೆಗ[...] ಇದೇ ರೀತಿಯಲ್ಲಿ ಉಂಟಾಗಿರಬಹುದೆಂ[...] ಊಹಿಸಲಾಗಿದೆ. ಆಗ ಚಂದ್ರನಿರುವುದಿ[...] ಭೂಮಿಗೆ ಬೆಳದಿಂಗಳು ಇರುವುದಿಲ್ಲ. ಆದರೆ [...] ದೃಶ್ಯವನ್ನು ನೋಡಲೂ ಭೂಮಿಯಲ್ಲಿ ಜಾ[...] ಮನುಷ್ಯರಿರಲಾರರು. ಏಕೆಂದರೆ ಚಂದ್ರ[...] ಭೂಮಿಗೆ ಸಮೀಪ ಬರುತ್ತ ಭರತ ಇಳಿತ[...] ಅಲೆಗಳು ಸಮುದ್ರದಡದಲ್ಲಿ ಸುಮಾರು ಸಾ[...] ಅಡಿಗಳ ವರೆಗೆ ಏರಿ ನೆಲದ ಮೇಲೆ ಪ್ರಳಯ[...] ಬಂದಂತಾಗುವುದು. ಇಳಿತ ಕಾಲದಲ್ಲಿ [...] ನೀರು ತನ್ನ ದಾರಿಯಲ್ಲಿದ್ದ ಎಲ್ಲ ವಸ್ತು[...] ಳನ್ನು ಕೊಚ್ಚಿಕೊಂಡು ಸಮುದ್ರವನ್ನು ಸೇ[...] ತ್ತದೆ. ತಿರುಗಿ ಭರತ, ತಿರುಗಿ ಇಳಿತ ಹೀ[...] ನೀರಿನ ಬಡಿತಕ್ಕೆ ಸಿಕ್ಕಿದಾಗ ಯಾವ ಮ[...] ಷ್ಯನೂ ಭೂಮಿಯಲ್ಲಿ ಬದುಕಲಾರ. ಆಗ್ಗ ಮ[...] ಷ್ಯರು ಆಕಾಶಬಾಣಗಳ ಸಹಾಯದಿಂದ [...] ಹಾಳು ಭೂಲೋಕವನ್ನೇ ಬಿಟ್ಟು ಮಂಗ[...] ಲೋಕಕ್ಕೋ ಶುಕ್ರ ಲೋಕಕ್ಕೋ ಹೋ[...] ನೆಲಸಿಯಾರು ಎಂದು ಭಾವಿಸೋಣ.

ಅಂತೂ ಚಂದ್ರನಿಗೂ ಹುಟ್ಟು, ಜೀವನ, ಸಾ[...] ಇದೆ ಎಂದಾಯಿತು. ಅವನ ಆಯುಷ್ಯವು ಹ[...] ಸಾವಿರ ಕೋಟಿ ವರ್ಷಗಳು ಎಂದು ಹೇಳ[...] ಹುದು. ಈ ಅವಧಿಯಲ್ಲಿ ಅವನು ಭೂಮಿಯಿಂ[...] ಹೊರಟು ಹೆಚ್ಚೆಂದರೆ ೩೫೦ ಸಾವಿರ ಮೈ[...] ದೂರ ಪ್ರಯಾಣ ಮಾಡಿ ತಿರುಗಿ ಹತ್ತು ಸಾ[...] ಮೈಲು ಹತ್ತಿರದ ವರೆಗೆ ಬರುವನು. ಆಗ ಅ[...] ಆಯುಷ್ಯ ತೀರುವುದು. ಇದು ಚಂದ್ರನ ಕತೆ.

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಸರ್ಮಸಚಿವ
(ಅ) ಮುಖ್ಯಮಂತ್ರಿ (ಆ) ಎಡಗೈಯಿಂದ ಬಾಣ ಬಿಡುವವ (ಇ) ವಿಲಾಸ ಭೋಗಗಳಲ್ಲಿ ಸಹಭಾಗಿಯಾದ ಮಿತ್ರ (ಈ) ವಿಧೇಯನಾದ ಕಾರ್ಯದರ್ಶಿ

೨. ಭೂತಪೂರ್ವ
(ಅ) ಹಿಂದೆ ಆಗಿ ಹೋದ (ಆ) ಭೂತ-ಜನ್ಮ ಹೊಂದಿದ (ಇ) ಅದ್ಭುತವಾದ (ಈ) ಶಿವ.

೩. ನಿಶ್ಚೇಷ್ಟಿತ
(ಅ) ನೀಚಕಾರ್ಯ (ಆ) ಉಚ್ಚೋದ್ಯ (ಇ) ಪ್ರಯತ್ನ (ಈ) ಅಲುಗಾಡದ.

೪. ಯಾತಾಯಾತ
(ಅ) ಬಾವಿಯಿಂದ ನೀರೆಳೆಯುವ ಯಂತ್ರ (ಆ) ಹೋಗಿಬರುವುದು (ಇ) ಕಾರಣವಿಲ್ಲದ (ಈ) ಪುಣ್ಯಕ್ಷೇತ್ರಗಳ ಸಂದರ್ಶನ.

೫. ಗಜಗರ್ಭ
(ಅ) ಆನೆಯ ಮರಿ (ಆ) ಬಹಳ ವಿಲಂಬವಾಗಿ ಆಗುವ ಕಾರ್ಯ (ಇ) ಒಂದು ಅಳತೆ (ಈ) ಗಣೇಶ.

೬. ಯಥೋಚಿತ
(ಅ) ಪುಕ್ಕಟೆ (ಆ) ಸಮಯಕ್ಕೆ ಸರಿಯಾಗಿ (ಇ) ಉಪಚಾರ (ಈ) ಯೋಗ್ಯ ರೀತಿಯ.

೭. ಇದಮಿತ್ಥಂ
(ಅ) ಏನಿದು? (ಆ) ಎಲ್ಲಿಯದು (ಇ) ಇದು ಹೀಗೆಂಬ ನಿರ್ಣಯ (ಈ) ಒಂದು ರೋಗ.

೮. ಕೂಪಕೂರ್ಮ
(ಅ) ಜಗತ್ತನ್ನರಿಯದವ (ಆ) ಬಾವಿಯಲ್ಲಿ ಬಿದ್ದ ಮಗು (ಇ) ಗುಟ್ಟು ತಿಳಿದವ (ಈ) ಒಳಸಂಚುಗಾರ.

೯. ಉಪಸ್ಥಿತಿ
(ಅ) ದುರವಸ್ಥೆ (ಆ) ಪೂಜೆ (ಇ) ಪರಿಸ್ಥಿತಿ (ಈ) ಹಾಜರಿರುವಿಕೆ.

೧೦. ಅನಾಂತರ
(ಅ) ಆಕಾಶ (ಆ) ಒಳಪಟ್ಟು (ಇ) ಮರ್ಯಾದೆಕೆಟ್ಟ (ಈ) ಅಂತರವಿಲ್ಲದ.

೧೧. ಬಿಭೀಷಿಕೆ
(ಅ) ಬೆದರಿಕೆ (ಆ) ರಾವಣನ ತಂಗಿ (ಇ) ಬಯಲಾಟದ ಅಲಂಕಾರ (ಈ) ವಿಚಿತ್ರ.

೧೨. ಹುಲುಸು
(ಅ) ಅಸಹ್ಯ (ಆ) ಫಲವತ್ತಾದ (ಇ) ದನಕರುಗಳ ಮೇಯುವ ಸ್ಥಳ (ಈ) ಹಳಸಿದ.

## ‘ಶಬ್ದ ಭಾಂಡಾರ’ ದ ಸರಿಯಾದ ಅರ್ಥಗಳು

೧. **ನರ್ಮಸಚಿವ** (ಇ) (ಅರಸನ ಅಥವಾ ಶ್ರೀಮಂತನ) ವಿಲಾಸಗಳಲ್ಲಿ ಸಹಭಾಗಿಯಾದ ಮಿತ್ರ; ಮೆಚ್ಚಿನ ಗೆಳೆಯ. [ನರ್ಮ = ಆಟಪಾಟ ವಿನೋದಗಳು + ಸಚಿವ = ಮಂತ್ರಿ, ಮಿತ್ರ. – ಸಂಸ್ಕೃತ]

೨. **ಭೂತಪೂರ್ವ** (ಅ) ಹಿಂದೆ ಆಗಿ ಹೋದ. ಭೂತಪೂರ್ವ ಸಂಪಾದಕ ಅಂದರೆ ಹಿಂದೆ ಸಂಪಾದಕನಾಗಿದ್ದ. **ಅಭೂತಪೂರ್ವ** = ಹಿಂದೆಂದೂ ನಡೆಯದಿದ್ದ (ಸಂಗತಿ); ಅದ್ಭುತ. [ಭೂತ = ಆದದ್ದು – ಪೂರ್ವ = ಹಿಂದೆ – ಸಂಸ್ಕೃತ.]

೩. **ನಿಶ್ಚೇಷ್ಟಿತ** (ಈ) ಅಲುಗಾಡದ; ನಿಶ್ಶಕ್ತ. ಉದಾ: ನಿಶ್ಚೇಷ್ಟಿತನಾಗಿ ಬಿದ್ದನು = (ಮೂರ್ಛೆಯಿಂದ) ಸೆಟೆದುಬಿದ್ದನು. [ನಿಸ್ = ಇಲ್ಲದ, ಚೇಷ್ಟಾ = ಅಲುಗಾಟ, ಯತ್ನ – ಸಂಸ್ಕೃತ]

೪. **ಯಾತಾಯಾತ** (ಅ) ಹೋಗಿ ಬರುವಿಕೆ; ಎಡತಾಕುವಿಕೆ. ಉದಾ: ಸಾಲ ತಿರುಗಿ ತೆಗೆದುಕೊಳ್ಳಲು ಯಾತಾಯಾತ ಹಾಕಿ ಸಾಕಾಯಿತು. [ಯಾತ = ಹೋಗಿದ್ದು, ಆಯಾತ = ಬಂದದ್ದು – ಸಂಸ್ಕೃತ]

೫. **ಗಜಗರ್ಭ** (ಅ) ಬಹಳ ತಡವಾಗಿ ಆಗುವ ಕೆಲಸಕ್ಕೆ ಚಮತ್ಕಾರವಾಗಿ ಉಪಯೋಗಿಸುವ ಶಬ್ದ. (ಆನೆಗೆ ಗರ್ಭನಿಂತ ಮೇಲೆ ಮರಿ ಈಯಲು ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲ ಹಿಡಿಯುತ್ತದ್ದಾದ್ದರಿಂದ) [ಸಂಸ್ಕೃತ]

೬. **ಯಥೋಚಿತ** (ಈ) ಯೋಗ್ಯ ರೀತಿಯ; ಮರ್ಯಾದೆಗೆ ಸರಿಯಾದ. ಉದಾ: ಅತಿಥಿಗಳನ್ನು ಯಥೋಚಿತವಾಗಿ ಸತ್ಕರಿಸಿದ ನಂತರ. [ಯಥಾ = ಹೇಗೆ, ಉಚಿತ = ಯೋಗ್ಯ – ಸಂಸ್ಕೃತ]

೭. **ಇದಮಿತ್ಥಂ** (ಇ) ಇದು ಹೀಗೆ; ಇದ[...] ಹೀಗೆಯೇ, ಹಾಗಲ್ಲ ಎಂದು ಹೇಳು[...] ನಿರ್ಣಯ; ಖಂಡಿತ ನಿರ್ಣಯ. ಉದಾ[...] ಇದಮಿತ್ಥಂ ಎಂದು ಹೇಳಲು ಸಾಕಷ[...] ಆಧಾರವಿಲ್ಲ. [ಇದಂ = ಇದು, ಇತ್ಥಂ = ಹೀಗೆ – ಸಂಸ್ಕೃತ]

೮. **ಕೂಪಕೂರ್ಮ** (ಅ) ಜಗತ್ತನ್ನರಿಯ[...] ಅನುಭವಹೀನ; ಸಂಕುಚಿತ ಬು[...] ಯುವ [ಕೂಪ = ಬಾವಿ (ಯಲ್ಲಿರುವ[...]) ಕೂರ್ಮ = ಆಮೆ. ಅರ್ಥಾತ್ ಬಾ[ವಿ]ಯೊಳಗಿನ ಆಮೆಯಂತೆ ಹೊರ ಜಗ[ತ್]ತನ್ನು ಕಾಣದ. —ಸಂಸ್ಕೃತ]

೯. **ಉಪಸ್ಥಿತಿ** (ಈ) ಹಾಜರಿರುವಿಕೆ. (ಅ[...]ರಿಂದ) **ಅನುಪಸ್ಥಿತಿ** = ಗೈರಹಾಜ[...] [ಉಪ = ಹತ್ತಿರ, ಸ್ಥಿತಿ = ಇರುವಿಕೆ – ಸಂಸ್ಕೃತ]

೧೦. **ಅವಾಂತರ** (ಅ) ಒಳಪಟ್ಟು; ಎರ[...] ವಸ್ತುಗಳ ನಡುವಣಸ್ಥಳ; ಗೌಣ; (ದ[...] ಬಳಕೆಯಲ್ಲಿ) ಅನಾಹುತ ಎಂದೂ ಅರ್ಥ[...] ಕೊಡುತ್ತದೆ. ಅದರೊಳಗೆ ಅವಾಂತ[ರ]ಗಳಿವೆ ಎಂದರೆ ಒಳಪಟ್ಟುಗಳು ಇ[...]

೧೧. **ಬಿಭೀಷಿಕೆ** (ಅ) ಬೆದರಿಕೆ ಹಾಕುವಿ[...] ಉದಾ: ಅವನ ಬಿಭೀಷಿಕೆಗಳಿಗೆ ನಾ[...] ಸೊಪ್ಪು ಹಾಕಲಾರೆ. [ಸಂಸ್ಕೃತ]

೧೨. **ಹುಲುಸು** (ಅ) ಫಲವತ್ತಾದ; ಸಮ[ೃ]ದ್ಧಿಯಾದ. ಉದಾ: ಹುಲುಸಾದ ಬೆ[...] ಅವನ ತಲೆ ಹುಲುಸಾಗಿದೆ. [ಕನ್ನಡ]

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿ[...] ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿ[...] ಶಬ್ದಶಕ್ತಿಯ ತರಗತಿಗಳನ್ನು ಅರಿಯಿರಿ.

೬—೮ ಸರಿಯಿದ್ದರೆ....ಸಾಧಾರಣ

೯ - ೧೦ ,, ....ಉತ್ತಮ

೧೦ – ೧೨ ,, ....ಅತ್ಯುತ್ತಮ

ದ್ರವಿಡ ಕಳಗದ ಕೂಗಿನ
ಹಿನ್ನೆಲೆಯೇನು ?

# ಮದ್ರಾಸಿನ ರಾಜಕಾರಣ ಮತ್ತು ರಾಜಕಾರಣಿಗಳು

ಭಾರತದಲ್ಲಿ ಚಳವಳಿಗಳ, ಸತ್ಯಾಗ್ರಹಗಳ ಕೊರತೆ ಇರುವ ರಾಜ್ಯ ಒಂದೂ ಇಲ್ಲ. ಆದರೆ ಭಾರತದ ರಾಷ್ಟ್ರಧ್ವಜವನ್ನೂ ರಾಜ್ಯಘಟನೆಯ ಪ್ರತಿಗಳನ್ನೂ ಸುಡುವ ಚಳವಳಿಯೊಂದು ನಡೆದುದು ಮದ್ರಾಸ್ ರಾಜ್ಯದಲ್ಲಿ ಮಾತ್ರ. ಮೊನ್ನೆ ನವಂಬರ ೨೬ರಂದು "ದ್ರವಿಡ ಕಳಗಂ" ಎಂಬ ಪಕ್ಷದವರು ಹಲವು ಪಟ್ಟಣಗಳಲ್ಲಿ ರಾಷ್ಟ್ರಧ್ವಜ ಮತ್ತು ರಾಜ್ಯಘಟನೆಯನ್ನು ಸುಡುವ "ದಿನ"ವನ್ನೇ ಆಚರಿಸಿದರು. ಇಡೀ ರಾಜ್ಯದಲ್ಲಿ ೨,೫೦೦ ಕ್ಕಿಂತ ಹೆಚ್ಚು ಜನರನ್ನು ಪೋಲೀಸರು ಬಂಧಿಸಿದರು.

ಮದ್ರಾಸು ಭಾರತದ ರೋಗಗ್ರಸ್ತ ಅಂಗವಾಗುತ್ತಿದೆ. ಭಾರತದ ಒಕ್ಕೂಟದಿಂದ ಪ್ರತ್ಯೇಕವಾಗಿ ಸ್ವತಂತ್ರ ದ್ರಾವಿಡ ನಾಡೊಂದನ್ನು ಸ್ಥಾಪಿಸಬೇಕೆಂಬ ಧ್ಯೇಯವನ್ನಿಟ್ಟುಕೊಂಡ ಎರಡು ಪಕ್ಷಗಳು ಅಲ್ಲಿವೆ. ಅವುಗಳ ಹೆಸರು "ದ್ರವಿಡ ಕಳಗಂ" ಮತ್ತು "ದ್ರವಿಡ ಮುನ್ನೇತ್ರ ಕಳಗಂ" ಎಂದು. ಇವುಗಳಲ್ಲಿ ಎರಡನೆಯದಕ್ಕೆ ಮದ್ರಾಸ್ ವಿಧಾನ ಸಭೆಯಲ್ಲಿ ಕಳೆದ ಚುನಾವಣೆಗಳಲ್ಲಿ ೨೦೫ರಲ್ಲಿ ೧೫ ಸ್ಥಳಗಳು ದೊರೆತಿವೆ. "ದ್ರವಿಡ ಕಳಗಂ" ಚುನಾವಣೆಯಲ್ಲಿ ಭಾಗವಹಿಸಿಲ್ಲ. ಆದರೆ ಅದರ ನಾಯಕ ಈ. ವಿ ರಾಮಸ್ವಾಮಿ ನಾಯಕರು ಬೆಂಕಿ ಕಾರುತ್ತಿದ್ದಾರೆ. ದ್ರಾವಿಡ ಸ್ವಾತಂತ್ರ್ಯ ಚಳವಳಿಗೆ ಪೋಷಕವಾಗಿ ಅವರು ಬ್ರಾಹ್ಮಣದ್ವೇಷದ ಚಳವಳಿಯನ್ನೂ ಹಿಂದೀ ವಿರೋಧಿ ಸತ್ರವನ್ನೂ ಬಹಿರಂಗವಾಗಿ ಸಾಗಿಸಿದ್ದಾರೆ.

ವಿಚಿತ್ರ ಸಂಗತಿಯೆಂದರೆ ಮದ್ರಾಸಿನಲ್ಲಿ ಕಾಂಗ್ರೆಸ್ ಮಂತ್ರಿಮಂಡಲವಿದೆ. ಅದು ಈ ವಿಕೃತ ಬುದ್ಧಿಯ ಚಳವಳಿಯನ್ನು ಹತ್ತಿಕ್ಕಲು ಮೊನ್ನೆ ಮೊನ್ನೆ ಒಂದು ಕಾಯದೆಯನ್ನೂ ಮಾಡಿದೆ. ಆದರೆ ಮದ್ರಾಸ್ ಕಾಂಗ್ರೆಸ್ಸಿನ ಅಂತರಂಗ ಈ ದ್ರಾವಿಡ ಚಳವಳಿಯನ್ನು ಹತ್ತಿಕ್ಕಲು ಅರೆಮನಸ್ಸಿನಿಂದಲೇ ಅಣಿಯಾಗುತ್ತಿದೆಯೆಂಬುದೀಗ ದುರ್ದೈವದ ಸಂಗತಿ. ಅದಕ್ಕೆ ಬೇಕಾದ ನೈತಿಕ ಧೈರ್ಯ ಮಂತ್ರಿಮಂಡಲಕ್ಕಿಲ್ಲ

ಇಂದಿನ ಮದ್ರಾಸ್ ರಾಜಕಾರಣದ ಅರ್ಥ ಮಾಡಿಕೊಳ್ಳಬೇಕಾದರೆ ಕೆಲ ವರ್ಷಗಳ ಹಿಂದೆ ಕ್ರಮಿಸಬೇಕು. ೧೯೫೬ರಲ್ಲಿ ಕಾಂಗ್ರೆಸ್ಸು ಚುನಾವಣೆಯಲ್ಲಿ ಗೆದ್ದು ಅಧಿಕಾರಕ್ಕೇನೋ ಬಂತು. ಆದರೆ ಒಳಜಗಳಗಳು, ತಮಿಳು-ಆಂಧ್ರ ತಿಕ್ಕಾಟ ಮತ್ತು ವೈಯಕ್ತಿಕ ಅಧಿಕಾರಲಾಲಸೆಗಳು ಮಿತಿ ಮೀರಿ ಐದು ವರ್ಷಗಳಲ್ಲಿ ಮೂರು ಮುಖ್ಯ ಮಂತ್ರಿಗಳು ಉರುಳಿದರು. ಆಡಳಿತ ಹದಗೆಟ್ಟಿತು.

ಪರಿಣಾಮವಾಗಿ ೧೯೫೭ರ ಚುನಾವಣೆಗಳಲ್ಲಿ ಕಾಂಗ್ರೆಸ್ಸಿನ ಬಲ ಕುಗ್ಗಿ ಅದರ ಬಹುಮತ ಕಡಿಮೆಯಾಯಿತು ಪ್ರಥಮ ಶ್ರೇಣಿಯ ನಾಯಕರಾರಿಗೂ ಸೀಟು ಸಿಗದ್ದರಿಂದ ಆರಿಸಿ ಬಂದವರೂ ಕೆಳಮಟ್ಟದ ಜನರಾಗಿದ್ದರು. ಕಮ್ಯುನಿಸ್ಟರಿಗೆ

ಹಲವು ಸ್ಥಾನಗಳು ದೊರೆತವು. ಅವರು ವಿರೋಧಿ
ಪಕ್ಷಗಳನ್ನು ಸಂಘಟಿಸಿ ಸಂಯುಕ್ತ ಪ್ರಜಾರಂಗ
ವನ್ನು ಸ್ಥಾಪಿಸಿ ಕಾಂಗ್ರೆಸ್ಸನ್ನು ಅಧಿಕಾರಕ್ಕೆ ಬಾರ
ದಂತೆ ಮಾಡಲು ಹವಣಿಸಿದರು.

ಎಲ್ಲರ ಗೌರವಕ್ಕೆ ಪಾತ್ರನಾದ ನಾಯಕನಿಲ್ಲದ್ದ
ರಿಂದ ಕಾಂಗ್ರೆಸ್ಸು ತುಂಬ ಕಷ್ಟದಲ್ಲಿ ಸಿಲುಕಿತು.
ತಮಿಳುನಾಡು ಕಾಂಗ್ರೆಸ್ಸಿನ ಅಧ್ಯಕ್ಷರಾದ ಕಾಮ
ರಾಜ ನಾಡಾರರಿಗೆ ರಾಜಾಜಿಯನ್ನು ಕಂಡ
ರಾಗದು. ಮದ್ರಾಸಿನ ರಾಜಕಾರಣದಲ್ಲಿ ಅವ
ರನ್ನು ಪ್ರವೇಶಿಸಗೊಡಬಾರದೆಂದು ಅವರು ಬದ್ಧ
ಕಂಕಣರಾಗಿದ್ದರು. ಆದರೆ ಕಾಂಗ್ರೆಸ್ಸನ್ನು
೧೯೫೨ರ ವಿಪತ್ತಿನಿಂದ ಪಾರುಗಾಣಿಸಲು ರಾಜ-
ಗೋಪಾಲಾಚಾರ್ಯರಿಗೇ ಅವರು ಶರಣುಹೋಗ
ಬೇಕಾಯಿತು. ಕೇಂದ್ರ ಗೃಹಮಂತ್ರಿ ಪದದಿಂದ
ನಿವೃತ್ತರಾಗಿ ರಾಜಕಾರಣದ ಪರಲು ಹರಿದು
ಕೊಂಡು ಮದ್ರಾಸಿನಲ್ಲಿ ಬಂದು ನೆಲಸಿದ್ದ
ರಾಜಾಜಿಯನ್ನು ಕಷ್ಟಪಟ್ಟು ಮನವೊಲಿಸಿ
ಮುಖ್ಯಮಂತ್ರಿ ಪದವನ್ನು ಅವರ ಕೊರಳಿಗೆ ಕಟ್ಟ
ಲಾಯಿತು.

ರಾಜಾಜಿ ಕೂಡಲೆ ಕಮ್ಯುನಿಸ್ಟರ ಬೆನ್ನು ಮುರಿ
ಯುವ ಕ್ರಮಗಳನ್ನು ಕೈಕೊಂಡರು. ಕಮ್ಯು
ನಿಸ್ಟರ ವಿರುದ್ಧ ಅವರು ದೈವಧರ್ಮ ದ್ರೋಹಿ
ಗಳೆಂದು ತೀವ್ರ ಪ್ರಚಾರ ಪ್ರಾರಂಭಿಸಿದರು.
ತಂಜಾವೂರು ಜಿಲ್ಲೆಯಲ್ಲಿ ಒಡೆಯ ಒಕ್ಕಲುಗಳ
ವಿವಾದದಲ್ಲಿ ಕಮ್ಯುನಿಸ್ಟರು ಸೇರಿಕೊಂಡು ಜನ
ಪ್ರಿಯರಾಗುತ್ತಿರುವುದನ್ನು ಕಂಡು ಅವರು ಅವ
ಸರದಿಂದ ರೈತಹಿತ ರಕ್ಷಿಸುವ ಕಾಯದೆ ಮಾಡಿ
ರೈತರನ್ನು ಕಮ್ಯುನಿಸ್ಟರ ಬಲೆಯಿಂದ ತಪ್ಪಿಸಿದರು
ಆಂಧ್ರರಾಜ್ಯದ ಬೇಡಿಕೆಯನ್ನು ಮನ್ನಿಸಿ ಪ್ರತ್ಯೇಕ
ಆಂಧ್ರರಾಜ್ಯ ಸ್ಥಾಪನೆಗೆ ನೆರವಾದರು. ಇದ
ರಿಂದ ಹಲವು ಕಮ್ಯುನಿಸ್ಟ್ ಪ್ರಮುಖರು ಆಂಧ್ರ
ವಿಧಾನಸಭೆಗೆ ವರ್ಗಾಯಿಸಲ್ಪಟ್ಟು ಮದ್ರಾಸಿನಲ್ಲಿ
ಅವರ ಶಕ್ತಿ ಕುಂದಿತು

ಎರಡು ವರ್ಷಗಳಲ್ಲಿ ಅವರು ಆಡಳಿತ ಸುಧಾ
ರಣೆ ಮತ್ತು ಇತರ ಕ್ರಮಗಳಿಂದ ಕಾಂಗ್ರೆಸ್ಸಿಗೆ
ಬಂದ ವಿಪತ್ತನ್ನು ಪೂರ್ತಿ ನಿವಾರಿಸಿದ ಮೇಲೆ
ತಮಿಳುನಾಡಿನ ಕಾಂಗ್ರೆಸ್‌ನಾಯಕರಿಗೆ ಇನ್ನೇ
ಈ ಮುದಿ ಬ್ರಾಹ್ಮಣನನ್ನು ಗದ್ದುಗೆಯ ಮೇ
ಉಳಿಸಬೇಕು ಎಂದು ತೋರಿತು. ಈ ಸಮ
ದಲ್ಲಿ ರಾಜಾಜಿ ಹೊಸದೊಂದು ಶಿಕ್ಷಣಯೋಜ
ಯನ್ನು ತಂದರು. ಅದು ವರ್ಣಾಶ್ರಮಧರ್ಮವನ
ಶಾಶ್ವತಗೊಳಿಸಲು ಬ್ರಾಹ್ಮಣ ರಾಜಾಜಿ ಹೂಡಿ
ತಂತ್ರವೆಂದು ಕೂಗೆದ್ದಿತು. ಕಾಂಗ್ರೆಸ
"ಪುಢಾರಿ"ಗಳಿಗೆ ಆಡಳಿತದ ನಿತ್ಯಕ್ರಮಗಳ
ಕೈಹಾಕಲು ಸ್ವಲ್ಪವೂ ಅವಕಾಶವಿಲ್ಲದಂ
ರಾಜಾಜಿ ಮಾಡಿದ್ದರಿಂದ ತಮ್ಮ ವರ್ಚಸ್ಸು ಬೆಳೆ
ಕೊಳ್ಳಲು ತಡೆಯಾಗಿದೆಯೆಂದು ಮೊದಲೇ ಕು
ಯುತ್ತಿದ್ದ ಲಾಲಸಿ ಕಾಂಗ್ರೆಸ್ಸಿಗರಿಗೆ ರಾಜಾಜಿ
ಶಿಕ್ಷಣಯೋಜನೆ ಒಳ್ಳೇ ನೆವ ಒದಗಿಸಿತು. ಅವ
ಆ ನೆವದಿಂದ ರಾಜಾಜಿಯನ್ನು ಅಧಿಕಾರದಿಂ
ಕೆಳಗಿಳಿಸಿ ಕೃತಾರ್ಥರಾದರು.

ತಮಿಳುನಾಡು ಕಾಂಗ್ರೆಸ್ಸನ್ನು ಮುಷ್ಟಿಯೊ
ಗಿಟ್ಟುಕೊಂಡು ಸೂತ್ರಚಾಲನೆ ಮಾಡುತ್ತಿ
ಕಾಮರಾಜರು ಈಗ ಸ್ವತಃ ಮುಖ್ಯ ಮಂತ್ರಿ ಪ
ಕ್ಕೇರಿದರು. ಅವರು ಸ್ವತಃ ಸರಳ ಜೀವ
ಮಾಡುವ ಮನುಷ್ಯ. ಆದರೆ ಅಧಿಕಾರ ಮೋ
ಅವರ ಮುಖ್ಯ ದೌರ್ಬಲ್ಯ. ಅವರು ಮು
ಮಂತ್ರಿಯಾದ ಕೂಡಲೆ ತಮ್ಮ ಸ್ಥಾನವನ
ಭದ್ರಪಡಿಸಿಕೊಳ್ಳಲು ಕೆಲ ಹಂಚಿಕೆಗಳನ
ಮಾಡಿದರು. ಅಧಿಕಾರಕ್ಕೆ ಬಂದೊಡನೆ ಅವ
ಒಂದು ಉಪಚುನಾವಣೆಯನ್ನು ಎದುರಿಸಬೇಕ
ದುದರಿಂದ ಕಾಂಗ್ರೆಸ್ ತತ್ವಕ್ಕೆ ಬದ್ಧ ವಿರೋ
ಗಳಾದ ಗುಂಪುಗಳ ಬೆಂಬಲಕ್ಕೆ ಕೈಯೊಡ್ಡಿದರ

ಇಂಥವರಲ್ಲಿ ದ್ರವಿಡ ಕಳಗಂ ಸಂಸ್ಥೆಯ ವೃ
ನಾಯಕ ವಿ. ರಾಮಸ್ವಾಮಿ ನಾಯಕರು ಪ್ರ
ಖರು. ಈ ಅಗ್ನಿಭಕ್ಷಕ ನಾಯಕರು ವಿಚಿತ್ರವ್ಯ
ತಮಿಳರಿಗೆ ಸ್ವತಂತ್ರದ್ರವಿಡನಾಡನ್ನು ಕೊಡಿಸ
ಮುಂದಾದ ಅವರು ಮೂಲತಃ ತಮಿಳರ
ಸೇಲಂ ಜಿಲ್ಲೆಯ ಹೊಸೂರು ತಾಲೂಕಿನ ಒಂ
ಮನೆತನದವರು. ಒಂದು ಕಾಲದಲ್ಲಿ ಅವ
ಕಾಂಗ್ರೆಸ್ಸಿನಲ್ಲಿಯೂ ಇದ್ದು ಅದೇ ಜಿಲ್ಲೆ
ರಾಜಾಜಿಯೊಡನೆ ದುಡಿದಿದ್ದರು

ಆದರೆ ಅವರು ಅತೃಪ್ತ ಜೀವ. ಆದ್ದರಿಂದ ಅವರು ತಮಿಳು ನಾಡಿನ ಜಿನ್ನಾ ಆಗಲು ಹವಣಿಸಿದರು. ೩೦ ವರ್ಷಗಳ ಹಿಂದೆ ರಶಿಯಕ್ಕೆ ಹೋಗಿ ಬಂದ ಮೇಲೆ ಅವರು ಕ್ರಾಂತಿಕಾರಿ ಭಾಷಣಗಳನ್ನು ಮಾಡತೊಡಗಿದರು. ತಮಿಳು ನಾಡಿನ ದುಃಖಗಳಿಗೆಲ್ಲ ಉತ್ತರದ ಆರ್ಯರ ಆಳಿಕೆಯೇ ಕಾರಣ. ಆರ್ಯರು ಜನತೆಗೆ ದೇವರು ಧರ್ಮಗಳ ಹುಚ್ಚು ಹಿಡಿಸಿ ಶೋಷಿಸುತ್ತಿದ್ದಾರೆ. ಈ ಶೋಷಣೆಯ ಸಾಧನವೆಂದರೆ ದೇವರು ಧರ್ಮಗಳ ವ್ಯಾಪಾರ ಮಾಡುವ ಬ್ರಾಹ್ಮಣರು. ಆದ್ದರಿಂದ ಬ್ರಾಹ್ಮಣರನ್ನೂ ಇತರ ಔತ್ತರೇಯರನ್ನೂ ದೇವರುಗಳನ್ನೂ ದಕ್ಷಿಣದಿಂದ ಓಡಿಸಿಬಿಡಬೇಕು. ಆ ಮೇಲೆ ಜಾತ್ಯತೀತ ದೇವರಹಿತ ಸ್ವತಂತ್ರ ದ್ರಾವಿಡನಾಡು ಅನಂತ ಕಾಲದ ವರೆಗೆ ಸುಖದಿಂದ ಬಾಳುವುದು.

ಇಂದು ಉತ್ತರದಲ್ಲಾಗಲಿ ದಕ್ಷಿಣದಲ್ಲಾಗಲಿ ಶುದ್ಧ ಆರ್ಯರಾಗಲಿ ದ್ರಾವಿಡರಾಗಲಿ ಇಲ್ಲ ಎಂಬ ಮಾತನ್ನು ರಾಮಸ್ವಾಮಿ ನಾಯಕರು ವಿಚಾರಿಸಿಯೇ ಇಲ್ಲ. ಆದರೆ ಅವರ ವಾದಗಳು ಸರಳವಾಗಿದ್ದುದರಿಂದ ತಮಿಳುನಾಡಿನ ಭಗ್ನಮನೋರಥ ತಲೆತಿರುಕ ತರುಣರಿಗೆ ಅವು ಬಹಳ ಆಕರ್ಷಕವಾಗಿ ಕಂಡವು. ಅಲ್ಲದೆ ತಮಿಳಿನಲ್ಲಿ ರಾಮಸ್ವಾಮಿಯವರು ಜನರನ್ನು ಹಿಡಿದು ನಿಲ್ಲಿಸಬಲ್ಲ ವಾಗ್ಮಿಗಳು. ಅವರಿಗೆ ಕೆಲ ಮಟ್ಟಿಗೆ ಬೆಂಬಲ ದೊರಕಿತು. ಹೀಗೆ ತಲೆಯೆತ್ತಿತು ದ್ರವಿಡ ಕಳಗಂ—ಅಂದರೆ ದ್ರವಿಡ ಮಹಾಸಬೆ.

ಇಂಥ ಶುದ್ಧ ಜಾತೀಯ ಸಂಸ್ಥೆಯ ಬೆಂಬಲವನ್ನು ಕಾಮರಾಜರು ಚುನಾವಣೆ ತಂತ್ರವೆಂದು ಬೇಡಿ ಪಡೆದರು. ಚುನಾವಣೆಯಲ್ಲಿ ಅವರಿಗೆ ಯಶ ಬಂತು. ಆದರೆ ರಾಮಸ್ವಾಮಿ ನಾಯಕರು ಕಾಮರಾಜರಿಗೆ ಗೆಲವು ದೊರಕಿಸಿ ಕೊಟ್ಟವರು ತಾವೇ ಎಂದು ಹೇಳಿಕೊಳ್ಳತೊಡಗಿದರು.

ಜಾತ್ಯತೀತ ಸಂಸ್ಥೆಯಾದ ಕಾಂಗ್ರೆಸ್ಸಿಗೆ ಜಾತೀಯ ಸಂಸ್ಥೆಯಾದ ದ್ರವಿಡ ಕಳಗಂ ಬೆಂಬಲವಿತ್ತದ್ದು ವಿಚಿತ್ರವಾಗಿ ತೋರಬಹುದು. ಆದರೆ ರಾಮಸ್ವಾಮಿಯವರು ಇದಕ್ಕೆ ಸಮಾಧಾನ ಹೇಳುತ್ತಾರೆ: ಕಾಮರಾಜರು ಬ್ರಾಹ್ಮಣೇತರ ಪಕ್ಷಪಾತಿ. ಅವರು ಮದ್ರಾಸಿನಲ್ಲಿ ಪ್ರಪ್ರಥಮವಾಗಿ ಬ್ರಾಹ್ಮಣರಹಿತ ಮಂತ್ರಿಮಂಡಲ ಸ್ಥಾಪಿಸಿದ್ದರಲ್ಲವೆ? ಆದ್ದರಿಂದ ಕಾಮರಾಜರಿಗೆ ಕೊಟ್ಟ ಬೆಂಬಲ ಕಾಂಗ್ರೆಸ್ಸಿಗಲ್ಲ, ಬ್ರಾಹ್ಮಣೇತರ ಧ್ಯೇಯಕ್ಕೆ ಕೊಟ್ಟ ಬೆಂಬಲ—ಎನ್ನುತ್ತಾರವರು!

ವಾಸ್ತವಿಕವಾಗಿ ರಾಮಸ್ವಾಮಿಯವರಿಗೆ ತಮ್ಮ ಪ್ರತಿಷ್ಠೆ ಹೆಚ್ಚಿಸಲು ಇದೊಂದು ಸುವರ್ಣ ಸಂಧಿಯಾಗಿತ್ತು. ತಮಿಳು ನಾಡಿನಲ್ಲಿ ದ್ರಾವಿಡ ಧ್ಯೇಯಕ್ಕಾಗಿ ಹೋರಾಡುವ ಇನ್ನೊಂದು ಸಂಸ್ಥೆ—ದ್ರವಿಡ ಮುನ್ನೇತ್ರ ಕಳಗ—ತಲೆಯೆತ್ತಿದ್ದುದರಿಂದ ೧೯೪೯ ರಿಂದ ಈ ಮುದುಕನ ಪ್ರತಿಷ್ಠೆ ಇಳಿಮುಖವಾಗಿತ್ತು. ಕಾಮರಾಜರೊಡನೆ ಮಾಡಿಕೊಂಡ ಕೂಟಸಂಧಿ ತಮಗೆ ಬಲ ಕೊಡುವುದೆಂದು ಅವರು ಗುಣಕಾರ ಹಾಕಿದರು.

"ದ್ರವಿಡ ಮುನ್ನೇತ್ರ ಕಳಗ"ವು ರಾಮಸ್ವಾಮಿಯವರ ಕಳಗದ್ದೇ ಕುರಿ. ಅದರ ನಾಯಕನ ಹೆಸರು ಸಿ. ಎನ್. ಅಣ್ಣಾದುರೆ. ಮದ್ರಾಸ್ ವಿಶ್ವವಿದ್ಯಾಲಯದ ಎಂ. ಎ. ಪದವೀಧರರಾದ ಅವರು ರಾಮಸ್ವಾಮಿಯವರ ಪಟ್ಟಶಿಷ್ಯರಾಗಿದ್ದವರು. ರಾಮಸ್ವಾಮಿಯವರನ್ನು ಅವರ ಚೇಲರು "ಪೆರಿಯಾರ್" (ಹಿರಿಯರು, ಋಷಿಗಳು) ಎಂದು ಕರೆದರೆ ಅಣ್ಣಾದುರೆಯವರನ್ನು "ಅರಿಂಗಿನಾರ್" (ಅರಿತವರು) ಎಂದು ಕರೆಯುತ್ತಿದ್ದರು. ಆದರೆ ರಾಮಸ್ವಾಮಿಯವರ ಗಾಳಿಗುದ್ದಾಟದಿಂದ ಬರಬರುತ್ತ ಬೇಸತ್ತ ಅವರ ಅನುಯಾಯಿಗಳು ೧೯೪೯ ರಲ್ಲಿ ಅಣ್ಣಾದುರೆಯ ನೇತೃತ್ವದಲ್ಲಿ ಈ "ಮುನ್ನೇತ್ರ (ಪ್ರಗತಿಪರ) ಕಳಗ"ವನ್ನು ಸ್ಥಾಪಿಸಿಕೊಂಡರು. ಇದಕ್ಕೆ ಕೊನೆಯ ಕಾರಣವಾದದ್ದು ನಾಯಕರ ಮುಪ್ಪಿನ ಮದುವೆ. ಜೀವಮಾನವೆಲ್ಲ ಮುದುಕರು ತರುಣಿಯರನ್ನು ಮದುವೆಯಾಗಬಾರದು ಎಂದು ಉಪದೇಶಿಸುತ್ತ ಬಂದ ರಾಮಸ್ವಾಮಿಯವರು ೭೦ನೇ ವಯಸ್ಸಿನಲ್ಲಿ ೩೦ ವರ್ಷದ ತರುಣಿ ಶಿಷ್ಯಳನ್ನು ಮದುವೆಯಾಗುವುದಾಗಿ ಸಾರಿದ್ದಲ್ಲದೆ ಕಳಗದ ಸರ್ವಾಧಿಕಾರವನ್ನೇ ಅವಳ ಕೈಗೆ ಕೊಡಲು ಅಣಿಯಾದರು. ಈ

ಹಲವು ಸ್ಥಾನಗಳು ದೊರೆತವು. ಅವರು ವಿರೋಧಿ ಪಕ್ಷಗಳನ್ನು ಸಂಘಟಿಸಿ ಸಂಯುಕ್ತ ಪ್ರಜಾರಂಗ ವನ್ನು ಸ್ಥಾಪಿಸಿ ಕಾಂಗ್ರೆಸ್ಸನ್ನು ಅಧಿಕಾರಕ್ಕೆ ಬಾರ ದಂತೆ ಮಾಡಲು ಹವಣಿಸಿದರು.

ಎಲ್ಲರ ಗೌರವಕ್ಕೆ ಪಾತ್ರನಾದ ನಾಯಕನಿಲ್ಲದ್ದ ರಿಂದ ಕಾಂಗ್ರೆಸ್ಸು ತುಂಬ ಕಷ್ಟದಲ್ಲಿ ಸಿಲುಕಿತು. ತಮಿಳುನಾಡು ಕಾಂಗ್ರೆಸ್ಸಿನ ಅಧ್ಯಕ್ಷರಾದ ಕಾಮ ರಾಜ ನಾಡಾರರಿಗೆ ರಾಜಾಜಿಯನ್ನು ಕಂಡ ರಾಗದು. ಮದ್ರಾಸಿನ ರಾಜಕಾರಣದಲ್ಲಿ ಅವ ರನ್ನು ಪ್ರವೇಶಿಸಗೊಡಬಾರದೆಂದು ಅವರು ಬದ್ಧ ಕಂಕಣರಾಗಿದ್ದರು. ಆದರೆ ಕಾಂಗ್ರೆಸ್ಸನ್ನು ೧೯೫೨ರ ವಿಪತ್ತಿನಿಂದ ಪಾರುಗಾಣಿಸಲು ರಾಜ- ಗೋಪಾಲಾಚಾರ್ಯರಿಗೇ ಅವರು ಶರಣುಹೋಗ ಬೇಕಾಯಿತು. ಕೇಂದ್ರ ಗೃಹಮಂತ್ರಿ ಪದದಿಂದ ನಿವೃತ್ತರಾಗಿ ರಾಜಕಾರಣದ ಪರಲು ಹರಿದು ಕೊಂಡು ಮದ್ರಾಸಿನಲ್ಲಿ ಬಂದು ನೆಲಸಿದ್ದ ರಾಜಾಜಿಯನ್ನು ಕಷ್ಟಪಟ್ಟು ಮನವೊಲಿಸಿ ಮುಖ್ಯಮಂತ್ರಿ ಪದವನ್ನು ಅವರ ಕೊರಳಿಗೆ ಕಟ್ಟ ಲಾಯಿತು.

ರಾಜಾಜಿ ಕೂಡಲೆ ಕಮ್ಯುನಿಸ್ಟರ ಬೆನ್ನು ಮುರಿ ಯುವ ಕ್ರಮಗಳನ್ನು ಕೈಕೊಂಡರು. ಕಮ್ಯು ನಿಸ್ಟರ ವಿರುದ್ಧ ಅವರು ದೈವಧರ್ಮ ದ್ರೋಹಿ ಗಳೆಂದು ತೀವ್ರ ಪ್ರಚಾರ ಪ್ರಾರಂಭಿಸಿದರು. ತಂಜಾವೂರು ಜಿಲ್ಲೆಯಲ್ಲಿ ಒಡೆಯ ಒಕ್ಕಲುಗಳ ವಿವಾದದಲ್ಲಿ ಕಮ್ಯುನಿಸ್ಟರು ಸೇರಿಕೊಂಡು ಜನ ಪ್ರಿಯರಾಗುತ್ತಿರುವುದನ್ನು ಕಂಡು ಅವರು ಅವ ಸರದಿಂದ ರೈತಹಿತ ರಕ್ಷಿಸುವ ಕಾಯದೆ ಮಾಡಿ ರೈತರನ್ನು ಕಮ್ಯುನಿಸ್ಟರ ಬಲೆಯಿಂದ ತಪ್ಪಿಸಿದರು ಆಂಧ್ರರಾಜ್ಯದ ಬೇಡಿಕೆಯನ್ನು ಮನ್ನಿಸಿ ಪ್ರತ್ಯೇಕ ಆಂಧ್ರರಾಜ್ಯ ಸ್ಥಾಪನೆಗೆ ನೆರವಾದರು. ಇದ ರಿಂದ ಹಲವು ಕಮ್ಯುನಿಸ್ಟ್ ಪ್ರಮುಖರು ಆಂಧ್ರ ವಿಧಾನಸಭೆಗೆ ವರ್ಗಾಯಿಸಲ್ಪಟ್ಟ ಮದ್ರಾಸಿನಲ್ಲಿ ಅವರ ಶಕ್ತಿ ಕುಂದಿತು

ಎರಡು ವರ್ಷಗಳಲ್ಲಿ ಅವರು ಆಡಳಿತ ಸುಧಾ ರಣೆ ಮತ್ತು ಇತರ ಕ್ರಮಗಳಿಂದ ಕಾಂಗ್ರೆಸ್ಸಿಗೆ ಬಂದ ವಿಪತ್ತನ್ನು ಪೂರ್ತಿ ನಿವಾರಿಸಿದ ಮೇಲೆ ತಮಿಳುನಾಡಿನ ಕಾಂಗ್ರೆಸ್‌ನಾಯಕರಿಗೆ ಇನ್ನೇಕೆ ಈ ಮುದಿ ಬ್ರಾಹ್ಮಣನನ್ನು ಗದ್ದುಗೆಯ ಮೇಲೆ ಉಳಿಸಬೇಕು ಎಂದು ತೋರಿತು. ಈ ಸಮಯ ದಲ್ಲಿ ರಾಜಾಜಿ ಹೊಸದೊಂದು ಶಿಕ್ಷಣಯೋಜನೆ ಯನ್ನು ತಂದರು. ಅದು ವರ್ಣಾಶ್ರಮಧರ್ಮವನ್ನು ಶಾಶ್ವತಗೊಳಿಸಲು ಬ್ರಾಹ್ಮಣ ರಾಜಾಜಿ ಹೂಡಿದ ತಂತ್ರವೆಂದು ಕೂಗೆದ್ದಿತು. ಕಾಂಗ್ರೆಸ್ "ಪುಢಾರಿ"ಗಳಿಗೆ ಆಡಳಿತದ ನಿತ್ಯಕ್ರಮಗಳಲ್ಲಿ ಕೈಹಾಕಲು ಸ್ವಲ್ಪವೂ ಅವಕಾಶವಿಲ್ಲದಂತೆ ರಾಜಾಜಿ ಮಾಡಿದ್ದರಿಂದ ತಮ್ಮ ವರ್ಚಸ್ಸು ಬೆಳೆಸಿ ಕೊಳ್ಳಲು ತಡೆಯಾಗಿದೆಯೆಂದು ಮೊದಲೇ ಕುದಿ ಯುತ್ತಿದ್ದ ಲಾಲಸಿ ಕಾಂಗ್ರೆಸ್ಸಿಗರಿಗೆ ರಾಜಾಜಿಯ ಶಿಕ್ಷಣಯೋಜನೆ ಒಳ್ಳೇ ನೆವ ಒದಗಿಸಿತು. ಅವರು ಆ ನೆವದಿಂದ ರಾಜಾಜಿಯನ್ನು ಅಧಿಕಾರದಿಂದ ಕೆಳಗಿಳಿಸಿ ಕೃತಾರ್ಥರಾದರು.

ತಮಿಳುನಾಡು ಕಾಂಗ್ರೆಸ್ಸನ್ನು ಮುಷ್ಟಿಯೊಳ ಗಿಟ್ಟುಕೊಂಡು ಸೂತ್ರಚಾಲನೆ ಮಾಡುತ್ತಿದ್ದ ಕಾಮರಾಜರು ಈಗ ಸ್ವತಃ ಮುಖ್ಯ ಮಂತ್ರಿ ಪದ ಕ್ಕೇರಿದರು. ಅವರು ಸ್ವತಃ ಸರಳ ಜೀವನ ಮಾಡುವ ಮನುಷ್ಯ. ಆದರೆ ಅಧಿಕಾರ ಮೋಹ ಅವರ ಮುಖ್ಯ ದೌರ್ಬಲ್ಯ. ಅವರು ಮುಖ್ಯ ಮಂತ್ರಿಯಾದ ಕೂಡಲೆ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ಕೆಲ ಹಂಚಿಕೆಗಳನ್ನು ಮಾಡಿದರು. ಅಧಿಕಾರಕ್ಕೆ ಬಂದೊಡನೆ ಅವರು ಒಂದು ಉಪಚುನಾವಣೆಯನ್ನು ಎದುರಿಸಬೇಕಾ ದುದರಿಂದ ಕಾಂಗ್ರೆಸ್ ತತ್ವಕ್ಕೆ ಬದ್ಧ ವಿರೋಧಿ ಗಳಾದ ಗುಂಪುಗಳ ಬೆಂಬಲಕ್ಕೆ ಕೈಯೊಡ್ಡಿದರು.

ಇಂಥವರಲ್ಲಿ ದ್ರವಿಡ ಕಳಗಂ ಸಂಸ್ಥೆಯ ವೃದ್ಧ ನಾಯಕ ವಿ. ರಾಮಸ್ವಾಮಿ ನಾಯಕರು ಪ್ರಮು ಖರು. ಈ ಅಗ್ನಿಭಕ್ಷಕ ನಾಯಕರು ವಿಚಿತ್ರವ್ಯಕ್ತಿ ತಮಿಳರಿಗೆ ಸ್ವತಂತ್ರದ್ರವಿಡನಾಡನ್ನು ಕೊಡಿಸಲು ಮುಂದಾದ ಅವರು ಮೂಲತಃ ತಮಿಳರಲ್ಲ, ಸೇಲಂ ಜಿಲ್ಲೆಯ ಹೊಸೂರು ತಾಲೂಕಿನ ಒಂದು ಮನೆತನದವರು. ಒಂದು ಕಾಲದಲ್ಲಿ ಅವರು ಕಾಂಗ್ರೆಸ್ಸಿನಲ್ಲಿಯೂ ಇದ್ದು ಅದೇ ಜಿಲ್ಲೆಯ ರಾಜಾಜಿಯೊಡನೆ ದುಡಿದಿದ್ದರು

ಆದರೆ ಅವರು ಅತೃಪ್ತ ಜೀವ. ಆದ್ದರಿಂದ ಅವರು ತಮಿಳು ನಾಡಿನ ಜಿನ್ನಾ ಆಗಲು ಹವಣಿಸಿದರು. ೩೦ ವರ್ಷಗಳ ಹಿಂದೆ ರಶಿಯಕ್ಕೆ ಹೋಗಿ ಬಂದ ಮೇಲೆ ಅವರು ಕ್ರಾಂತಿಕಾರಿ ಭಾಷಣಗಳನ್ನು ಮಾಡತೊಡಗಿದರು. ತಮಿಳು ನಾಡಿನ ದುಃಖಗಳಿಗೆಲ್ಲ ಉತ್ತರದ ಆರ್ಯರ ಆಳಿಕೆಯೇ ಕಾರಣ. ಆರ್ಯರು ಜನತೆಗೆ ದೇವರು ಧರ್ಮಗಳ ಹುಚ್ಚು ಹಿಡಿಸಿ ಶೋಷಿಸುತ್ತಿದ್ದಾರೆ. ಈ ಶೋಷಣೆಯ ಸಾಧನವೆಂದರೆ ದೇವರು ಧರ್ಮಗಳ ವ್ಯಾಪಾರ ಮಾಡುವ ಬ್ರಾಹ್ಮಣರು. ಆದ್ದರಿಂದ ಬ್ರಾಹ್ಮಣರನ್ನೂ ಇತರ ಔತ್ತರೇಯರನ್ನೂ ದೇವರುಗಳನ್ನೂ ದಕ್ಷಿಣದಿಂದ ಓಡಿಸಿಬಿಡಬೇಕು. ಆ ಮೇಲೆ ಜಾತ್ಯತೀತ ದೇವರಹಿತ ಸ್ವತಂತ್ರ ದ್ರಾವಿಡನಾಡು ಅನಂತ ಕಾಲದ ವರೆಗೆ ಸುಖದಿಂದ ಬಾಳುವುದು.

ಇಂದು ಉತ್ತರದಲ್ಲಾಗಲಿ ದಕ್ಷಿಣದಲ್ಲಾಗಲಿ ಶುದ್ಧ ಆರ್ಯರಾಗಲಿ ದ್ರಾವಿಡರಾಗಲಿ ಇಲ್ಲ ಎಂಬ ಮಾತನ್ನು ರಾಮಸ್ವಾಮಿ ನಾಯಕರು ವಿಚಾರಿಸಿಯೇ ಇಲ್ಲ. ಆದರೆ ಅವರ ವಾದಗಳು ಸರಳವಾಗಿದ್ದುದರಿಂದ ತಮಿಳುನಾಡಿನ ಭಗ್ನಮನೋರಥ ತಲೆತಿರುಕ ತರುಣರಿಗೆ ಅವು ಬಹಳ ಆಕರ್ಷಕವಾಗಿ ಕಂಡವು. ಅಲ್ಲದೆ ತಮಿಳಿನಲ್ಲಿ ರಾಮಸ್ವಾಮಿಯವರು ಜನರನ್ನು ಹಿಡಿದು ನಿಲ್ಲಿಸಬಲ್ಲ ವಾಗ್ಮಿಗಳು. ಅವರಿಗೆ ಕೆಲ ಮಟ್ಟಿಗೆ ಬೆಂಬಲ ದೊರಕಿತು. ಹೀಗೆ ತಲೆಯೆತ್ತಿತು ದ್ರವಿಡ ಕಳಗಂ—ಅಂದರೆ ದ್ರವಿಡ ಮಹಾಸಭೆ.

ಇಂಥ ಶುದ್ಧ ಜಾತೀಯ ಸಂಸ್ಥೆಯ ಬೆಂಬಲವನ್ನು ಕಾಮರಾಜರು ಚುನಾವಣೆ ತಂತ್ರವೆಂದು ಬೇಡಿ ಪಡೆದರು. ಚುನಾವಣೆಯಲ್ಲಿ ಅವರಿಗೆ ಯಶ ಬಂತು. ಆದರೆ ರಾಮಸ್ವಾಮಿ ನಾಯಕರು ಕಾಮರಾಜರಿಗೆ ಗೆಲವು ದೊರಕಿಸಿ ಕೊಟ್ಟವರು ತಾವೇ ಎಂದು ಹೇಳಿಕೊಳ್ಳತೊಡಗಿದರು.

ಜಾತ್ಯತೀತ ಸಂಸ್ಥೆಯಾದ ಕಾಂಗ್ರೆಸ್ಸಿಗೆ ಜಾತೀಯ ಸಂಸ್ಥೆಯಾದ ದ್ರವಿಡ ಕಳಗಂ ಬೆಂಬಲವಿತ್ತದ್ದು ವಿಚಿತ್ರವಾಗಿ ತೋರಬಹುದು. ಆದರೆ ರಾಮಸ್ವಾಮಿಯವರು ಇದಕ್ಕೆ ಸಮಾಧಾನ ಹೇಳುತ್ತಾರೆ: ಕಾಮರಾಜರು ಬ್ರಾಹ್ಮಣೇತರ ಪಕ್ಷಪಾತಿ. ಅವರು ಮದ್ರಾಸಿನಲ್ಲಿ ಪ್ರಪ್ರಥಮವಾಗಿ ಬ್ರಾಹ್ಮಣರಹಿತ ಮಂತ್ರಿಮಂಡಲ ಸ್ಥಾಪಿಸಿದ್ದರಲ್ಲವೆ? ಆದ್ದರಿಂದ ಕಾಮರಾಜರಿಗೆ ಕೊಟ್ಟ ಬೆಂಬಲ ಕಾಂಗ್ರೆಸ್ಸಿಗಲ್ಲ, ಬ್ರಾಹ್ಮಣೇತರ ಧ್ಯೇಯಕ್ಕೆ ಕೊಟ್ಟ ಬೆಂಬಲ—ಎನ್ನುತ್ತಾರವರು!

ವಾಸ್ತವಿಕವಾಗಿ ರಾಮಸ್ವಾಮಿಯವರಿಗೆ ತಮ್ಮ ಪ್ರತಿಷ್ಠೆ ಹೆಚ್ಚಿಸಲು ಇದೊಂದು ಸುವರ್ಣ ಸಂಧಿಯಾಗಿತ್ತು. ತಮಿಳು ನಾಡಿನಲ್ಲಿ ದ್ರಾವಿಡ ಧ್ಯೇಯಕ್ಕಾಗಿ ಹೋರಾಡುವ ಇನ್ನೊಂದು ಸಂಸ್ಥೆ—ದ್ರವಿಡ ಮುನ್ನೇತ್ರ ಕಳಗ—ತಲೆಯೆತ್ತಿದ್ದುದರಿಂದ ೧೯೪೯ ರಿಂದ ಈ ಮುದುಕನ ಪ್ರತಿಷ್ಠೆ ಇಳಿಮುಖವಾಗಿತ್ತು. ಕಾಮರಾಜರೊಡನೆ ಮಾಡಿಕೊಂಡ ಕೂಟಸಂಧಿ ತಮಗೆ ಬಲ ಕೊಡುವುದೆಂದು ಅವರು ಗುಣಕಾರ ಹಾಕಿದರು.

"ದ್ರವಿಡ ಮುನ್ನೇತ್ರ ಕಳಗ"ವು ರಾಮಸ್ವಾಮಿಯವರ ಕಳಗದ್ದೇ ಮರಿ. ಅದರ ನಾಯಕನ ಹೆಸರು ಸಿ. ಎನ್. ಅಣ್ಣಾದುರೆ. ಮದ್ರಾಸ್ ವಿಶ್ವವಿದ್ಯಾಲಯದ ಎಂ. ಎ. ಪದವೀಧರರಾದ ಅವರು ರಾಮಸ್ವಾಮಿಯವರ ಪಟ್ಟಶಿಷ್ಯರಾಗಿದ್ದವರು. ರಾಮಸ್ವಾಮಿಯವರನ್ನು ಅವರ ಚೇಲರು "ಪೆರಿಯಾರ್" (ಹಿರಿಯರು, ಋಷಿಗಳು) ಎಂದು ಕರೆದರೆ ಅಣ್ಣಾದುರೆಯವರನ್ನು "ಅರಿಂಗಿನಾರ್" (ಅರಿತವರು) ಎಂದು ಕರೆಯುತ್ತಿದ್ದರು. ಆದರೆ ರಾಮಸ್ವಾಮಿಯವರ ಗಾಳಿಗುದ್ದಾಟದಿಂದ ಬರಬರುತ್ತ ಬೇಸತ್ತ ಅವರ ಅನುಯಾಯಿಗಳು ೧೯೪೯ ರಲ್ಲಿ ಅಣ್ಣಾದುರೆಯ ನೇತೃತ್ವದಲ್ಲಿ ಈ "ಮುನ್ನೇತ್ರ (ಪ್ರಗತಿಪರ) ಕಳಗ"ವನ್ನು ಸ್ಥಾಪಿಸಿಕೊಂಡರು. ಇದಕ್ಕೆ ಕೊನೆಯ ಕಾರಣವಾದದ್ದು ನಾಯಕರ ಮುಪ್ಪಿನ ಮದುವೆ. ಜೀವಮಾನವೆಲ್ಲ ಮುದುಕರು ತರುಣಿಯರನ್ನು ಮದುವೆಯಾಗಬಾರದು ಎಂದು ಉಪದೇಶಿಸುತ್ತ ಬಂದ ರಾಮಸ್ವಾಮಿಯವರು ೭೦ನೇ ವಯಸ್ಸಿನಲ್ಲಿ ೩೦ ವರ್ಷದ ತರುಣಿ ಶಿಷ್ಯಳನ್ನು ಮದುವೆಯಾಗುವುದಾಗಿ ಸಾರಿದ್ದಲ್ಲದೆ ಕಳಗದ ಸರ್ವಾಧಿಕಾರವನ್ನೇ ಅವಳ ಕೈಗೆ ಕೊಡಲು ಅಣಿಯಾದರು. ಈ

ಘಟನೆಯಿಂದ ಅವರ ಶಿಷ್ಯರಲ್ಲನೇಕರು ರುಷ್ಟರಾಗಿ ಹೊರಬಿದ್ದು ಬೇರೆ ಸಂಸ್ಥೆ ಕಟ್ಟಿದರು.

ಅಣ್ಣಾದುರೆ ತಮಿಳಿನಲ್ಲಿ ಉಗ್ರ ಲೇಖಕರು. ಅವರು ಬರೆದ ಚಲಚ್ಚಿತ್ರ ಕಥೆಗಳಲ್ಲಿ ದೇವರ ವಿರುದ್ಧ ಹೆಜ್ಜೆಹೆಜ್ಜೆಗೆ ದ್ವೇಷ ಪ್ರಚಾರವಿದೆ. ಇದನ್ನು ಮುಗ್ಧರಾಗಿ ಕೇಳುವವರು ತಮಿಳುನಾಡಿನಲ್ಲಿ ಸಾವಿರಾರು ಜನ ಇದ್ದಾರೆ. ಅವರು ಕಟ್ಟಿದ ಸಂಸ್ಥೆಯೂ "ದಕ್ಷಿಣದ ಮೇಲೆ ಉತ್ತರದವರ ಪ್ರಭುತ್ವ"ವನ್ನು ತೊಡೆದುಹಾಕುವ ಧ್ಯೇಯವನ್ನೇ ಇಟ್ಟುಕೊಂಡಿದೆ. ಹಿಂದೀ ವಿರೋಧದಲ್ಲಿಯೂ ಅದು ಕಡಿಮೆಯಿಲ್ಲ. ಸ್ವತಂತ್ರ ತಮಿಳುನಾಡು ಬೇಕೆಂಬ ಹಟವೂ ಅದಕ್ಕಿದೆ. ಆದರೆ ರಾಮಸ್ವಾಮಿಯವರಂತೆ ಹುಚ್ಚಾಟ ಮಾಡಲು ಮುನ್ನೇತ್ರ ಕಳಗ ಇನ್ನೂ ಸಿದ್ಧವಾಗಿಲ್ಲ.

ರಾಮಸ್ವಾಮಿ ನಾಯಕರು ತಮ್ಮ ಅಧಿಕಾರಕ್ಕೆ ಎದುರಾಡಿದ ಈ ಸಂಸ್ಥೆಯನ್ನು ಕಂಡರೆ ಎಗರಾಡುತ್ತಾರೆ. ಕಾಮರಾಜರಿಗೆ ಅವರು ಬೆಂಬಲ ವೀಯಲು ಮುನ್ನೇತ್ರ ಕಳಗದವರ ಮೇಲಿನ ಸಿಟ್ಟು ಮುಖ್ಯ ಕಾರಣವಾಗಿತ್ತು.

೧೯೫೭ರಲ್ಲಿ ಮುನ್ನೇತ್ರ ಕಳಗದವರು ಚುನಾವಣೆ ರಂಗಕ್ಕಿಳಿದೊಡನೆ ರಾಮಸ್ವಾಮಿ ನಾಯಕರು ಕಾಮರಾಜರಿಗೆ ಸಹಾಯ ನೀಡುವುದಾಗಿ ಸಾರಿದರು. ಕಾಮರಾಜರು ಅದನ್ನು ಸಂತೋಷದಿಂದ ಸ್ವೀಕರಿಸಿದರು. ರಾಮಸ್ವಾಮಿಯವರ ಸಹಾಯದಿಂದ ಮುನ್ನೇತ್ರ ಕಳಗದವರನ್ನು ಸೋಲಿಸಬಹುದೆಂದು ಅವರಿಗೆ ಅನಿಸಿರಬೇಕು.

೧೯೫೭ರ ಚುನಾವಣೆಗಳಲ್ಲಿ ಕಾಮರಾಜರು ಹುರಿಯಾಳುಗಳ ಆಯ್ಕೆಯಲ್ಲಿ ಮತ್ತು ಚುನಾವಣೆ ತಂತ್ರದಲ್ಲಿ ಮಿತಿಮೀರಿ ತತ್ವಭ್ರಷ್ಟತೆಯನ್ನು ಪ್ರದರ್ಶಿಸಿದರೆಂದು ಆರೋಪಗಳು ಬಂದವು. ಇದನ್ನು ಪ್ರತಿಭಟಿಸಲು ಅನೇಕ ಹಿರಿಯ ಕಾಂಗ್ರೆಸ್ಸಿಗರು ಸಿಡಿದು ಹೋಗಿ "ಕಾಂಗ್ರೆಸ್ ಸುಧಾರಣಾ ಸಮಿತಿ"ಯನ್ನು ಸ್ಥಾಪಿಸಿ ಚುನಾವಣೆ ಕಣಕ್ಕಿಳಿದರು. ಇದು ಕಾಮರಾಜರನ್ನು ದ್ರವಿಡ ಕಳಗದ ಆಶ್ರಯಕ್ಕೆ ಮತ್ತಷ್ಟು ಅಂಟಿಕೊಳ್ಳುವಂತೆ ಮಾಡಿತು.

೨೦೫ ಸ್ಥಳಗಳಿಗಾಗಿ ೭೮೫ ಹುರಿಯಾಳುಗಳು ನಿಂತಿದ್ದ ಈ ಚುನಾವಣೆಗಳಲ್ಲಿ ಕಾಂಗ್ರೆಸ್ಸು ೧೫೧ ಸ್ಥಳಗಳನ್ನು ದೊರಕಿಸಿಕೊಂಡು ತಿರುಗಿ ಅಧಿಕಾರಕ್ಕೇನೋ ಬಂತು. ಆದರೆ ಚುನಾವಣೆಯ ಅನುಕೂಲಕ್ಕಾಗಿ ಹೂಡಿದ ಗತ್ತು ಕಾಮರಾಜರನ್ನೀಗ ಪೇಚಿಗೆ ತರುತ್ತಿದೆ.

ಆದರೆ ಕಾಮರಾಜರ ಮೇಲೆ ರಾಮಸ್ವಾಮಿಯವರಿಗೆ ಅಭಿಮಾನವಿದ್ದರೆ ಅವರೇಕೆ ಕಾಮರಾಜರ ರಾಜ್ಯದಲ್ಲಿ ತಂಟೆ ಎಬ್ಬಿಸುತ್ತಿದ್ದಾರೆ? ಪ್ರಥಮತಃ, ಅವರು ಚಳವಳಿಯನ್ನು ಜೀವಂತ ಇಡಬೇಕಾಗಿದೆ. ಇಲ್ಲದಿದ್ದರೆ ಅವರ ಅನುಯಾಯಿಗಳು ಮುನ್ನೇತ್ರ ಕಳಗದ ಕಡೆ ಒಲೆಯಬಹುದು. ಮುನ್ನೇತ್ರ ಕಳಗದವರು ಚುನಾವಣೆಯಲ್ಲಿ ತಮ್ಮ ವಿರೋಧವಿದ್ದರೂ ೧೫ ಸ್ಥಾನಗಳನ್ನು ಪಡೆದದ್ದಲ್ಲದೆ ಒಟ್ಟು ಮತಗಳಲ್ಲಿ ಸೇಕಡಾ ೧೪ರಷ್ಟನ್ನು ದೊರಕಿಸಿದ್ದರಿಂದ ಅವರ ಶಕ್ತಿ ಬೆಳೆಯುತ್ತಿದೆಯೆಂದು ರಾಮಸ್ವಾಮಿಯವರಿಗೆ ಭಯವಾಗಿರಬೇಕು. ಆದ್ದರಿಂದ ತಾವೇ ದ್ರವಿಡಸ್ಥಾನದ ಭೀಷ್ಮ ಎಂದು ತೋರಿಸಲು ಅವರು ಬ್ರಾಹ್ಮಣರ ಹೋಟೆಲುಗಳ ಸೈನ್ ಬೋರ್ಡುಗಳಿಂದ "ಬ್ರಾಹ್ಮಣ" ಶಬ್ದವನ್ನಳಿಸುವುದೇ ಮೊದಲಾದ ಚಳವಳಿಗಳನ್ನು ಕಾಮರಾಜರ ಎದುರಿನಲ್ಲಿಯೇ ನಡೆಸುತ್ತಲೇ ಇದ್ದರು. ಕಾಮರಾಜರೂ ಅದನ್ನು ಅಷ್ಟು ಹಚ್ಚಿಕೊಳ್ಳಲಿಲ್ಲ.

ಆಮೇಲೆ ರಾಮನಾಥಪುರದ ಗಲಭೆಗಳು ಬಂದವು. ಇಲ್ಲಿ ದುಷ್ಟ ಬ್ರಾಹ್ಮಣರಲ್ಲ, ಬ್ರಾಹ್ಮಣೇತರ ಮೇಲ್ಜಾತಿಯವರೇ ಹರಿಜನರ ಮೇಲೆ ಅತ್ಯಾಚಾರ ಮಾಡಿದರು. ಈ ಘಟನೆಗಳು ದ್ರವಿಡಸ್ಥಾನ ಕಲ್ಪನೆಗೇ ಕುಠಾರಪ್ರಾಯವೆಂದು ರಾಮಸ್ವಾಮಿಯವರಿಗೆ ಕಾಣಿಸಿತು. ದ್ರಾವಿಡರು ಒಂದೇ ಕುಟುಂಬದಂತಿಲ್ಲೆಂದು ಅದು ಸಿದ್ಧಪಡಿಸಿತು. ಬ್ರಾಹ್ಮಣರ ವಿರುದ್ಧ ಹೊಸ ಕೂಗೆಬ್ಬಿಸದೆ ದ್ರಾವಿಡರ ಐಕ್ಯ ದೃಢವಾಗದೆಂದು ಅವರಿಗೆ ಅನಿಸಿರಬೇಕು. ಆದ್ದರಿಂದ ಅವರು ೧೦೦೦ ಬ್ರಾಹ್ಮಣರ ಕೊಲೆ ಮಾಡಲು ಪ್ರಚೋದಿಸುವ ತಮ್ಮ ಪ್ರಸಿದ್ಧ ಭಾಷಣ ಮಾಡಿದರಲ್ಲದೆ "ದ್ರವಿಡ

ಸ್ಥಾನದ ಸ್ವಾತಂತ್ರ್ಯ"ವನ್ನು ದೃಢಪಡಿಸಲು ರಾಷ್ಟ್ರಧ್ವಜ ಮತ್ತು ರಾಜ್ಯಘಟನೆಯನ್ನು ಸುಡುವ ವಿನಾಚರಣೆಯು ಗತ್ತು ಹೂಡಿದರು.

ಬ್ರಾಹ್ಮಣ ವಿರೋಧವು ಮದ್ರಾಸ್ ರಾಜಕಾರಣದಲ್ಲಿ ಕಳಗದವರ ಹೊಸ ಆವಿಷ್ಕಾರವಲ್ಲ. ಜಸ್ಟೀಸ್ ಪಕ್ಷವು ಅವರಿಗಿಂತ ಹಿಂದೆ ಅದನ್ನೇ ಮಾಡಿತ್ತು. ಆದರೆ ಈ ಎರಡು ಕಳಗಗಳು ಅದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಭಾರತವನ್ನೇ ಮತ್ತೆ ವಿಭಜಿಸಬೇಕು ಎಂದು ಕೂಗುತ್ತಿವೆ. ಇದು ಹುಚ್ಚರ ಕೂಗೆಂದು ಸುಮ್ಮನೆ ಬಿಡುವಂತಿಲ್ಲ. ಮುನ್ನೇತ್ರ ಕಳಗಕ್ಕೆ ದೊರೆತ ೧೪% ಮತಗಳು ಅಪಾಯುವನ್ನೇ ಸೂಚಿಸುತ್ತವೆ. ಈ ಗಂಡಾಂತರವನ್ನು ಎದುರಿಸಲೇ ಬೇಕು. ಸುದೈವದಿಂದ ಎರಡು ಕಳಗಗಳ ಈ ಘಾತಕ ಕೂಗು ಭಾರತದ ಐಕ್ಯವನ್ನಪೇಕ್ಷಿಸುವ ಎಲ್ಲ ಪಕ್ಷಗಳನ್ನೂ ಬಡಿದೆಬ್ಬಿಸಿದೆ. ಕಳೆದ ಚುನಾವಣೆಯಲ್ಲಿ ಮುನ್ನೇತ್ರ ಕಳಗದ ಹುರಿಯಾಳುಗಳನ್ನು ಸೋಲಿಸಲು ಕೆಲವೆಡೆ ಕಮ್ಯುನಿಸ್ಟ್ ಮತ್ತು ಫಾರ್ವರ್ಡ ಬ್ಲಾಕ್ ಮೊದಲಾದ ಪಕ್ಷಗಳು ಕಾಂಗ್ರೆಸ್ಸಿಗೆ ಬೆಂಬಲವಿತ್ತದ್ದು ಇದಕ್ಕೆ ಸಾಕ್ಷಿಯಾಗಿದೆ.

ಉತ್ತರ ಭಾರತದವರ ರಾಜ್ಯಭಾರವಿದ್ದಷ್ಟು ಕಾಲ ದಕ್ಷಿಣದವರಿಗೆ ನ್ಯಾಯ ಸಿಗಲಾರದು ಎಂಬ ಪ್ರಚಾರವು ಎರಡೂ ಕಳಗಗಳ ಮುಖ್ಯ ಆಯುಧವಾಗಿದೆ. ಹಿಂದೀ ವಿರೋಧ, ಬ್ರಾಹ್ಮಣ ವಿರೋಧ ಮೊದಲಾದದ್ದೆಲ್ಲ ಅದರ ಕವಲುಗಳು. ದಕ್ಷಿಣದಲ್ಲಿ ಔದ್ಯೋಗಿಕ ಪ್ರಗತಿ ಉತ್ತರದಷ್ಟು ಆಗದಿದ್ದುದು, ಇಲ್ಲಿನ ಬಡತನ ಮತ್ತು ಜನಸಂಖ್ಯೆಯ ಸಮಸ್ಯೆ ಇವು ಈ ವಾದಗಳಿಗೆ ಜನ ಕಿವಿಗೊಡುವಂತೆ ಮಾಡಿವೆ. ಈ ದೂರುಗಳನ್ನು ಹೋಗಲಾಡಿಸುವುದರಿಂದ ಪರಿಸ್ಥಿತಿ ಹಿಡಿತಕ್ಕೆ ಬರಬಹುದಾಗಿದೆ.



## ಅವರು–ನಾವು

* ಆಚಾರ್ಯ ವಿನೋಬಾ

  **ಅವರ ಪ್ರಜ್ಞೆ ದೃಢವಾಗಿದೆ ಕಾಯ ಚಂಚಲ ; ನಮ್ಮ ಪ್ರಜ್ಞೆ ಚಂಚಲವಾಗಿದೆ ಕಾಯ ದೃಢ.**

* ಪಂಡಿತ ನೆಹರು

  **ಅವರ ಆರಾಮದಲ್ಲಿಯೂ ಕೆಲಸವಿದೆ, ನಮ್ಮ ಕೆಲಸದಲ್ಲಿಯೂ ಆರಾಮವಿದೆ.**

* ರಾಜೇಂದ್ರ ಬಾಬು

  **ಅವರ ದೊಡ್ಡಿಸ್ತನದಲ್ಲಿ ನಮ್ರತೆಯಿದೆ, ನಮ್ಮ ನಮ್ರತೆಯಲ್ಲಿಯೂ ದೊಡ್ಡಿಸ್ತನವಿದೆ.**

* ಸರದಾರ ಪಟೇಲ

  **ಅವರು ಮಾತಾಡದೆ ಕೆಲಸ ಮಾಡುತ್ತಿದ್ದರು, ನಾವು ಕೆಲಸ ಮಾಡದೆ ಮಾತಾಡುತ್ತೇವೆ.**

* ಜಮನಾಲಾಲ ಬಜಾಜ

  **ಅವರ ವ್ಯಾಪಾರದಲ್ಲಿಯೂ ದಾನವಿತ್ತು, ನಮ್ಮ ದಾನದಲ್ಲಿಯೂ ವ್ಯಾಪಾರವಿದೆ.**

— ಕಮಲನಯನ ಬಜಾಜ

ಕನ್ನಡದ
ಗಡಿಸೀಮೆಯ ನಗರ



ಕೋಟೆಯೊಳಗಿನ ಕಲೆಕ್ಟರ ಕಚೇರಿ

# ಬಳ್ಳಾರಿ

ತಾಳಿಕೋಟೆ ಕದನ ಮುಗಿದು ವಿಜಯನಗರ ಹಾಳು ಹಂಪೆಯಾಗಿ ಬದಲಾಗುತ್ತಿದ್ದ ಕಾಲ. ಬಳ್ಳಾರಿಯ ವೀರ ಮದ್ದಾನಯ್ಯನಿಗೆ ಯೋಧನಾಗಿ ಕಾದುವ ಅವಕಾಶ ತಪ್ಪಿತು. ಮುಂದೆ ಆತ ಬಳ್ಳಾರಿಯ ಸಮೀಪದ ಬೆಟ್ಟದ ಮೇಲೆ 'ರಾಬಿನ್ ಹುಡ್' ರಾಜ್ಯಭಾರ ನಡೆಸತೊಡಗಿದ.

ತನ್ನ ಶಕ್ತಿ ಮತ್ತು ನಡತೆಯಿಂದ ಆ ಹೆಸರು ಗಳಿಸಿಕೊಂಡ ಆತ ಬಳ್ಳಾರಿಯ ಬಂಡೆಗಲ್ಲುಗಳ ಮೇಲೆ ಕುಪ್ಪಳಿಸುತ್ತ ಎಂದಿನಂತೆ ದರೋಡೆಯ ರುದ್ರ ನೃತ್ಯವಾಡುತ್ತ ಬಂದ. ಹಗರಿಯ ಜಂಗಮಯ್ಯ ಆ ದಾರಿಯಾಗಿ ನಡೆದಿದ್ದಾಗ ಅವನೆದುರು ಖಡ್ಗ ಝಳಪಿಸಿ ಭಲ್ಲೆ ಹಿರಿದು ನಿಂತ ಮದ್ದಾನಯ್ಯ. ಜಂಗಮಯ್ಯನ ಕಯ್ಯಲ್ಲಿ ಸದಾ ತಿರುಗ್ಯುತ್ತಿರುವ ಕವಣೆ ಕೋಲಿತ್ತು. ಸೊಂಟದಲ್ಲಿ ಒಂದೇ ಒಂದು ಉಂಡೆಕಲ್ಲು ಇತ್ತು. ಆ ಕಲ್ಲನ್ನು ಕವಣೆಯ ಕವಚದಲ್ಲಿ ಉಯ್ಯಲಾಡಿಸಿ ಆತ ಒಂದೇಟು ಹೊಡೆದ ಮದ್ದಾಯ್ಯನ ಹಣೆಗೆ.

ಮರುಕ್ಷಣದಲ್ಲಿ ಮದ್ದಾನಯ್ಯನ ಕತ್ತಿ ಭಲ್ಲೆಗಳು ಜಂಗಮಯ್ಯನ ಪದತಲದಲ್ಲಿದ್ದುವು. ಒಣ ಪಾರೆಯ ಮೇಲೆ ನಿಂತ ಜಂಗಮಯ್ಯನ ಕಾಲು ಮದ್ದಾನಯ್ಯನ ಹಣೆಯ ಕೆನ್ನೀರಿಂದ ತಂಪಾಯಿತು. ಮದ್ದಾನಯ್ಯ ಕೈಲಾಸಕ್ಕೆ ಸಂದ.

ಬಳ್ಳಾರಿಯ ಇತಿಹಾಸಕ್ಕೆ ಸಂಬಂಧಿಸಿದ ದಂತಕಥೆ ಇದು. ಇಂಥ ಕಥೆಯಲ್ಲಿ ಇದುವೆ ಮೊದಲನೆಯದೆಂದೇನೂ ಅಲ್ಲ. ಬಳ್ಳಾರಿಗೂ ಮದ್ದಾನಯ್ಯನಂಥ 'ದೈತ್ಯ'ರಿಗೂ ಪ್ರೀತಿ ಬಹಳವೆಂದು ತೋರುತ್ತದೆ. ಬಳ್ಳ ಎಂಬ ಅಸುರ ಅತಿ ಪುರಾತನ ಕಾಲದಲ್ಲಿ ಇಲ್ಲಿ ಮದ್ದಾನಯ್ಯನಂತೆಯೇ ಮೆರೆಯುತ್ತಿದ್ದನಂತೆ. ಅವನ ಮದದ ಶೋಕಿ ಇನ್ನೊಂದು ತರ. ದೇವಕನ್ನಿಕೆ (ಅಪ್ಸರೆ)ಯರ ಸುಖ ಸವಿಯಬೇಕೆಂದು ಅವನ ಲಾಲಸೆ. ಅವನು ಲಾಲಸೆಯನ್ನಂತೂ ತೀರಿಸಿಕೊಂಡ ನಿಜ. ಆದರೆ ಅವರ ಗಂಡನಿದ್ದಾನಲ್ಲ ಇಂದ್ರ—ಅವನು ಬಿಡಬೇಕಲ್ಲ. ಬಳ್ಳನನ್ನು ಆತ ಹಣಾಹಣಿ ಹೋರಾಡಿ ಕೊಂದುಬಿಟ್ಟ. ಅದರಿಂದಾಗಿ ಊರಿಗೆ ಬಳ್ಳಾರಿ ಎಂಬ ಹೆಸರು ಬಂದಿತೆನ್ನುತ್ತಾರೆ.

ಇದು ಎಷ್ಟು ಸತ್ಯವೋ ಯಾರಿಗೆ ಗೊತ್ತು.

"ಪ್ರವಾಸಿ" ಬರೆದುದು

ಆದರೆ ಒಂದು ವಾದವನ್ನು ನೀವೊಪ್ಪದಿದ್ದರೂ ಅದಕ್ಕೆ ವಸ್ತುಸ್ಥಿತಿಯ ಆಧಾರವಿರುವುದನ್ನು ನೀವು ಅಲ್ಲಗಳೆಯಲಾರಿರಿ. ಶತಮಾನಗಳಿಂದ ನೀರು ಆರಿಹೋದ ಈ ಪಟ್ಟಣಕ್ಕೆ—ಊರಿಗೆ ಬಳ್ಳಾರಿ ಎಂದು ಅನ್ವರ್ಥ ಹೆಸರೇ ಬಂದಿರಬೇಕು. ನನಗಂತೂ ಬಳ್ಳಾರಿಯ ಹೆಸರು ಕಿವಿಗೆ ಬಿದ್ದಾಗ ಲೆಲ್ಲ "ಬೆಳ್ಳ + ಆರಿ" "ನೀರು ಬತ್ತಿಹೋಯಿತು"



ಮುದ್ದಾನಯ್ಯನ ವಧೆ

ಎಂಬ ದ್ರವಿಡ ಭಾಷೆಯ ಹಾಹಾಕಾರ ಕೇಳೈಸಿದಂತಾಗುತ್ತದೆ.

ಬಳ್ಳಾರಿ ಜಿಲ್ಲೆಯ ಗಜೆಟೀಯರನ್ನು ತೆಗೆದು ನೋಡಿ ಬೇಕಾದರೆ. ಕಳೆದ ಒಂದೇ ಒಂದು ಶತಮಾನದಲ್ಲಿ ನೀರಿಲ್ಲದೆ ಅದು ಪಟ್ಟ ಪಾಡಿನ ಕಥೆ ಅಲ್ಲಿ ವಿಸ್ತಾರವಾಗಿದೆ. ೧೮೭೬-೭೮ ರ ಬರಗಾಲದ ಪರಿಣಾಮವೊಂದನ್ನು ನೆನೆದರೆ ಸಾಕು ಜುಮ್ಮೆನ್ನಿಸುತ್ತದೆ ಮೈ. ಮತ್ತೆ ಇಪ್ಪತ್ತು ವರ್ಷಗಳ ಕಾಲ ಬಳ್ಳಾರಿಯ ಜನಸಂಖ್ಯೆಯಲ್ಲಿ ಹೆಚ್ಚಳವಾಗಲಿಲ್ಲ. ಬಳ್ಳಾರಿಯ ಬಿಸಿಲು ಪ್ರಸಿದ್ಧ. ಬೆಳದಿಂಗಳೂ ಅಲ್ಲಿ ಬಿಸಿಲಿನಂತೆ ಕಾಣುತ್ತದಂತೆ—ವಿರಹಿಗಳಲ್ಲದವರಿಗೂ.

ಈಗೇನೂ ಬಳ್ಳಾರಿಯನ್ನು ನೀರಿಲ್ಲದ ಅಗ್ನಿಕುಂಡವೆನ್ನಬೇಕಾಗಿಲ್ಲ. ತುಂಗಭದ್ರೆ ಒಲಿದಿದ್ದಾಳೆ. ಹೊಸಪೇಟೆಯ ಕಟ್ಟೆಯ ನೀರು ವೈತರಣಿಯಾಗಿ ದೊರೆಯಬೇಕು ಬಳ್ಳಾರಿಗೆ. ಇನ್ನೇನು "ವೈಕುಂಠ" ಬಳ್ಳಾರಿಗೆ ಎಂದಿನಂತೆ ಸಮೀಪದಲ್ಲಿಯೇ ಇದೆ ಬೇರೆ.

ಆದರೆ ಕನ್ನಡ ನಾಡಿನ ಮಟ್ಟಿಗೆ ಬಳ್ಳಾರಿ ಒಣ ನೆಲವಾದುದಿಲ್ಲ. ಅದು ಹತ್ತಿ ಬೆಳೆದು ಚಿನ್ನದ ನಾಣ್ಯ ಗಳಿಸುವ ನೆಲ. ಕಬ್ಬಿಣ ಅಗೆದು ಬಂಗಾರ ತರುವ ನೆಲ. ಕನ್ನಡದ ನವಚೇತನ ಮೊದಲು ಮೂಡಿದುದು ಇಲ್ಲಿ. ಕಳೆದ ಶತಮಾನದ ಉತ್ತರಾರ್ಧದಲ್ಲಿ ಲಂಡನ್ ಮಿಶನ್ನಿನವರು ಇಲ್ಲಿ ಕನ್ನಡ ಸಸಿಗೆ ನೀರೆರೆದರು. ಕನ್ನಡದ ಮೊದಲ ವಾರಪತ್ರಿಕೆಯನ್ನು ಇಲ್ಲಿಂದ ಹೊರಡಿಸಿದರು. ವಾರ್ಡ್ಲಾ ಕಾಲೇಜನ್ನು ಕಟ್ಟಿದರು.

ಕ್ರೈಸ್ತ ವೇದ ಬೈಬಲ್ ಇಲ್ಲಿ ಕನ್ನಡದಲ್ಲಿ ಮೊದಲ ಬಾರಿ ಪ್ರಕಟವಾಯಿತು ಎಂಬುದೂ ಸತ್ಯಾರ್ಥಪ್ರಕಾಶವೇ.

"ಬಳ್ಳಾರಿಯ ಒಂದು ಮೂರಂಶ ಜನ ತೆಲುಗರು" ಎಂದು ಒಂದು ತಲೆಮಾರಿನ ಹಿಂದೆ ಸಾಹೇಬರೊಬ್ಬರು ವರದಿ ಮಾಡಿದರು. "ಕನ್ನಡಿಗರೇ ಇಲ್ಲಿ ಪ್ರಬಲರು" ಎಂದು ಅವರು ಹೇಳಿದ್ದರೂ ಬಳ್ಳಾರಿ ಕನ್ನಡಕ್ಕೆ ದೊರೆಯಬೇಕಾದರೆ ನೆಲದಿಂದ ಆಕಾಶದ ವರೆಗೆ ರಾದ್ಧಾಂತ ಮಾಡಬೇಕಾಯಿತು. ಬಳ್ಳಾರಿ ಕನ್ನಡಕ್ಕೆ ಬಂತು. ಬಳ್ಳಾರಿಯೊಂದಿಗೆ ಕೆಚ್ಚು ಸಹನೆಗಳೂ ಕನ್ನಡಕ್ಕೆ ದೊರೆತುದು ಸಹಜ.

ಬಳ್ಳಾರಿಯಲ್ಲಿ 'ಕನ್ನಡ'ದ ಹಲವು ಹೋರಾಟಗಳು ಜರಗಿವೆ. ಆಂಧ್ರ ವಿಶ್ವವಿದ್ಯಾಲಯ ಮೂರು ದಶಕಗಳ ಹಿಂದೆ ಅಸ್ತಿತ್ವಕ್ಕೆ ಬಂದಾಗ ಬಳ್ಳಾರಿ ಜಿಲ್ಲೆಯನ್ನು ಆ ವಿಶ್ವವಿದ್ಯಾಲಯಕ್ಕೆ ತಳಕುಹಾಕಿದ್ದರ ವಿರುದ್ಧ ಅಲ್ಲಿ ಕನ್ನಡಿಗರು ಮೊದಲ ಸದ್ದು ಹೊಡೆದರು—ಗೆದ್ದರು. ಇಲ್ಲಿ

ಅನಂತರ ನಡೆದ ಹಲವು ಹೋರಾಟಗಳ ಫಲವಾಗಿ ಆಂಧ್ರರು ಜಿಲ್ಲೆಯನ್ನೇ ನುಂಗುವ ಆಸೆ ತೊರೆದು ಮೂರು ತಾಲೂಕುಗಳನ್ನಷ್ಟೇ ಕಚ್ಚಿಕೊಂಡು ಸಂತುಷ್ಟರಾಗಬೇಕಾಯಿತು. ಆದರೂ ಬಳ್ಳಾರಿ ನಗರ ಪಾಲಿಕೆಯಲ್ಲಿ ಆಂಧ್ರರು ಇನ್ನೂ ತಮ್ಮ ಭುಜತಟ್ಟಿಕೊಳ್ಳುವುದನ್ನು ಬಿಟ್ಟಿಲ್ಲ. ಕನ್ನಡದ ಈ ಸೀಮಾಪ್ರಾಂತದಲ್ಲಿ ಸಾಹಿತ್ಯ ಸಮ್ಮೇಲನ ಸೇರುತ್ತಿರುವುದು ಇದು ಮೂರನೇ ಸಲ.

ಐತಿಹಾಸಿಕವಾಗಿ ಬಳ್ಳಾರಿಗೆ ಮಹತ್ವ ಬಂದುದು ಹೈದರ ಟಿಪ್ಪುಗಳ ಕಾಲದಿಂದ. ಆಗ ಭಾರತದ ರಾಜಕೀಯದಲ್ಲಿ ಹೊಸ ಸ್ಥಿತ್ಯಂತರವೊಂದು ನಡೆಯುತ್ತಲಿತ್ತು. ಹೊಸ ಯುದ್ಧ ಕೂಟ ಮತ್ತು ತಂತ್ರಗಳೊಂದಿಗೆ ಹೊಸ ಕೋಟೆಗಳು, ಸೇನಾಶಿಬಿರಗಳು ನಿರ್ಮಾಣವಾಗತೊಡಗಿದ್ದುವು. ಬಳ್ಳಾರಿಯ ಗುಡ್ಡದ ಮೇಲೆ ಹೊಸ ವೈರಿಗಳನ್ನೆದುರಿಸಲು ಟಿಪ್ಪು ಕೋಟೆ ಕಟ್ಟಿದ. ಇಂದಿಗೂ ಬಳ್ಳಾರಿಯ ಕೋಟೆಯನ್ನು ನೀವು ನೋಡಬಹುದು. ಬ್ರಿಟಿಶರ ಕಾಲದಲ್ಲಿ ಊರಿಗೆ ಬರಗಾಲ ಬಂದಾಗ ಬಳ್ಳಾರಿಯ ನಾಗರಿಕರಲ್ಲಿ ಇಪ್ಪತ್ತೆಂಟು ಸಾವಿರಷ್ಟು ಜನರು ಹೊಟ್ಟೆಪಾಡಿಗಾಗಿ ಈ ಕೋಟೆಯ ಕಂದಕದ ಮಣ್ಣು ಹೊತ್ತರು—ಬರಿಯ ಎರಡಾಣೆ ದಿನಕೂಲಿಗೆ !

ಬರಗಾಲ ಕಾಮಗಾರಿಯೇ ಬಳ್ಳಾರಿಗೆ ಬೇಕಾದ ಹೆಚ್ಚಿನ ರಸ್ತೆಗಳನ್ನು ಕಳೆದ ಶತಮಾನದಲ್ಲಿ ಒದಗಿಸಿತು. ಅಷ್ಟರತನಕ, ಆಹಾರಧಾನ್ಯಗಳ ಬೆಳೆಯಲ್ಲಿ ಸ್ವಯಂಪೂರ್ಣವಲ್ಲದ ಬಳ್ಳಾರಿ ಆಂಧ್ರದ ಅಕ್ಕಿಗಾಗಿ ದಾರಿ ನೋಡಬೇಕಾಗಿತ್ತು. ಬರ ಬಂದಾಗ ದೂರದ ಅನಂತಪುರದಿಂದ ಅಕ್ಕಿ ಸಾಗಿಸಿ ತರುವುದೂ ಸಾಹಸವೇ.

ಬಳ್ಳಾರಿಯನ್ನು ಹಾದು ರೇಲು ಮಾರ್ಗ ಹೋಗಲು ಆರಂಭವಾದುದು ೧೮೭೦ರಲ್ಲಿ. ಗುಂತಕಲ್-ಹುಬ್ಬಳ್ಳಿ ದಾರಿ ೧೮೭೧ರಲ್ಲಿ ತೊಡಗಿ ೮೪ರಲ್ಲಿ ಹೊಸಪೇಟೆಗೆ ತಲಪಿತು. ಆದರೆ ಈ ಯೋಜನೆ ಮಾತ್ರ ೧೮೫೧ರದು. ಇಲ್ಲಿ ವಾಡ್ಲಾರ್ ಹೈಸ್ಕೂಲು ಕಾಲೇಜಾಯಿತೆಂದೆನಲ್ಲ. ಅದು ಬರಿಯ ಶಾಲೆಯಾಗಿ ೧೮೪೬ರಲ್ಲಿ ತೊಡಗಿತು. ೧೮೬೭ ರಲ್ಲಿ ಮೆಟ್ರಿಕ್ಯುಲೇಶನ್ ಪರೀಕ್ಷೆಗೆ ಈ ಶಾಲೆಯ ವಿದ್ಯಾರ್ಥಿಗಳು ಕುಳಿತರು. ಅದು ಕಾಲೇಜಾದುದು ೧೮೬೯ರಲ್ಲಿ. ಮತ್ತೆ ಕೆಲ ಕಾಲದಲ್ಲಿ ಕಾಲೇಜು ಪುನಃ ಹೈಸ್ಕೂಲಾಗಬೇಕಾಯಿತು. ಈ ಶತಮಾನದ ಆರಂಭದಲ್ಲಿ ಬಳ್ಳಾರಿಯ ಜನಸಂಖ್ಯೆ ಸುಮಾರು ಅರವತ್ತು ಸಾವಿರದಷ್ಟು ಇತ್ತು. ಈಗ ಅದು ಸುಮಾರು ೭೫,೦೦೦ ಆಗಿದೆ. ಇಂದು ಅಲ್ಲಿ ವಾಡ್ಲಾರ್ ಕಾಲೇಜಿನ ಬದಲು ವೀರಶೈವ ಕಾಲೇಜಿದೆ. ಒಂದು ಪೊಲಿಟೆಕ್ನಿಕ್ ಸಂಸ್ಥೆಯಿದೆ.

ಬಳ್ಳಾರಿ ಹತ್ತಿಯನ್ನು ಮಾತ್ರ ನಿರ್ಯಾತ ಮಾಡುವುದಿಲ್ಲ. "ಹುಣಸೆಹಣ್ಣು, ಈರುಳ್ಳಿ, ನೆಲಗಡಲೆ (ಶೇಂಗಾ) ಎಲ್ಲವಕ್ಕೂ ನಾವು ಧಾರಾಳಿಗಳು" ಎನ್ನುತ್ತಾರೆ ಬಳ್ಳಾರಿಯವರು.

ಈಗ ಬಳ್ಳಾರಿಯನ್ನು ನೋಡಿದರೆ 'ಬರೋಬರಿ' ಅನ್ನಿಸಬೇಕು. ಹಾಗಿವೆ ಸರಕಾರಿ ಮತ್ತು ಖಾಸಗಿ ಕಟ್ಟಡಗಳು. ಸಹಕಾರೀ ಭವನ, ಟೆಲಿಫೋನ್ ಆಫೀಸ್, ಇಂಪೀರಿಯಲ್ ಬ್ಯಾಂಕು ಒಂದೊಂದೂ ತನ್ನ ಇರುವಿಕೆಯನ್ನು ಗಮನಕ್ಕೆ ತಂದು ಕೊಡುವಂತಿದೆ. ಒಂಭತ್ತು ಮೈಲಿ ದೂರ ಹಗರಿಯಿಂದ ತಂದ ನೀರನ್ನು ಶೇಖರಿಸಿಡುವ ದೊಡ್ಡ ನೀರಿನ ಕೆರೆಯಿದೆ. ಈಗ ಬಳ್ಳಾರಿಗೆ ನಳಗಳೂ ಇವೆ.

ಬಳ್ಳಾರಿಯ ಬೆಟ್ಟ-ಟಿಪ್ಪುಸುಲ್ತಾನನ ಕೋಟೆಯಿರುವ ಬೆಟ್ಟವನ್ನೇರಲು ಏನೇನೂ ಕಷ್ಟಪಡಬೇಕಾಗಿಲ್ಲ. ಸುಮಾರು ೪೮೦ ಅಡಿ ಮೇಲೇರಿದರೆ ಸಾಕು. [ ಪಟ್ಟಣ ಸಮುದ್ರ ಮಟ್ಟದಿಂದ ಸುಮಾರು ೧೫೦೦ ಅಡಿ ಎತ್ತರ ] ಅದರ ಮೇಲೆ ನಿಂತು ನೋಡಿದರೆ ಬಳ್ಳಾರಿಯ ಸೊಗಸನ್ನು ಸವಿಯಬಹುದು. ಗಾಂಧೀನಗರ, ಪಟೇಲ ನಗರ, ನೆಹ್ರೂ ನಗರ ಬೇಕಾದಂತೆ ಹಕ್ಕಿಯ ನೋಟವನ್ನೋ ವಿಮಾನ ವೀಕ್ಷಣೆಯನ್ನೊ ಪಡೆಯಬಹುದು ಅಲ್ಲಿಂದ.

ಬಳ್ಳಾರಿಯ ನಡುವೆ ಒಂದು ಕೆರೆಯುಂಟು. ತಿಳಿನೀರು ತುಂಬಿದ ಕೆರೆಯಲ್ಲ ಅದು. ಹೊಲಸು ನೀರು ತುಂಬಿದ 'ಅಂಬುಧಿ' [ಮೈಸೂರಿಗೆ ಸೇರಿದ

ಮೇಲೆ ಕೆರೆಗಳೆಲ್ಲ ಸಂದ್ರ-ಸಮುದ್ರಗಳೂ ಅಂಬುಧಿಗಳೂ ಆಗುವುದು ನ್ಯಾಯ ಅಲ್ಲವೆ?] ಬಳ್ಳಾರಿಗೊಂದು ಸೆಂಟ್ರಲ್ ಜೈಲೂ ಇದೆ. ಮಜಬೂತಾದುದು.

ಬಳ್ಳಾರಿಯಲ್ಲಿ ಕಾರಖಾನೆಗಳಿಲ್ಲವೆ? ಇವೆ ಸ್ವಾಮಿ, ಅರಳೆಯ ಪ್ರೆಸ್ಸುಗಳು! ಬಟ್ಟೆಗಿರಣಿಗಳು? ಆಗಬೇಕಷ್ಟೆ. ಮೊನ್ನೆ ಮೊನ್ನೆ ಎಂದ ಹಾಗೆ ಇಲ್ಲಿಗೆ ಮೂರು ವರ್ಷಗಳ ಹಿಂದೆ ತಾನೆ ಜೋಗದ ವಿದ್ಯುತ್ತಿನ ಅಗ್ಗದ ಬೆಳಕು ಬಂತು. ಇಷ್ಟೇ ಅಲ್ಲದೆ ಬಳ್ಳಾರಿ ಕೆತ್ತನೆ ಕೆಲಸಕ್ಕೆ ಪ್ರಸಿದ್ಧ.

ಬಳ್ಳಾರಿ ನಗರ ಪಾಲಿಕೆಯಾದುದು ೧೮೬೭ ರಲ್ಲಿ. ಆ ಮೇಲೆ ವರ್ಷ ವರ್ಷವೂ ಪಟ್ಟಣದ ವಿಸ್ತರಣೆ, ಅಭಿವೃದ್ಧಿ ನಡೆದಿದೆ, ನಿಜ; ಆದರಿನ್ನೂ ಬಳ್ಳಾರಿ ಒಂದು ಸರ್ವಾಂಗ ಸುಂದರ ಪಟ್ಟಣವಾಗಬೇಕಾದರೆ ಕಾಲಾವಕಾಶ ಬೇಕು. ವರ್ಷಕ್ಕೆ ೨೦ ರಿಂದ ೪೦ ಇಂಚು ಮಳೆ ಸುರಿವ ಈ ಪ್ರದೇಶ ಬೆಳೆಯುತ್ತಿರುವ ಬಳ್ಳಾರಿ ಎನ್ನಲಾಗುವದಿಲ್ಲ. ಈಗ ಬಳ್ಳಾರಿಗಿಂತ ಹೊಸಪೇಟೆಯ ಕೈಮೇಲಾಗುವುದೋ ಎನಿಸುತ್ತದೆ. ಬಳ್ಳಾರಿಗಿಲ್ಲದ ನೀರಿನ ಅನುಕೂಲತೆ ಉದ್ಯೋಗ ಸೌಕರ್ಯ, ಕಾರ್ಖಾನೆಗಳ ಸ್ಥಾಪನೆಯ ಸಾಧ್ಯತೆ ಹೊಸಪೇಟೆಗೆ ಇದೆ ನಿಜ. ಆದರೂ ಬಳ್ಳಾರಿಯನ್ನು ಅಲಕ್ಷಿಸುವುದರಲ್ಲಿ ಏನು ಅರ್ಥವಿದೆ? ಬಟ್ಟೆ ಗಿರಣಿಗಳಿಗೆ ಅಲ್ಲಿ ಅವಕಾಶ ಮಾಡಿಕೊಡಬಹುದು. ಕೆಮ್ಮಣ್ಣುಗುಂಡಿಯ ಕಬ್ಬಿಣಕ್ಕೆ ಭದ್ರಾವತಿಯಲ್ಲಿ ಕಾರಖಾನೆ ಮಾಡಿದಂತೆ ಸೊಂಡೂರಿನ ಅದುರನ್ನು ಬಳ್ಳಾರಿಯಲ್ಲಿ ಒಂದು ಕಾರಖಾನೆ ಸ್ಥಾಪಿಸಿ ಉಪಯೋಗಿಸಬಹುದು. ಈಗಂತೂ ಈ ಅದುರು ನಿರ್ಯಾತವಾಗುತ್ತಿದೆ, ಕಾರವಾರದ ಮೂಲಕ. ಮೂರನೆಯ ಯೋಜನೆ ಇಲ್ಲವೆ? ಆಗಲಾದರೂ ಬಳ್ಳಾರಿಗೆ ಕಬ್ಬಿಣದ ಕಾರಖಾನೆ ದೊರೆಯಬಾರದೇಕೆ?

ಬಳ್ಳಾರಿ ಮದ್ರಾಸು ರಾಜ್ಯದಲ್ಲಿದ್ದಾಗ ಎಷ್ಟೇ ನಿರ್ಲಕ್ಷ್ಯಕ್ಕೊಳಗಾಗಿತ್ತೆಂದರೂ ಅದಕ್ಕೆ ರಾಜ್ಯದ ಆಡಳಿತದಲ್ಲಿ ಮಹತ್ವದ ಸ್ಥಾನ ದೊರೆತಿತ್ತು ಎನ್ನುವುದನ್ನು ಮರೆಯಲಾಗುವುದಿಲ್ಲ. ೧೯ ಪ್ರಾದೇಶಿಕ ಸರಕಾರೀ ಕಚೇರಿಗಳು ಆಗ ಬಳ್ಳಾರಿಯಲ್ಲಿದ್ದುವು. ಬಳ್ಳಾರಿ ಕನ್ನಡನಾಡಿಗೆ ಸೇರಿದ ಮೇಲೆ ಆಡಳಿತದಲ್ಲಿ ಅದಕ್ಕೆಷ್ಟು ಮಹತ್ವ ದೊರೆತಿದೆಯೆಂದು ಹೇಳಬರುವುದಿಲ್ಲ. ಆದರೆ ಬೆಂಗಳೂರಿನ ಸೆಂಟ್ರಲ್ ಜೇಲನ್ನು ಬಳ್ಳಾರಿಯ ಭದ್ರವಾದ ಸೆಂಟ್ರಲ್ ಜೇಲಿಗೆ ಸ್ಥಳಾಂತರಿಸುವ ವಾರ್ತೆ ಆಗೀಗ ಕೇಳಿಬರುತ್ತಿದೆ ಅಷ್ಟೆ.

ಬಳ್ಳಾರಿಯಲ್ಲೊಂದು ಕಂಟೋನ್ಮೆಂಟು ಇತ್ತು. ಇದೆ; ಅದರಂತೆಯೇ ಒಂದು ಮಿಲಿಟರಿ ವಿಮಾನ ನಿಲ್ದಾಣವೂ ಇದೆ ಅಲ್ಲಿ. ಮೊದಲ ಬಾರಿ ಟಾಟಾ ಕಂಪನಿಯವರು ವಿಮಾನ ಸಾರಿಗೆ ಭಾರತದಲ್ಲಿ ಆರಂಭಿಸಿದಾಗ ಬಳ್ಳಾರಿಗೆ ವಾಣಿಜ್ಯ ವಿಮಾನ ಸಾರಿಗೆಯೂ ದೊರೆತಿತ್ತು. ಅದಕ್ಕಾಗಿ ವಿಮಾನ ನಿಲ್ದಾಣ ಕೂಡ ಇತ್ತು ಅಲ್ಲಿ. ಇವೆಲ್ಲವನ್ನೂ ಕನ್ನಡ ನಾಡಿನಲ್ಲಿ ಮತ್ತೆ ಬಳ್ಳಾರಿ ಮರಳಿ ಪಡೆದರೆ ಅದು ಕನ್ನಡದ ರಾಜಕೀಯದಲ್ಲೂ ದೊಡ್ಡ ಸ್ಥಾನ ಗಳಿಸುವುದರಲ್ಲಿ ಸಂಶಯವಿಲ್ಲ.



## ವಾಕ್-ವೈಖರಿ

ಸೂರ್ಯ ತನ್ನ ಕೊನೆಯ ಚಿನ್ನವನ್ನು ಜಿಪುಣನಂತೆ ಬಚ್ಚಿಡುತ್ತಿದ್ದ.

—ರವೀಂದ್ರ

ಮುಗಳು ತಮ್ಮ ಕನಸಿನಲ್ಲಿ ಮಾತಾಡುತ್ತಿದ್ದವು.

—ಎಲ್. ಎಂ. ಮಾಂಟಗೊಮರಿ

ಮದ್ರಾಸ್ ಹೈಕೋರ್ಟಿಗೆ

ಬಂದ ಒಂದು ವಿಚಿತ್ರ ಪ್ರಕರಣ

# ಇದು ನ್ಯಾಯ!

ಚೆಟ್ಟಿಯಾರ್, ಮುದಲಿಯಾರ್, ಅಯ್ಯರ್, ಮೊದಲಾದವರ ನಾಡಾದ ಮದ್ರಾಸಿನ ಹೈಕೋರ್ಟಿಗೆ ಬಂದ ಪ್ರಕರಣವಿದು— ಇತಿಹಾಸದಲ್ಲಿ ಇಂಥ ಪ್ರಕರಣ ಬೇರೊಂದಿರಲಿಲ್ಲ.

ಒಬ್ಬನು ಸಾಲ ಪಡೆದುಕೊಂಡು ಈ ಕೆಳಗಿನಂತೆ ನೋಟು ಬರೆದು ಕೊಟ್ಟ:

"ನಾನು ಈ ದಿವಸ ಸಾಲವಾಗಿ ಪಡೆದುಕೊಂಡ ರೂ. ೧೦೦೦ವನ್ನು ಶ್ರೀ ಪೊ—ಅವರ ಮಗನಿಗೆ ಕೇಳಿದಾಗ್ಗೆ ಕೊಡುವೆನೆಂದು ಬರೆದು ಕೊಟ್ಟ ಡಿಮಾಂಡ್ ಪ್ರಾಮಿಸರಿ ನೋಟು."

ಇದರ ಕೆಳಗೆ ಯೋಗ್ಯ ಸ್ಟಾಂಪು ಹಚ್ಚಿ ಸರಿಯಾಗಿ ಸಹಿಮಾಡಿ ಕೊಟ್ಟಿದ್ದನಾ ಮಹಾರಾಯ.

ಆದರೆ ಪೊ—ಅವರ ಮಗನು ನೋಟಿನ ಹಣ ಕೇಳಲು ಹೋದಾಗ ಸಾಲಗಾರನು ಕೊಡಲು ನಿರಾಕರಿಸಿದನು. ನೋಟುಧಾರಕನು ನ್ಯಾಯಸ್ಥಾನಕ್ಕೆ ಹೋದ. ಕಟ್ಟಕಡೆಗೆ ಅದು ಮದ್ರಾಸ್ ಹೈಕೋರ್ಟಿಗೆ ಬಂತು.

ಸಾಲಗಾರನ ವಾದ ಹೀಗಿತ್ತು: ನಾನು ಹಣ ತೆಗೆದುಕೊಂಡು ನೋಟು ಬರೆದುಕೊಟ್ಟದ್ದು ನಿಜ. ಆದರೆ ಈ ನೋಟು ಸಿಂಧುವಲ್ಲ. ಆದ್ದರಿಂದ ನಾನು ಹಣ ಕೊಡಲಾರೆ. ಪೊ—ಅವರಿಗೆ ನಾಲ್ವರು ಮಕ್ಕಳಿದ್ದಾರೆ. ಅವರಲ್ಲಿ ಯಾರಿಗೆ ಹಣ ಕೊಡಬೇಕೆಂದು ನೋಟಿನಲ್ಲಿ ಇಲ್ಲ. ಕೇವಲ ಪೊ—ಅವರ ಮಗನಿಗೆ ಕೊಡಬೇಕೆಂದು ಹೇಳಿದೆ."

ವಾದಿಯ ವಾದ ಹೀಗಿತ್ತು: "ಇದೆಲ್ಲ ಬರಿ ಸುಳ್ಳು ನೆವ. ಪೊ—ಅವರ ಯಾವ ಮಗ ಸಾಲ ಕೊಟ್ಟಿದ್ದನೆಂದು ಪ್ರತಿವಾದಿಗೆ ಗೊತ್ತಿದೆ. ಆದ್ದರಿಂದ ಅದನ್ನು ಯಾರಿಗೆ ಸಲ್ಲಿಸಬೇಕೆಂದೂ ಅವನಿಗೆ ಗೊತ್ತಿದೆ. ಆದ್ದರಿಂದ ನಾನೇ ನೋಟಿನ ಬಾಧ್ಯಸ್ಥನೆಂದು ಅವನಿಗೆ ಮೊದಲಿಂದ ಗೊತ್ತಿತ್ತು."

ನ್ಯಾಯಮೂರ್ತಿ ಪಂಚಾಪಕೇಶ ಅಯ್ಯರರು ಈ ಪ್ರಕರಣದಲ್ಲಿತ್ತ ತೀರ್ಪು ಇದು:

"ಇಂಥ ಪ್ರಕರಣ ಇಂದಿನ ವರೆಗೆ ಯಾವ ನ್ಯಾಯಾಲಯಕ್ಕೂ ಬಂದಿಲ್ಲ. ಆದರೆ ನೋಟಿನ ಬಾಧ್ಯಸ್ಥನ ಹೆಸರನ್ನು ಅದರಲ್ಲಿ ಬರೆದಿಲ್ಲವೆಂದಾಕ್ಷಣ ಅದು ಅಸಿಂಧುವೆಂದು ಹೇಳಲು ಸಾಧ್ಯವಿಲ್ಲ. ದಾವೆ ತಂದಿರುವ ಪೊ—ಅವರ ಯಾವ ಮಗನಿಂದ ಸಾಲ ತೆಗೆದುಕೊಂಡಿರುವನೆಂದೂ ಯಾರಿಗೆ ನೋಟು ಬರೆದುಕೊಟ್ಟಿರುವನೆಂದೂ ಪ್ರತಿವಾದಿ ಚೆನ್ನಾಗಿ ಬಲ್ಲ. ಪೋ—ಅವರಿಗೆ ಬೇರೆ ಮೂವರು ಮಕ್ಕಳಿದ್ದಾರೆಂದಾದರೂ ಪ್ರತಿವಾದಿ ಅವರಿಂದ ಸಾಲ ತೆಗೆದುಕೊಂಡಿಲ್ಲಾದ್ದರಿಂದ ಅವರಿಗೆ ಇದರ ಸಂಬಂಧ ಬರುವುದಿಲ್ಲ. ಪೊ— ಅವರ ಈ ಮಗನಿಂದ ಸಾಲ ತೆಗೆದುಕೊಂಡು ನೋಟು ಬರೆದು ಕೊಟ್ಟಿಲ್ಲೆಂದು ಪ್ರತಿವಾದಿ ಹೇಳುವುದಿಲ್ಲ. ಉಳಿದ ಮೂವರು ಮಕ್ಕಳಲ್ಲೊಬ್ಬರಿಂದ ಪಡೆದಿದ್ದೇನೆಂದೂ ಅವನ ಅಂಬೋಣವಿಲ್ಲ. ಅಂದಮೇಲೆ ಈ ನೋಟಿನ ಹಣವನ್ನು ಆತ ಕೊಡಲೇಬೇಕು. ಭಾರತದ ನ್ಯಾಯವು ಕುರುಡಲ್ಲ. ಹಿಂದೂ ಮಹಿಳೆಯು ಗಂಡನ ಹೆಸರು ಹೇಳುವುದಿಲ್ಲೆಂಬುದರಿಂದ ಅವಳಿಗೆ ಅವನು ಯಾರೆಂದು ಗೊತ್ತಿಲ್ಲೆಂದು ವಾದಿಸುವುದೆಷ್ಟು ಯೋಗ್ಯವೋ ಅಷ್ಟೇ ಯೋಗ್ಯವಾಗಿದೆ ಪ್ರತಿವಾದಿ ಹೂಡಿರುವ ನ್ಯಾಯ."

ಹೀಗೆ ಹೆಸರಿಲ್ಲದ ನೋಟಿನ ಮೇಲಿನ ಹಣ ಅದರ ಹಕ್ಕುದಾರನಿಗೆ ಸಿಕ್ಕಿತು.





# ಟಾಲ್‌ಸ್ಟಾಯನ ಹೆಂಡತಿ

ಡೆರೆಕ್ ಲಿಯೂನನ ಟಾಲ್‌ಸ್ಟಾಯ ಚರಿತ್ರಗ್ರಂಥದ ಮುಖ್ಯಾಧಾರದಿಂದ
ಸಂಗ್ರಹಿಸಿದ್ದು

ಸಂಗ್ರಾಹಕರು: ಶ್ರೀನಿವಾಸ ಹಾವನೂರ

# ಹಿನ್ನೆಲೆ

ಜಗದ್ವಿಖ್ಯಾತ ಸಾಹಿತಿಯೂ ಮಹರ್ಷಿಯೂ ಆದ ಟಾಲ್‌ಸ್ಟಾಯನ ಹೆಸರನ್ನು ಯಾರು ಕೇಳಿಲ್ಲ? ಆದರೆ ಅವನ ಹಾಗೂ ಅವನ ಪತ್ನಿ ಸೋಫಿಯಾಳ ಜಗಳವೂ ಅಷ್ಟೇ ಸುಪ್ರಸಿದ್ಧವಾ-ದುದಾಗಿದೆ

ದಾಂಪತ್ಯದಲ್ಲಿ ಸುಖವು ಸಿಗಬೇಕಾದರೆ, ಒಬ್ಬರನ್ನೊಬ್ಬರು ಚೆನ್ನಾಗಿ ಅರಿತುಕೊಳ್ಳಬೇಕಾ ಗುತ್ತದೆ, ಒಬ್ಬರು ಇನ್ನೊಬ್ಬರಿಗಾಗಿ ತ್ಯಾಗ ಮಾಡಬೇಕಾಗುತ್ತದೆ ; ಅದಕ್ಕಾಗಿ ಇಬ್ಬರೂ ಶ್ರಮಿಸ ಬೇಕಾಗುತ್ತದೆ. ಇಷ್ಟಿದ್ದೂ ಅನುರೂಪ ದಾಂಪತ್ಯವಿರಬೇಕಾದರೆ ದೈವಬಲವೂ ಬೇಕಾ-ಗುವದು !

ಅವರಿಬ್ಬರೂ ಮೂಲತಃ ಪ್ರೀತಿಸುತ್ತಿರಲಿಲ್ಲವೆನ್ನಬಹುದೆ? ಪರಿಸ್ಥಿತಿ ಹಾಗಿರಲಿಲ್ಲವೆನ್ನುವು ದಕ್ಕೆ ನೂರಾರು ನಿದರ್ಶನಗಳನ್ನು ಕೊಡಬಹುದು. ಸಾಂಸಾರಿಕ ಅನುಕೂಲತೆಗಳಿರಲಿಲ್ಲವೆನ್ನ ಬಹುದೆ? ಇಲ್ಲ. ೧೬ ಸಾವಿರ ಎಕರೆಯ ಆಸ್ತಿಯು ಅವರ ಉಪಭೋಗಕ್ಕೆ ಇದ್ದಿತು. ಮನೆ ತುಂಬ ಮಕ್ಕಳೂ ಇದ್ದರು. ಇಬ್ಬರೂ ಪರಸ್ಪರ ದಿನಚರಿಯನ್ನು ಬರೆಯುತ್ತಿದ್ದು, ಒಬ್ಬರ-ನ್ನೊಬ್ಬರು ಓದುತ್ತಿದ್ದರೆಂದು ಹೀಗಾಯಿತೆ? ಅವೇ ದಿನಚರಿಗಳಲ್ಲಿ ಪರಸ್ಪರರ ಬಗ್ಗೆ ಅನೇಕ ಆತ್ಮೀಯ ಭಾವನೆಗಳಿರುತ್ತಿದ್ದುವಲ್ಲ.

ಟಾಲಸ್ಟಾಯನಿಗೆ ಕ್ರಿಶ್ಚನ್ ಧರ್ಮದ ಆಗಿನ ಕಾಲದ ಆಚರಣೆಯಲ್ಲಿ ವಿಶ್ವಾಸವಿರಲಿಲ್ಲ. ಸಿರಿ ವಂತಿಕೆಯನ್ನು ತ್ಯಜಿಸಬೇಕು, ಸರಳ ಸಾದಾ ಜೀವನವನ್ನು ನಡೆಸಬೇಕು ; ತನ್ನ ವಿಚಾರಗಳನ್ನು ಇತರರಿಗೆ ಬೋಧಿಸುವುದಕ್ಕೆ ಮುಂಚೆ ತಾನೇ ಅವನ್ನು ಕೃತಿಗಿಳಿಸಬೇಕು-ಎನ್ನುವವನಾಗಿದ್ದನು. ಇದರಲ್ಲಿ ತಪ್ಪೇನಿದೆ? ಆದರೆ ಅನಾದಿ ಕಾಲದಿಂದ ನಡೆದು ಬಂದ ಮತವನ್ನು ಅಲ್ಲಗಳೆದು, ಆಸ್ತಿಯನ್ನೆಲ್ಲ ಬಿಟ್ಟುಕೊಟ್ಟು ಮಕ್ಕಳಿಗೂ ತನಗೂ ಅನ್ನಾನ್ನನಿರ್ಗತಿಕತನ ತಂದುಕೊಂಡು ಹಾಗೆ ಮಾಡುವುದು ಬೇಡವೆಂದು ಅವನ ಪತ್ನಿಗೆ ಅನ್ನಿಸುತ್ತಿದ್ದಿತು. ಅದೂ ಸಹಜವೇ ಅಲ್ಲವೆ?

ಹೀಗೆ ವಿರೋಧ ವಿಚಾರಗಳು ಒಂದಕ್ಕೊಂದು ಕೂಡಿಕೊಂಡು ಬೃಹದಾಕಾರ ತಾಳಿ ದುವು. ಅಖಂಡ ೩೦ ವರ್ಷ ಇಬ್ಬರೂ ನಿತ್ಯನರಕವನ್ನು ಅನುಭವಿಸಿದರು. ಟಾಲ್‌ಸ್ಟಾಯನ ಹೆಂಡತಿ ಆತ್ಮಹತ್ಯೆಗೆ ಪ್ರಯತ್ನಿಸಿದಳು. ಟಾಲ್‌ಸ್ಟಾಯನು ಮನೆಬಿಟ್ಟು ಓಡಿಹೋದನು.

ಇದರಲ್ಲಿ ತಪ್ಪು ಯಾರದು ? ಎಂಬ ಬಗ್ಗೆ ಎಲ್ಲ ಕಡೆಗೂ ತರ್ಕ-ವಿತರ್ಕಗಳು ನಡೆದುವು. ಟಾಲ್‌ಸ್ಟಾಯ ಜೀವಂತವಿರುವಾಗ, ಅವನ ಹೆಂಡತಿಯ ಬಗ್ಗೆ ಸಹಾನುಭೂತಿಯಿದ್ದವರು ಯಾರೂ ಇರಲಿಲ್ಲವೆನ್ನಬಹುದು. ಟಾಲ್‌ಸ್ಟಾಯ್ ತೀರಿಕೊಂಡ ಮೇಲೆ, ಅವನ ಹಾಗೂ ಸೋಫಿಯಾಳ ದಿನಚರಿಗಳು ಪ್ರಕಟವಾದಾಗ, ಟಾಲ್‌ಸ್ಟಾಯನದೂ ತಪ್ಪು ಎಂಬ ಭಾವನೆ ಕ್ರಮೇಣ ಬೆಳೆಯತೊಡಗಿತು.

ಇಬ್ಬರೂ ಅಷ್ಟಷ್ಟು ದೋಷಪೂರಿತರು ಎಂಬ ಸಾಮಾನ್ಯ ಮಾತನ್ನು ಈ ಮಿತಿಗೆ ಹೇಳಬಹು ದಾದರೂ ಇಂಥ ವೈಯಕ್ತಿಕ ವಿಷಯದಲ್ಲಿ ಸಮರ್ಪಕವಾದ ವಿವರಣೆಯನ್ನು ಯಾರೂ ಕೊಡ-ಲಾರರು.

ಹೃದಯಸ್ಪರ್ಶಿಯಾದ ಈ ಅವಿದ್ಧ ಘರ್ಷಣೆಯನ್ನು ಇಲ್ಲಿ ಪರಿಚಯಿಸಬಯಸಿದೆ.

# ಟಾಲ್‌ಸ್ಟಾಯನ ಹೆಂಡತಿ

## ಪ್ರಣಯಾಂಕುರ

ಮಾಸ್ಕೋದಲ್ಲಿ ವಾಸವಾಗಿದ್ದ ಡಾ. ಬೆಹೆರ್ ದಂಪತಿಗಳನ್ನು ಟಾಲಸ್ಟಾಯನು ಚಿಕ್ಕಂದಿನಿಂದಲೂ ಬಲ್ಲನು. ಅವನ ಪೂರ್ವದ ಕಾದಂಬರಿಗಳಲ್ಲಿ ಆ ಮನೆತನದ ಕೆಲವು ಹಿರಿಯ ವ್ಯಕ್ತಿಗಳ ಪಡಿನೆಳಲು ಇದ್ದಿತು. ಹಾಗಾಗಿ ಬೆಹೆರ್ ದಂಪತಿಗಳ ಮೂವರು ಕುಮಾರಿಕೆಯರಿಗೂ ಟಾಲ-ಸ್ಟಾಯನ ವಿಷಯದಲ್ಲಿ ಅಪಾರವಾದ ಗೌರವ ಭಾವನೆ ಇದ್ದಿತು.

ದೇಶವನ್ನು ಬಿಟ್ಟುಹೋಗಿ, ಎಲ್ಲೆಲ್ಲಿಯೊ ತಿರುಗಾಡಿ, ಏನೆಲ್ಲ ಪ್ರಯೋಗಗಳನ್ನು ಕೈಕೊಂಡು, ಬೇಸತ್ತು ಕೊನೆಗೆ ಐದು ವರ್ಷಗಳ ನಂತರ ತಮ್ಮ ಮನೆಗೆ ಬರುತ್ತಿದ್ದ ಟಾಲಸ್ಟಾಯನನ್ನು ಬೆಹೆರ್ ದಂಪತಿಗಳು ಆದರದಿಂದ ಸ್ವಾಗತಿಸಿದರು. ತಮ್ಮ ಮೂವರೂ ಹೆಣ್ಣು ಹುಡಿಗೆಯರೊಡನೆ ಉತ್ಸಾಹದಿಂದ ಕಾಲ ಕಳೆಯುತ್ತಿದ್ದ ಅವನನ್ನು ಕಂಡು, ಈತ ತಮ್ಮ ಅಳಿಯನಾಗುವವನಿದ್ದಾನೆಂದು ಅವರಿಗೆ ಬಲುಬೇಗ ಗೊತ್ತಾಯಿತು.

ಆದರೆ ಟಾಲಸ್ಟಾಯನು ಯಾರನ್ನು ನಿಶ್ಚಯವಾಗಿ ಪ್ರೀತಿಸುತ್ತಿದ್ದಾನೆಂಬುದು ಅವರಿಗೆ ಮೊದಲು ಹೊಳೆಯಲಿಲ್ಲ. ಆಗ ಹಿರಿಯವಳಿಗೆ ೨೧ ವರ್ಷ. ನಡುವಿನವಳಾದ ಸೋಫಿಯಾಳಿಗೆ ೧೮ ತುಂಬಿದ್ದುವು. ಕಡೆಯ ಹುಡುಗಿ ಟ್ಯಾನಿಯಾ ಅವಳಿಗಿಂತ ಎರಡು ವರ್ಷಕ್ಕೆ ಚಿಕ್ಕವಳು. ಟಾಲಸ್ಟಾಯನಿಗೆ ಆಗ ೩೪ ವರುಷ. ಹರೆಯದ ಹುಚ್ಚಿನಲ್ಲಿ ಸ್ವೇಚ್ಛೆಯಿಂದ ಜೀವನವನ್ನು ನಡೆಸಿದ ಟಾಲಸ್ಟಾಯನಿಗೆ, ಅವರನ್ನು ಕಂಡೊಡನೆಯೆ ಮದುವೆಯಾಗುವ ಆಸೆ ತೀವ್ರಗೊಂಡಿತು. ಆ ಹುಡುಗಿಯರೂ ಆಗಾಗ ಟಾಲಸ್ಟಾಯನ ಮನೆಗೆ ಬರುತ್ತಿದ್ದರು. ಅವನ ಒಂಟಿಜೀವನದ ಬೇಸರವನ್ನು ತಮ್ಮ ನಗೆ, ನಲವುಗಳಿಂದ ಪರಿಹರಿಸುವುದಕ್ಕೆ ಕಾರಣರಾದರು.

ಅವರಲ್ಲಿ, ಕೌಮಾರ್ಯ ಹಾಗೂ ಯೌವನದ ಮಧ್ಯದಲ್ಲಿ ತೊನೆಯುತ್ತಿದ್ದ ಸೋಫಿಯಾ ಟಾಲ-ಸ್ಟಾಯನಿಗೆ ಅತ್ಯಂತ ಮೋಹಕಳಾಗಿ ಕಂಡಳು. ಅವನ ಆ ನೋಟಕ್ಕೆ ಒಮ್ಮೆ ಸೋಫಿಯಾ ಕಕ್ಕಾಬಿಕ್ಕಿಯಾದರೂ ಬೇಗ ಚೇತರಿಸಿಕೊಂಡಳು. ಆದರೂ ಒಳಗೊಳಗೆ ಅಂಥವೇ ತನ್ನ ಭಾವನೆಗಳ ಹೋರಾಟದಲ್ಲಿ ನುಗ್ಗುನುರಿಯಾಗುತ್ತಿದ್ದಾಗ, ಟಾಲಸ್ಟಾಯನು ಅವಳನ್ನು ಒಂದು ಮೇಜಿನ ಹತ್ತಿರ ಕರೆದು, ಅಲ್ಲಿ ಇದ್ದ ಒಂದು ತುಂಡು ಕಾಗದದ ಮೇಲೆ, ಸರಸರನೆ ನಾಲ್ಕು ಸಾಲು ಗೀಚಿ, ಅವಳಿಗೆ ಓದಲು ಹೇಳಿದನು:

"ನಿನ್ನ ಯೌವನ, ಹಾಗೂ ನಿನ್ನ ಮುಂದಿನ ಸುಖಜೀವನದಲ್ಲಿ ಭಾಗಿಯಾಗುವುದಕ್ಕೆ ನಾನು ಅಯೋಗ್ಯನೆನ್ನಿಸುತ್ತದೆ."

ಆ ಮಾತನ್ನೋದಿ ಸೋಫಿಯಾ ಮೆಲ್ಲಗೆ ನಕ್ಕಳು. ಅವನೆಡೆಗೆ ಅದೇ ಭಾವದ ನೋಟವನ್ನು ಬೀರಿದಳು. ಟಾಲಸ್ಟಾಯನು ಇನ್ನೊಂದು ವಾಕ್ಯವನ್ನು ಬರೆಯುವದರಲ್ಲಿ ಮಗ್ನನಾಗಿದ್ದನು.

"ನಾನು ನಿನ್ನ ಅಕ್ಕನನ್ನು ಪ್ರೀತಿಸುತ್ತಿದ್ದೇನೆಂದು ನಿನ್ನ ತಂದೆ ತಾಯಿಗಳು ತಿಳಿದಿದ್ದಾರೆ. ಅದನ್ನು ನೀನೇ ಪರಿಹರಿಸಬೇಕು."

ತಾನಿನ್ನು ಏನಾದರೂ ಮಾತನಾಡಬೇಕೆನ್ನುವಷ್ಟರಲ್ಲಿ ಅವಳ ತಾಯಿ, ಕೆಳಗಿನಿಂದ ಮಗಳನ್ನು ಕೂಗಿ ಕರೆದೊಡನೆ, ಸೋಫಿಯಾ ಅಲ್ಲಿ ಮುಂದಿನ ಕ್ಷಣಕ್ಕೆ ನಿಲ್ಲಲಿಲ್ಲ.

ಮದುವೆಗೆ ಮುಂಚೆ ಟಾಲಸ್ಟಾಯನು ತನ್ನ ಪ್ರೇಯಸಿಯ ಮನಸ್ಸನ್ನೂ ವಿಚಾರಗಳನ್ನೂ ತಿಳಿಯುವುದಕ್ಕೆ ಬಹಳ ಆತುರನಾಗಿದ್ದನು ವಯಸ್ಸಿನಿಂದ ಚಿಕ್ಕವಳಾಗಿದ್ದ ಆಕೆಯೂ ದಿಟ್ಟೆಯಾಗಿ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಕೊನೆಗೆ ಟಾಲಸ್ಟಾಯನು ಆಕೆಗೆ "ನೀನು ದಿನಚರಿಯನ್ನು ಬರೆಯುವಿಯೇನು?" ಎಂದು ಪ್ರಶ್ನಿಸಿದನು.

"ಇಲ್ಲ" ಎಂದಳಾಕೆ. ಆದರೆ ಅವನ ಮನಸ್ಸಿನ ಇಂಗಿತವನ್ನು ಅರಿತವಳಾಗಿ, ನುಡಿದಳು:

"ನಾನೊಂದು ಕಾದಂಬರಿಯನ್ನು ಬರೆದಿದ್ದೇನೆ."

ಟಾಲಸ್ಟಾಯನು ಅವಳ ಬಾಲಿಶ ಕಾದಂಬರಿಯ ಹಸ್ತಪ್ರತಿಯನ್ನು ಮನೆಗೆ ತಂದವನೇ ಕುಳಿತ ಮೆಟ್ಟಿಗೆ ಓದಿ ಮುಗಿಸಿದನು. ಆತ್ಮಚರಿತ್ರೆಯಂತೆಯೇ ಇದ್ದ ಆ ಕಥೆಯಲ್ಲಿ ಒರ್ವ ಮುಗ್ಧೆಯು

ಇಬ್ಬರ ಪ್ರೇಮಪಾಶದಲ್ಲಿ ಸಿಕ್ಕು ತೊಳಲಾಡುತ್ತಿದ್ದುದರ ಚಿತ್ರಣವಿದ್ದಿತು. ಆ ಇಬ್ಬರಲ್ಲಿ ತಾನೊಬ್ಬನು ಇರುವೆನೆಂದು ತಿಳಿಯುವುದಕ್ಕೆ ಟಾಲಸ್ಟಾಯನಿಗೆ ತಡ ಹಿಡಿಯಲಿಲ್ಲ.

ಟಾಲಸ್ಟಾಯನೇನೊ ಅತ್ಯಂತ ಗಾಢವಾಗಿ ಅವಳನ್ನು ಪ್ರೀತಿಸಲಾರಂಭಿಸಿದ್ದರೂ ಅವಳು ಎಷ್ಟರ ಮಟ್ಟಿಗೆ ತನ್ನಲ್ಲಿ ಅನುರಕ್ತಳೆಂಬ ವಿಷಯದಲ್ಲಿ ಸಂದೇಹಿಯಾಗಿದ್ದನು. ಮೂರು ನಾಲ್ಕು ತಿಂಗಳುಗಳನ್ನು ಹೀಗೆಯೆ ಒದ್ದಾಡುತ್ತ ಕಳೆದು, ಕೊನೆಗೊಮ್ಮೆ ತನ್ನ ಪ್ರೀತಿಯ ಸೋದರತ್ತೆಗೆ ಕಾಗದ ಬರೆದನು.

**"ಒಲವಿನ ಅತ್ತೆಯೇ, ಅದೆಂದಾದರೂ ನಾನು ಮದುವೆಯಾಗುವೆನೆಂಬ ಆತುರದಲ್ಲಿ ನೀನಿದ್ದೆಯಲ್ಲವೆ? ಅಂಥ ಪತ್ರವನ್ನು ನೀನು ನನ್ನಿಂದ ನಿರೀಕ್ಷಿಸಿದ್ದೆಯಲ್ಲವೆ? ಇಕೋ ಇಂದು ಸೆಪ್ಟೆಂಬರ ೩ನೇ ತಾರೀಖು—ಅದೇ ವಿಷಯವನ್ನೀಗ ನಿನಗೆ ಬರೆಯುತ್ತಿದ್ದೇನೆ. ನಾನು ಸೋಫಿಯಾ ಬೆಹೆರಳನ್ನು ಮದುವೆಯಾಗುವವನಿದ್ದೇನೆ.**

**"ಅವಳು ಏನಿದ್ದಾಳೆ, ಹೇಗಿದ್ದಾಳೆ ಎಂಬುದನ್ನು ಬರೆಯುವುದಕ್ಕೆ ತೊಡಗಿನೆಂದರೆ ಸಾವಿರ ಪುಟಗಳಾದರೂ ಸಾಲಲಿಕ್ಕಿಲ್ಲ. ನೀನು ಹೇಗೂ ಮುಂದೆ ಪ್ರತ್ಯಕ್ಷ ನೋಡಿಯೆ ನೋಡುವಿ. ನೀನೂ ಅವಳನ್ನು ಮೆಚ್ಚಿ ನಮ್ಮಿಬ್ಬರನ್ನು ಆಶೀರ್ವದಿಸುವ ದಿನ, ನನ್ನ ಪಾಲಿಗೆ ಅತ್ಯಂತ ಭಾಗ್ಯದ ದಿನ...''**

ಟಾಲಸ್ಟಾಯ ಅತ್ಯಂತ ತೀವ್ರಗಾಮಿ. ತಲೆಯಲ್ಲಿ ಒಂದು ವಿಚಾರ ಬಂದಿತೆಂದರೆ, ಅದನ್ನು ಆಳವಾಗಿ, ದೀರ್ಘವಾಗಿ ತನ್ನೊಳಗೆ ಇಳಿಸಿಕೊಂಡು, ಅದನ್ನು ಪೂರ್ಣ ಮುಗಿಸಿಬಿಡುವುದು ಅವನ ಸ್ವಭಾವವೇ ಆಗಿದ್ದಿತು. ಒಮ್ಮೆ ನಿಶ್ಚಯಿಸಿದ ಮೇಲೆ, ತಡವೇತಕ್ಕೆ ಎಂದು, ಕೂಡಲೇ ಮದುವೆಯ ಸಮಾರಂಭಕ್ಕೆ ಅವಸರಪಡಿಸತೊಡಗಿದನು.

ಜೊತೆಗೆ, ತನ್ನ ಹೆಂಡತಿಯಾಗುವವಳು ತನ್ನ ಬಾಳಿನ ನಿಜವಾದ ಸಂಗಾತಿಯಾಗಬೇಕು, ತನ್ನಲ್ಲಿ ಸಮರಸವಾಗಿ ಬೆರೆಯಬೇಕು ಎಂಬ ಉತ್ಕಟತೆ ಅವನಲ್ಲಿ ಇದ್ದಿತು. ಮದುವೆಯಾಗಿ ಬಂದ ಮೇಲೆ, ಆಕೆ ತನ್ನ ಬಗ್ಗೆ ತಪ್ಪು ತಿಳಿಯಬಾರದು, ಪರಸ್ಪರರಲ್ಲಿ ಮುಚ್ಚುಮರೆ ಇರಕೂಡದು ಎಂಬ ಭಾವನೆಯಿಂದ ಟಾಲಸ್ಟಾಯನು ತನ್ನ ಎಲ್ಲ ದಿನಚರಿಗಳನ್ನು ಅವಳಿಗೆ ಓದಲು ಕೊಟ್ಟನು.

ರಾತ್ರಿಯಲ್ಲಿ ನಿದ್ರೆಗೆಟ್ಟು ಸೋಫಿಯಾ ಅವನ್ನು ಓದಿದಳು. ಅನನುಭವಿಕಳೂ ಮುಗ್ಧೆಯೂ ಆದ ಆಕೆಗೆ ಅವನ ಜೂಜಾಟದ, ಕುಡುಕತನದ ಹಾಗೂ ಕಾಮುಕ ವೃತ್ತಿಯ ಗತೇತಿಹಾಸವನ್ನು ಓದಿ ದಿಗ್ಭ್ರಮೆಯಾಯಿತು. ಮುಂದೇನು ತನ್ನ ಗತಿ ಎಂದು ಹೌಹಾರಿದಳು. ಮರುದಿನ ಟಾಲಸ್ಟಾಯನು ಬಂದಾಗ, ತನ್ನ ಬಗ್ಗೆ ಅವನಲ್ಲಿರುವ ಪ್ರೇಮಲ ಭಾವನೆಯನ್ನು ಕಂಡು ಅವನನ್ನು ಕ್ಷಮಿಸಿದಳು. ಆದರೆ ಈ ವಿಷಯವನ್ನು ಮರೆಯಲು ಅವಳಿಂದಾಗಲಿಲ್ಲ.

ಟಾಲಸ್ಟಾಯನಿಗೂ ತಾನು ತಪ್ಪಿತಸ್ಥನೆಂಬ ಭಾವನೆ! ಅವಳ ಪ್ರೇಮದ ವಿಷಯದಲ್ಲಿ ಸಂದೇಹ! ಇವತ್ತು ಮದುವೆ ಇದೆ ಎಂಬ ದಿನ, ನಸುಕಿನಲ್ಲಿ ಡಾ. ಬೆಹರರ ಮನೆಗೆ ಓಡಿ, ಸೋಫಿಯಳನ್ನು ಕಂಡು ತನ್ನ ಶಂಕೆಗಳನ್ನೆಲ್ಲ ತೋಡಿಕೊಂಡನು. ಕೊನೆಗೆ ಶ್ರೀಮತಿ ಬೆಹರ ಅವನನ್ನು ಒತ್ತಾಯದಿಂದ ಕಳಿಸಿಕೊಡಬೇಕಾಯಿತು.

ಗೊತ್ತುಮಾಡಿದ ಮದುವೆಯ ಸಮಯಕ್ಕೆ ಟಾಲಸ್ಟಾಯ್ ಬರಲಿಲ್ಲ. ಅವನ ಬಟ್ಟೆ ಬರೆಗಳು ಹೊತ್ತಿಗೆ ಒದಗಿರಲಿಲ್ಲ. ಬೆಳಗಿನ ಹಗರಣವನ್ನು ನೆನಸಿಕೊಂಡ ಸೋಫಿಯಳಿಗೆ ಅವನು ತನ್ನನ್ನು ಕೈಬಿಟ್ಟು ಓಡಿಹೋದನೆಂದೇ ಅನಿಸಿತ್ತು.

## ಒಡನಾಟ

ಹೆಂಡತಿ ಮನೆಗೆ ಬಂದ ಎರಡನೆಯ ದಿನವೇ ಟಾಲಸ್ಟಾಯ್ ತನ್ನ ದಿನಚರಿಯಲ್ಲಿ ಈ ರೀತಿ ಬರೆದನು: "ಇವತ್ತು ನಮ್ಮಲ್ಲಿ ಸ್ವಲ್ಪ ಜಗಳವಾಯಿತು. ಎಲ್ಲರಂತೆಯೇ ನಾವೂ ಇದ್ದೇವಲ್ಲ ಎಂದು ವಿಷಾದವಾಯಿತು. 'ನನ್ನ ಮನಸ್ಸನ್ನು ನೀನು ನೋಯಿಸಿದೆ' ಎಂದು ಅವಳಿಗೆ ಹೇಳಿ

ದಾಗ ಆಕೆ ಅಳತೊಡಗಿದಳು."

ಸೋಫಿಯಾ ದಿನಚರಿಯನ್ನು ಬರೆಯುತ್ತಿರಲಿಲ್ಲ. ಆದರೆ ಮದುವೆಯಾದ ಮೇಲೆ ಅವಳಿಗೂ ದಿನಚರಿಯನ್ನು ಇಡುವ ಅಗತ್ಯ ಕಂಡಿತು. ತನ್ನ ಆಶಯ, ಅಪೇಕ್ಷೆ, ಸಂದೇಹಗಳನ್ನುಹೊರಹಾಕುವುದಕ್ಕೆ ಒಂದು ಸಾಧನ ಬೇಕಾಗಿದ್ದಿತು. ತನಗಿಂತ ೧೬ ವರ್ಷಕ್ಕೆ ಹಿರಿಯನಾದ ಗಂಡನೊಡನೆ ಆಕೆ ಅದೆಂತು ಮನಬಿಚ್ಚಿ ಮಾತನಾಡಬಲ್ಲಳು?

ಅದರಲ್ಲಿಯೂ ಅವನ ಪೂರ್ವಾಶ್ರಮದ ದುಂದುಗಾರಿಕೆಯ, ಅನೈತಿಕ ಜೀವನದ ಕರಿನೆಳಲು ಯಾವಾಗಲೂ ಅವಳ ವಿಚಾರಗಳ ಮೇಲೆ ಪಸರಿಸಿಯೇ ಇರುತ್ತಿತ್ತು. ಒಬ್ಬ ಒಕ್ಕಲಿಗನ ಹೆಣ್ಣಿನ ಮೇಲೆ ಅವನಿಗೆ ಅದೆಷ್ಟೊಂದು ಮೋಹವಿತ್ತೆಂಬುದನ್ನುಅವನ ದಿನಚರಿಯ ಹಲವು ಪುಟಗಳು ಸಾರಿ ಹೇಳುತಿದ್ದವು. ಅದಕ್ಕಾಗಿ ಆಕೆ ಒಂದೆರಡು ಬಾರಿ, ಹಳ್ಳಿಯ ಹೆಂಗುಸಿನಂತೆ ವೇಷ ಹಾಕಿಕೊಂಡು ಆತ ತನ್ನ ಬೆನ್ನುಹತ್ತಿ ಬರುವನೇನೊ ಎಂದು ಪರೀಕ್ಷಿಸುವಷ್ಟು ಆಕೆಯಲ್ಲಿ ಸಂಶಯವೆಂಬುದು ಹೊಗೆಯಾಡುತಿತ್ತು. ನಿಜವಾಗಿಯೆಂದರೆ ಗಂಡನ ಸೌಶೀಲ್ಯವನ್ನು ಪ್ರಶ್ನಿಸುವ ಪ್ರಸಂಗವು ಅವಳಿಗೆ ಮುಂದೆ ಎಂದೂ ಬರಲಿಲ್ಲ. ಈ ವಿಷಯದಲ್ಲಿಯಂತೆ ಆಗಿನ ಇನ್ನೂ ಅನೇಕ ವಿಚಾರಗಳಲ್ಲಿ ಆಕೆಯ ಸಂದೇಹ, ಆಕ್ಷೇಪಣೆಗಳು ಹೆಚ್ಚಾಗಿ ಕಾಲ್ಪನಿಕವೇ ಆಗಿದ್ದುವೆನ್ನಬಹುದು.

ಇದರರ್ಥ ಅವರ ಆರಂಭದ ವೈವಾಹಿಕ ಜೀವನವು ದುಃಖದಾಯಕವಾಗಿತ್ತೆಂಬುದಾಗಿ ಅಲ್ಲ. ಒಬ್ಬರನೊಬ್ಬರು ಗಾಢವಾಗಿ ಪ್ರೀತಿಸುತ್ತಿರುವಾಗ, ದೈಹಿಕಕಾಮನೆಯೂ ಇಬ್ಬರನ್ನೂ ಬಲವಾಗಿ ಕಟ್ಟಿಹಾಕಿದ್ದಾಗ ಅವರ ಜೀವನವು ಒಟ್ಟಿನಲ್ಲಿ ಸುಖಮಯವಾಗಿತ್ತೆಂದೇ ಹೇಳಬೇಕು. ಸೋಫಿಯಾಳ ತವರುಮನೆಯವರಿಗೆ, ತಮ್ಮ ಮಗಳಿಗೆ ಇದಕ್ಕಿಂತ ಹೆಚ್ಚು ಅನುರೂಪನಾದ ಪತಿ, ಸುಖದಾಯಿಯಾದ ಮನೆತನ ದೊರೆಯಬೇಕಿತ್ತೆಂದು ಒಂದು ಕ್ಷಣವೂ ಅನಿಸಲಿಲ್ಲ.

ಸೆಪ್ಟೆಂಬರ್ ತಿಂಗಳಲ್ಲಿ ಮದುವೆಯಾಗಿತ್ತಷ್ಟೆ. ಮರುವರ್ಷದ ಮೇ ತಿಂಗಳಿನ ಒಂದುದಿನ ಟಾಲಸ್ಟಾಯನು ತನ್ನ ಗೆಳೆಯನೊಬ್ಬನಿಗೆ ಈ ರೀತಿ ಕಾಗದ ಬರೆದನು :

**"ನಿನ್ನ ಪತ್ರ ಬಂತು. ನಮ್ಮ-ನಿನ್ನ ಭೆಟ್ಟಿಯು ತಪ್ಪಿದ್ದಕ್ಕೆ ನಮಗೆ ಅದೆಷ್ಟು ಕೆಡುಕೆನಿಸಿದೆಯೆಂಬುದನ್ನು ನೀನೇನು ಬಲ್ಲೆ? ನನ್ನ ಹೆಂಡತಿಯೆಂದರೆ 'ಗೊಂಬೆಯಾಟವಾಡುವ ಮಗು' ವಲ್ಲ ಎಂಬುದನ್ನು ನಿನಗೆ ಮನಗಾಣಿಸಿಕೊಡುತ್ತಿದ್ದೆ. ಆ ರೀತಿಯಲ್ಲಿ ನೀನು ಅವಳ ಅಪಮಾನ ಮಾಡುವುದು ಸರಿಯಲ್ಲ. ನಿಜವಾಗಿಯೂ ಆಕೆ ನನ್ನ ಜೀವನದ ಸಂಗಾತಿಯಾಗಿದ್ದಾಳೆ. ನನ್ನ ಆಸ್ತಿಯ ವಹಿವಾಟನಲ್ಲಿಯೂ ತುಂಬ ಗಮನವನ್ನು ಕೊಡುತ್ತಿದ್ದಾಳೆ. ಸ್ವಲ್ಪ ತಡಿ, ಅವಳ ಉದರದಲ್ಲಿ ಇನ್ನೊಂದು ಜೀವ ಬೆಳೆಯುತ್ತದೆ. ಅದರ ಭಾರವನ್ನು ಭೂಮಿಗಿಳಿಸಿದ ಮೇಲೆ ಇನ್ನೂ ನೋಡುವಿಯಂತೆ. . . . . ."**

ಮುಂದೆ ಒಂದೆರಡು ತಿಂಗಳಲ್ಲಿ ಸೋಫಿಯಾ ಗಂಡುಮಗುವನ್ನು ಹೆತ್ತಳು. ಆಗಿನ ರಶಿಯಾದಲ್ಲಿ ಸಿರಿವಂತರ ಹೆಂಡಂದಿರು ಮಕ್ಕಳಿಗೆ ಮೊಲೆಯೂಡಿಸುವ ಪದ್ಧತಿ ಇರಲಿಲ್ಲ. ಆದರೂ ಟಾಲಸ್ಟಾಯನ ಅಪೇಕ್ಷೆಯ ಮೇರೆಗೆ ಮೊದಲಿನ ನಾಲ್ಕು ಮಕ್ಕಳು ಆಕೆಯ ಹಾಲಿನಿಂದಲೇ ಪೋಷಣೆಯನ್ನು ಹೊಂದಿದುವು. ಸಂಸಾರ ನಿರ್ವಹಣೆ ಹಾಗೂ ಮಕ್ಕಳ ಲಾಲನೆ-ಪಾಲನೆಯ ವಿಷಯದಲ್ಲಿ ಟಾಲಸ್ಟಾಯನು ಆಕೆಯನ್ನು ದೇವತೆಯೆಂದೇ ಭಾವಿಸಿದ್ದನು.

ಮದುವೆಯಾದ ಮರುವರ್ಷವೇ ಟಾಲಸ್ಟಾಯನು ತನ್ನ ಮಹಾನ್ ಕಾದಂಬರಿಯಾದ 'ಯುದ್ಧ ಮತ್ತು ಶಾಂತಿ' ಯ ರಚನೆಗೆ ಕೈಯಿಕ್ಕಿದನು. ಅವನು ವಿಷಯ ಸಂಗ್ರಹಕ್ಕಾಗಿ ಮೇಲಿಂದ ಮೇಲೆ ಮಾಸ್ಕೋ ನಗರಕ್ಕೂ ಇತರ ಸ್ಥಳಗಳಿಗೂ ಹೋಗಬೇಕಾಗುತ್ತಿತ್ತು. ಕಾಗದ ಪತ್ರಗಳನ್ನು ಹರವಿಕೊಂಡು ತಾಸುಗಟ್ಟಲೆ ತನ್ನ ಕೋಣೆಯಲ್ಲಿ ಕುಳಿತನೆಂದರೆ ಹೊತ್ತಿಗೆ ಊಟಕ್ಕೆ ಬರುತ್ತಿರಲಿಲ್ಲ. ಮತ್ತೆ ಅನೇಕ ರೀತಿಯಿಂದ ಆ ದೊಡ್ಡ ಸಂಸಾರದಲ್ಲಿ ಗೃಹಿಣಿಯಾದವಳಿಗೆ ಸಣ್ಣ ಸಣ್ಣ ಜವಾಬುದಾರಿಯ ಕೆಲಸಗಳು ಇದ್ದೇ ಇರುತ್ತಿ-

ದ್ದುವು. ಆಗಾಗ ಅವನ್ನು ಆಕೆ ವ್ಯಕ್ತಪಡಿಸಿದರೂ ಅವಳೂ ಅವನ ಲೇಖನಕಾರ್ಯದಲ್ಲಿ ತನ್ನ ನೆರವನ್ನು ನೀಡಿದಳು. ಟಾಲಸ್ಟಾಯನ ಲಿಪಿಯೆಂದರೆ ಬ್ರಹ್ಮಲಿಪಿ. ಬಹು ಕಷ್ಟಪಟ್ಟು ಆಕೆ ಅದನ್ನು ಅರ್ಥ ಹಚ್ಚುವದರಲ್ಲಿ ಪ್ರವೀಣೆಯಾಗಿದ್ದಳು. ಬರೆದಾದ ಮೇಲೆ ಅವನು ಹೆಂಡತಿಯನ್ನು ಕೂಗಿ ಕರೆದು, ಎದುರು ಕೂಡ್ರಿಸಿಕೊಂಡು ಓದಿ ಹೇಳುತ್ತಿದ್ದನು. 'ಅವರು ಓದುತ್ತಿರುವಾಗ ಈ ದಿನವಂತೂ ನನ್ನ ಕಣ್ಣಲ್ಲಿ ನೀರು ಬಂದುವು. ಈ ಕಾದಂಬರಿ ಖಂಡಿತ ಮೇರುಕೃತಿಯಾಗುವುದು' ಎಂದು ಸೋಫಿಯಾ ಒಂದು ದಿನದ ತನ್ನ ದಿನಚರಿಯಲ್ಲಿ ಬರೆದಿದ್ದಾಳೆ. ಕೆಲವೊಂದು ಸಲ ಈ 'ಮನೋರಮೆ' ಅವನೊಂದಿಗೆ ಚರ್ಚಿಸುತ್ತಿದ್ದಳು. ಕಾದಂಬರಿಯಲ್ಲಿ ಬರುವ ಹೆಲೆನ್ನಳ ನಡತೆಯ ಬಗ್ಗೆ ಟಾಲಸ್ಟಾಯನು ತನ್ನ ಬರವಣಿಗೆಯಲ್ಲಿ ಬಹಳ ಕಟುವಾಗಿದ್ದಾಗ ನಿಗ್ರಹವನ್ನು ಬೋಧಿಸಿದವಳು ಸೋಫಿಯಾ. ತನ್ನ ಗೃಹಕೃತ್ಯಗಳನ್ನು ನಿರ್ವಹಿಸಿಕೊಂಡೂ ಆಕೆ ಇಷ್ಟು ನೆರವಾದುದು ಒಂದು ಮೆಚ್ಚತಕ್ಕ ಸಂಗತಿಯೇ ಆಗಿದ್ದಿತು.

ಟಾಲಸ್ಟಾಯನ ಹೊರಗಿನ ಸಾಮಾಜಿಕ ಕೆಲಸದಲ್ಲಿಯೂ ಸೋಫಿಯಳ ಸಹಾಯ ಇದ್ದೇ ಇರುತ್ತಿತ್ತು. ತನ್ನ ರೈತರ ಮಕ್ಕಳಿಗಾಗಿ ಆದರ್ಶ ಶಿಕ್ಷಣವನ್ನು ಕೊಡಿಸುವ ವಿಷಯದಲ್ಲಿ ಟಾಲಸ್ಟಾಯನು ಈ ಮಧ್ಯೆ ಬಹಳಷ್ಟು ಶ್ರಮಿಸಿದನು. ಆ ಪ್ರಯೋಗ ಮಾಡಿದ ಮೇಲೆ ರಶಿಯದ ಬಾಲಕರಿಗಾಗಿ ಅಕ್ಷರಾಭ್ಯಾಸದ ಪುಸ್ತಕವನ್ನು ಬರೆದನು.

ಮನೆಯ ಮಕ್ಕಳ ವಿಷಯದಲ್ಲಂತೂ ಕೇಳುವುದೇ ಬೇಡ. ಸ್ವತಃ ಸೋಫಿಯಳು ಶಿಕ್ಷಿಕೆಯಾಗುವ ಮಟ್ಟಿಗಿನ ಪರೀಕ್ಷೆಯನ್ನು ಪಾಸಾಗಿದ್ದಳು. ಮಕ್ಕಳಿಗೆ ಆಕೆ ಸಂಗೀತ ಮತ್ತು ಇತರ ಕುಶಲ ಕಲೆಗಳನ್ನು ಕಲಿಸುತ್ತಿದ್ದಳು. ಇದರ ಜೊತೆಗೆ ಮಕ್ಕಳನ್ನು ನೋಡಿಕೊಳ್ಳುವುದಕ್ಕೆ ಇಂಗ್ಲೀಷ್ ಮತ್ತಿತರ ದೇಶಗಳ ಗೃಹಶಿಕ್ಷಿಕೆ (ಗವ್ಹರ್ನೆಸ್) ಯರಿದ್ದರು. ಟಾಲಸ್ಟಾಯನು ಸ್ವತಃ ಮಕ್ಕಳ ಶಿಕ್ಷಣದಲ್ಲಿ ಅಪರಿಮಿತ ಆಸ್ಥೆಯನ್ನು ವಹಿಸುತ್ತಿದ್ದನು. ಟಾಲಸ್ಟಾಯನ ಜಹಗೀರಿನ ಮನೆಯಾದ 'ಯಾಸ್ನಯಾ ಪೊಲ್ಯಾನಾ' ಸಕಲ ಐಶ್ವರ್ಯ, ಸುಖ-ಶಾಂತಿಗಳಿಂದ ತುಂಬಿ ನಲಿಯುತ್ತಿದ್ದಿತು. ಅದನ್ನು ಆಗಾಗ ಪ್ರತ್ಯಕ್ಷ ಕಾಣುತ್ತಿದ್ದ ಸೋಫಿಯಾಳ ತಮ್ಮ ಸ್ಟೀಫನ್ನನು ಈ ರೀತಿಯಾಗಿ ಬರೆದಿದ್ದಾನೆ:

"ಈ ಮನೆಯಲ್ಲಿ ಕಂಡುಬರುವ ಸಂತೃಪ್ತ ಜೀವನವನ್ನು ವರ್ಣಿಸುವುದಕ್ಕೆ ನನಗೆ ಶಕ್ತಿಸಾಲದು. ಇದಕ್ಕೆಲ್ಲ ಲಿಯೊ ಟಾಲಸ್ಟಾಯನೇ ಸ್ಫೂರ್ತಿಯ ಸೆಲೆಯಾಗಿದ್ದನು. ಅವನ ಮಾತು, ಅವನ ವಿನೋದ, ಅವನ ವ್ಯಕ್ತಿತ್ವಕ್ಕೆ ಎಲ್ಲರೂ ಆಕರ್ಷಿತರಾಗಿರುತ್ತಿದ್ದರು.

"ಅವನು ವ್ಯಾಯಾಮ ಆಟಗಳಿಗೆ ನನ್ನನ್ನು ಕರೆಯುತ್ತಿದ್ದನು. ಒಂದೇ ಕೈಯಿಂದ ೧೮೦ ಪೌಂಡಿನಷ್ಟು ಭಾರವನ್ನು ಎತ್ತಬಲ್ಲವನಾಗಿದ್ದ. ನನ್ನ ಭಾವನೊಡನೆ ದೈಹಿಕ ಬಲದಲ್ಲಿ ನಾನು ಸ್ಪರ್ಧಿಸುವುದು ಸಾಧ್ಯವೇ ಇರಲಿಲ್ಲ. ಹೊಲಗಳ ಬದಿಯಲ್ಲಿ ಅಕಸ್ಮಾತ್ ಹಾದು ಹೋಗುತ್ತಿರುವಾಗ ಟಾಲಸ್ಟಾಯನು ಆಳುಗಳನ್ನು ಬಿಡಿಸಿ ತಾನೇ ರಂಟೆ ಹೊಡೆಯುವುದಕ್ಕೆ ಆರಂಭಿಸುತ್ತಿದ್ದನು. ನನ್ನನ್ನೂ ಕರೆಯುತ್ತಿದ್ದನು....."

ಮೇಲಿನ ಮಾತುಗಳನ್ನು ಬರೆದ ಸ್ಟೀಫನ್ ಬೆಹೆರನು, ನಾನು ಯಾಸ್ನಯಾ ಪೊಲ್ಯಾನಾದಲ್ಲಿ, ಟಾಲಸ್ಟಾಯನ ಮಗನಾಗಿ ಹುಟ್ಟಲಿಲ್ಲವಲ್ಲ ಎಂದು ಹಲವು ಬಾರಿ ಮಿಡುಕಿದ್ದಾನೆ!

## ಭಿನ್ನಾಭಿಪ್ರಾಯ

ಗಂಡಹೆಂಡಿರಲ್ಲಿಯ ಮೊದಲನೆಯ ದೊಡ್ಡ ಭಿನ್ನಾಭಿಪ್ರಾಯವು ಧರ್ಮದ ವಿಷಯದಲ್ಲಿ ಹೊರಟಿತು. ಕ್ರೈಸ್ತ ಧರ್ಮದ ಬೋಧನೆಗೂ ಆಚರಣೆಗೂ ಇರುವ ಅಪರಿಮಿತ ಅಂತರವನ್ನು ಕಂಡುಕೊಂಡ ಟಾಲಸ್ಟಾಯನು ಅದರ ಕೂಲಂಕಷ ಅಭ್ಯಾಸಕ್ಕೆ ತೊಡಗಿದನು. ಬೇರೆ ಬೇರೆ ಧರ್ಮಗಳ ತತ್ವಗಳನ್ನೂ ಅದಕ್ಕಾಗಿ ಹಿಬ್ರೂ ಮೊದಲಾದ ಪುರಾತನ ಭಾಷೆಗಳನ್ನೂ ಅಭ್ಯಸಿಸಿದನು. ಸೋಫಿಯಾಳು ೧೮೭೮ರ ಒಂದು ದಿನದ ದಿನಚರಿಯಲ್ಲಿ ಈ ರೀತಿ ಬರೆದಿದ್ದಾಳೆ:

“ಹಗಲೂ ರಾತ್ರಿ ಲಿಯೊವಾ (ಲಿಯೊ) ಧರ್ಮದ ವಿಷಯದ ಯಾವುದೊಂದು ಅಭ್ಯಾಸದಲ್ಲಿ ತೊಡಗಿರುತ್ತಾರೆ. ಅವರ ಸಂಭಾಷಣೆಗಳಲ್ಲಿ ಕೂಡಾ ಅದೇ ತುಂಬಿರುತ್ತದೆ. ಎರಡು ವರ್ಷಗಳಿಂದ ಈ ಕೆಲಸ ಮುಂದುವರಿದಿದೆ. ಬಹುಶಃ ಈ ಬಗ್ಗೆ ಬೇಗ ಒರವಣಿಗೆಯನ್ನು ಕೈಕೊಳ್ಳಬಹುದು. ಈ ವಿಷಯ ತಮ್ಮ ಅಂತರಾತ್ಮಕ್ಕೆ ತೃಪ್ತಿಯನ್ನು ಕೊಟ್ಟಿದೆ ಎನ್ನುತ್ತಾರೆ. ಆದರೆ, ಇದರಿಂದಾಗಿ ಬಹಳ ಸೊರಗಿ ಹೋಗಿದ್ದಾರೆ. ತಲೆಗೂದಲು ಬೆಳ್ಳಗಾಗುತ್ತ ನಡೆದಿದೆ.”

[illegible]ಯ ವರೆಗೆ ಈ ಧರ್ಮಜಿಜ್ಞಾಸೆಯು ಒಂದು [illegible]ಯು ಸಾಹಿತ್ಯ ಕೃತಿ ರಚನೆಗೆ ಕಾರಣವಾಗುವದೆಂದು ತಿಳಿದಿದ್ದಳೊ ಅಲ್ಲಿಯ ವರೆಗೆ ಆಕೆ ಈ ಮತಪರಿವರ್ತನೆಯನ್ನು ಸಹಾನುಭೂತಿಯಿಂದಲೇ ಕಂಡಳು. ಅವನ ವಿಚಾರಗಳೆಲ್ಲ ಆಕೆಗೆ ಒಟ್ಟಿನಲ್ಲಿ ಸರಿಬಂದಿರಲಿಲ್ಲ. ಆದರೂ ಅವನ ದಾರಿಯಲ್ಲಿ ವಿಘ್ನವನ್ನುಂಟುಮಾಡಿರಲಿಲ್ಲ. ತನ್ನ ಸ್ವಂತಕ್ಕೆ ಅವನು ಈ ಹೊಸ ಧರ್ಮವನ್ನು ಆಚರಣೆಯಲ್ಲಿ ತಂದುಕೊಂಡಾಗಲೂ ಆಕೆ ಸುಮ್ಮನಿದ್ದಳೆಂದೇ ಹೇಳಬೇಕು. ಯಾವಾಗ ಟಾಲಸ್ಟಾಯನ ಧಾರ್ಮಿಕ ಕ್ರಾಂತಿಯು ತನಗೂ ತನ್ನ ಮಕ್ಕಳಿಗೂ ತನ್ನ ಕುಟುಂಬಕ್ಕೂ ಕೈಚಾಚತೊಡಗಿತೋ ಆಗ ಆಕೆ ಸಿಡಿದೆದ್ದಳು.



ಟಾಲಸ್ಟಾಯ: ೮೦ ರ ನೆರೆಯಲ್ಲಿ

ಈ ವೇಳೆಗೆ ಟಾಲಸ್ಟಾಯನ ಮಕ್ಕಳು ದೊಡ್ಡ

ವರಾಗುತ್ತ ನಡೆದಿದ್ದರು. ಹಿರಿಯ ಮಗನಿಗೆ ೧೮ ವರ್ಷ ಸಮೀಪಿಸುತ್ತಿದ್ದಿತು. ಹಾಗಾಗಿ ಅವರಿಗೆ ಯೋಗ್ಯ ಶಿಕ್ಷಣವನ್ನು ಕೊಡಿಸುವುದಕ್ಕೆಂದು ಮಾಸ್ಕೋದಲ್ಲಿ ಬೇರೊಂದು ಮನೆಯನು ಮಾಡಲಾಯಿತು (೧೮೮೧). ಈ ವಿಷಯದಲ್ಲಿ ಟಾಲಸ್ಟಾಯನ ವಿರೋಧವನ್ನು ಆಕೆ ಗಣಿಸಲಿಲ್ಲ. ಮಕ್ಕಳಿಗೆ ಶಾಲೆಯ ಶಿಕ್ಷಣ ಬೇಡ, ಸಾಮಾನ್ಯ ಜ್ಞಾನ ಇರಲಿ, ಮಕ್ಕಳು ತಾವಾಗಿಯೇ ಶಾಲಾ ಶಿಕ್ಷಣದ ಆಸಕ್ತಿ ತೋರಿಸಿದರೆ ಅವು ಕಲಿಯಲಿ ಎಂಬುದು ಅವನ ವೈಯಕ್ತಿಕ ಅಭಿಪ್ರಾಯವಾಗಿದ್ದಿತು. ಮೊದಲಿಂದ ನಡೆದುಕೊಂಡು ಬಂದ ಮಾರ್ಗವನ್ನು ಬಿಟ್ಟುಕೊಟ್ಟು ಮಕ್ಕಳನ್ನು ಸ್ವೇಚ್ಛೆಯಾಗಿ ಬಿಡುವುದೇ ? ಎಂಬುದಾಗಿ ಸೋಫಿಯಳಿಗೆ ಅನಿಸಿತು. ಮಕ್ಕಳು ತಂದೆ-ತಾಯಿಗಳ ಭಿನ್ನಾಭಿಪ್ರಾಯವನ್ನು ಅರಿತವರಾಗಿದ್ದರು. 'ತಂದೆ ಶಾಲೆಬೇಡವೆನ್ನುತ್ತಿದ್ದಾನೆ. ಯಾತಕ್ಕೆ ಕಲಿಯಬೇಕು?' ಎಂಬುದಾಗಿ ತಮಗೆ ಒಗ್ಗುವಂತಹ ಮಾತನ್ನೆ ಗಟ್ಟಿ ಹಿಡಿದುಕೊಂಡು ಕುಳಿತವು.

ಇನ್ನೊಂದು ದೃಷ್ಟಿಯಲ್ಲಿ ಟಾಲಸ್ಟಾಯನಿಗೆ ಮಾಸ್ಕೊ ವಾಸವು ಒಳ್ಳೆಯದನ್ನೆ ಮಾಡಿತು. ಹಳ್ಳಿಗಳಿಗಿಂತ ನಗರಗಳಲ್ಲಿಯೇ ದಾರಿದ್ರ್ಯದ ದಾರುಣ ಸ್ಥಿತಿಯು ಹೆಚ್ಚಾಗಿ ಕಂಡುಬರುತ್ತದೆ. ಎಲ್ಲೆಲ್ಲಿಯೂ ಬಡತನದ ಕಷ್ಟನಷ್ಟಗಳನ್ನು ಕಣ್ಣಾರೆ ಕಂಡು ಟಾಲಸ್ಟಾಯನಿಗೆ ಆಘಾತವಾಯಿತು. ತನ್ನ ಸುಂದರ, ಭವ್ಯ ಮನೆಯಲ್ಲಿ, ಮನಮೆಚ್ಚಿದ ಕೌಟುಂಬಿಕ ವಾತಾವರಣದಲ್ಲಿ ಸುಖವಾಗಿ ಬೆಳೆದ ಅವನಿಗೆ ಇದುವರೆಗೆ ಜನತೆಯ ನರಕದ ಬಾಳಿನ ಪರಿಚಯ ಇರಲಿಲ್ಲ.

"ಹಸಿವಿನ ಹಾಹಾಕಾರವನ್ನೂ ಉಚ್ಚ ಕುಲದವರು ಸಾಮಾನ್ಯ ಜನತೆಯ ಶೋಷಣೆ ಮಾಡುವುದನ್ನೂ ಕಂಡಮೇಲೆ, ನನ್ನ ಸಮಗ್ರ ಚೇತನವೇ ಎಚ್ಚತ್ತಿತು. ಹೆಚ್ಚೆಚ್ಚು ತಿಂದು ಬೆಚ್ಚಗೆ ಮಲಗಿರುತ್ತ ನಮ್ಮಂಥವರು ಹೆಜ್ಜೆಹೆಜ್ಜೆಗೆ ತಪ್ಪು ಮಾಡುತ್ತಿದ್ದೇವೆ, ನಾವು ಮಹಾಪರಾಧಿಗಳು" ಎಂಬುದಾಗಿ ಟಾಲಸ್ಟಾಯನು 'ನಾವು ಮುಂದೇನು ಮಾಡಬೇಕು ?' ಎಂಬ ತನ್ನ ಪುಸ್ತಕದಲ್ಲಿ ಬರೆದಿದ್ದಾನೆ.

ತನ್ನ ಮನದಳಲನ್ನೂ ದಲಿತರ ಗೋಳನ್ನೂ ಆಗಾಗ ಹೆಂಡತಿಯೆದುರು ಹೇಳುತ್ತಿದ್ದನು. "ಅಯ್ಯೋ ಜನ ಬದುಕುವ ರೀತಿ ಇದಲ್ಲ! ಇದಲ್ಲ!" ಎಂದು ಆರ್ತನಾದದಿಂದ ಅವನು ಆಗಾಗ ಕೂಗಿಕೊಳ್ಳುತ್ತಿದ್ದನು. "ನೀವನ್ನುವುದು ನಿಜ. ಸಾವಿರಾರು ವರ್ಷಗಳಿಂದ ನಡೆದುಕೊಂಡು ಬಂದದ್ದನ್ನು ನೀವು ಹೇಗೆ ನಿಲ್ಲಿಸಬಲ್ಲಿರಿ? ನಿಮ್ಮ ಕೈಲಾದಷ್ಟು ನೀವು ಅವಶ್ಯ ನೆರವಾಗಿರಿ ಲಕ್ಷಾವಧಿ ಜನರ ಕಷ್ಟವನ್ನು ಪರಿಹರಿಸುವುದಕ್ಕೆ ನಿಮ್ಮ ಒಂದು ಆಯುಷ್ಯ ಸಾಲದು ; ನಿಮ್ಮ ಆಸ್ತಿಯ ನೂರು ಪಟ್ಟು ಆಸ್ತಿಯಿದ್ದರೂ ಸಾಲದು." ಇದು ಅವಳ ವಿಚಾರಸರಣಿಯಾಗಿದ್ದಿತು.

ಟಾಲಸ್ಟಾಯನು ಇದಕ್ಕೆ ಒಪ್ಪುತ್ತಿದ್ದ. ತಾನು ಎಲ್ಲವನ್ನೂ ಬಡವರಿಗೆ ಹಂಚಿಕೊಡುವುದೆಂದರೆ ತನ್ನ ಸಂಸಾರದ ಜನರಿಗೆ ಕಷ್ಟವನ್ನು ಹಂಚಿದಂತಾಗುವುದು ಎಂಬುದನ್ನು ಅವನು ತಿಳಿದಿದ್ದನು. ಅಂತೆಯೇ ಆರಂಭಕ್ಕೆ ಸುಮ್ಮನಿದ್ದನು. ಆದರೆ ಈ ವಿಷಯದಲ್ಲಿ ತನ್ನ ಹಾಗೂ ತನ್ನಂಥ ಸಿರಿವಂತರ, ಉಚ್ಚವರ್ಣೀಯರ ತಪ್ಪು ಇದೆಯೆಂದ ಮೇಲೆ, ತಿಳಿದೂ ತಿಳಿದೂ ಅದೇ ಪಾಪವನ್ನು ನಿತ್ಯವೂ ಮಾಡುತ್ತ ಹೋಗಬೇಕೆ ? ಎಂಬ ತೊಳಲಾಟದಲ್ಲಿ ಅವನು ಒಂದೇ ಸವನೆ ಒದ್ದಾಡಿದನು. ತಾನು, ತನ್ನದು ಎಂಬ ಮೋಹವೇ ಇಂಥ ತಿಳಿವಳಿಕೆಗೆ, ಆಚರಣೆಗೆ ಅಡ್ಡಿ ಬರುವಂತಹದು ಆಸ್ತಿಯನ್ನೆಲ್ಲ ಬಿಟ್ಟುಕೊಟ್ಟು, ಸರಳ ಜೀವನವನ್ನು ನಡೆಸೋಣ ಎಂದು ಸೋಫಿಯಳಿಗೆ ಅವನು ಸೂಚಿಸಿದಾಗ ಅವಳು ಹೌಹಾರಿದಳು. ಭಯದಿಂದ ತತ್ತರಿಸಿದಳು. ಅವನಷ್ಟೇ ಆಕೆ ಗಟ್ಟಿಮನದವಳಿದ್ದಳು. "ಇಲ್ಲ, ಇಲ್ಲ. ಇದನ್ನು ಹೀಗೆಯೆ ಬಿಟ್ಟರೆ ಸರ್ವನಾಶವಾದೀತು. ಇದನ್ನು ಪ್ರತಿಭಟಿಸಲೇಬೇಕು" ಎಂದು ನಿರ್ಧರಿಸಿಕೊಂಡಳು.

ಅವಳ ವಿರೋಧ ಹೆಚ್ಚಾದಂತೆ, ಮಾನಸಿಕ ಹೋರಾಟದಲ್ಲಿ ಸಿಕ್ಕು ಟಾಲಸ್ಟಾಯನು ನುಚ್ಚುನುರಿಯಾದನು. ದಿನದಿನವೂ ಮಾತಿನ ಚಕಮಕಿ,

ನಡವಳಿಕೆಯಲ್ಲಿಯು ವಿರೋಧ ಹೆಚ್ಚತೊಡಗಿ, ಮನಶ್ಶಾಂತಿಯು ಅವರಿಗೆ ಒಣ ಹಂಬಲವಾಗಿ ಉಳಿಯಿತು.

ಕೊನೆಗ ತಾವಿಬ್ಬರೂ ತುಸು ಅಂತರದಲ್ಲಿ ಇದ್ದರೆಯೆ ಒಂದಷ್ಟು ನೆಮ್ಮದಿಯಿಂದ ಇರಬಲ್ಲೆವು ಎಂಬ ನಿರ್ಣಯಕ್ಕೆ ಅವರು ಬಂದು ತಲುಪಿದರು.

ಇತ್ತ ಟಾಲಸ್ಟಾಯನು ತನ್ನ ಆತ್ಮ ಪರಿಶುದ್ಧಿಯಲ್ಲಿ, ಜಗದ ಚಿಂತನೆಯಲ್ಲಿ ನಿಮಗ್ನನಾಗಿರುವಾಗ, ಅತ್ತ ಸೋಫಿಯಳಿಗೆ ತನ್ನ ಸ್ವಂತದ ಜಗತ್ತಿನ ಅನೇಕ ಕೋಟಲೆಗಳು ಇದ್ದುವು. ತಮ್ಮ ಮಕ್ಕಳಲ್ಲದೆ, ಇತರ ಸಂಬಂಧಿಕರಿಂದ, ಅವರ ಮಕ್ಕಳಿಂದ ಮನೆ ತುಂಬಿರುತ್ತಿತ್ತು. ಮೇಲಾಗಿ, ಎರಡು ಕಡೆಯ ಸಂಸಾರ. ಆಸ್ತಿಯ ವಹಿವಾಟನ್ನೂ ಆಕೆಯೆ ನೋಡಿಕೊಳ್ಳಬೇಕು. ನಿತ್ಯವೂ ಮರೆಯದಲೆ ದಿನಚರಿಯನ್ನು ಬರೆಯಬೇಕು. ದಿನಚರಿಗಳು ಟಾಲಸ್ಟಾಯನ ಭಾವೀ ಚರಿತ್ರಕಾರರಿಗೆ ಅತ್ಯಗತ್ಯವೆಂಬುದನ್ನು ಆಕೆ ಮನಗಂಡಿದ್ದಳು. ಇದೆಲ್ಲವನ್ನು ತೂಗಿಸಿಕೊಂಡು ಹೋಗುವುದು ಅವಳಂಥ ಕರ್ತೃತ್ವಶಾಲಿನಿಗೇ ಸಾಧ್ಯವಿತ್ತು.

ಜೊತೆಗೆ ಆಕೆ ಟಾಲಸ್ಟಾಯನ ಸಮಗ್ರ ವಾಙ್ಮಯವನ್ನು ಸಂಪುಟಸಂಪುಟವಾಗಿ ಕೊಡುವ ಕೆಲಸವನ್ನು ಕೈಕೊಂಡಿದ್ದಳು. ಇನ್ನೊಬ್ಬ ರಶಿಯನ್ ಮಹಾಸಾಹಿತಿ ಡೊಸ್ಟೊವಸ್ಕಿಯ ಹೆಂಡತಿಯೂ ಇದೇ ರೀತಿ ಮಾಡಿದ್ದಳಲ್ಲವೆ? ಒಂದು ಕಾಲಕ್ಕೆ ಅಪಾರ ಆಸ್ತಿಯಿಂದ ಹೇರಳ ಹಣ ಬರುತ್ತಿತ್ತು. ಈಗ ಟಾಲಸ್ಟಾಯನ ಅಲಕ್ಷ್ಯದಿಂದ ಕೈಯಲ್ಲಿ ರೋಖು ಹಣ ಇರುತ್ತಿರಲಿಲ್ಲ. ಹಾಗಾಗಿ ಈ ಗ್ರಂಥ ಪ್ರಕಾಶನ ಕಾರ್ಯದಲ್ಲಿ ಆಕೆ ತನ್ನ ತಾಯಿಯಿಂದಲೂ ಮತ್ತೊಬ್ಬ ಸಂಬಂಧಿಕರಿಂದಲೂ ಸಾಲವನ್ನು ಪಡೆದಳು.

ಕುಟುಂಬ ಪೋಷಣೆಯ ಕಡೆಗೆ ತಾನು ಹೆಚ್ಚು ಗಮನ ಕೊಟ್ಟಷ್ಟೂ ತನ್ನ ಗಂಡನು ಮತ್ತೂ ದೂರ ಸರಿಯುತ್ತಿದ್ದಾನೆ ಎಂಬುದು ಅವಳಿಗೆ ಖಚಿತವಾಗತೊಡಗಿತು. "ಬೇನೆ ಬಿದ್ದರೂ ಮಕ್ಕಳ ಕಾಳಜಿಯನ್ನು ನೀವು ಮಾಡುವವರಲ್ಲ. ಓಡಿಹೋಗುವುದೊಂದೇ ನಿಮಗಿರುವ ಕಾಳಜಿ. ಈ ಸಂಸಾರ ನನ್ನೊಬ್ಬಳದೇನಲ್ಲವಷ್ಟೆ. ನಿಮ್ಮ ಪ್ರೇಮದಿಂದ ವಂಚಿತಳಾಗಿ ನಾನು ಬದುಕಿ ಮಾಡುವುದಾದರೂ ಏನು?" ಎಂದು ಗಂಡನೊಡನೆ ಒಮ್ಮೆ ಜಗಳಾಡಿದ ಮೇಲೆ, ಮೊದಲ ಸಲ ಆತ್ಮಹತ್ಯೆಗೆ ಅಣಿಯಾದಳು. ತಣ್ಣೀರಿನಲ್ಲಿ ಮುಳುಗಿ, ಥಂಡಿಯಿಂದ ಸಾವನ್ನು ಬರಮಾಡಿಕೊಳ್ಳುವೆನೆಂದಳು. ಆದರೆ ಸಾವು ಒಲ್ಲೆನೆಂದಿತು. ತನ್ನ ಕೈಗೂಸಿನ, ಹಾಗೂ ಗಂಡನ ನೆನಪಾಗಿ ಮನೆಗೆ ಬಂದುಬಿಟ್ಟಳು. ಬಂದ ವೇಳೆ ಮತ್ತೆ ಒಪ್ಪಂದವಾಯಿತು. ಇಬ್ಬರೂ ಒಬ್ಬರಿನ್ನೊಬ್ಬರ ಮನಸ್ಸನ್ನು ಆದಷ್ಟು ನೋಯಿಸಬಾರದೆಂದು ನಿರ್ಧರಿಸಿದರು. ಅದಕ್ಕೆ ಸಾಕ್ಷಿಯೆಂಬಂತೆ ಮನದಣಿಯೆ ಅತ್ತರು.

ಇದಾಗಿ ೨ ವರ್ಷಗಳ ನಂತರ (೧೮೮೮ ರಲ್ಲಿ) ಮತ್ತೊಂದು ದುರ್ಘಟನೆ ಸಂಭವಿಸಿತು: ಈಗ ಇದ್ದದ್ದೇ ಅವಘಡವಾಗಿರುವಾಗ ಆಕೆ ಮತ್ತೊಮ್ಮೆ ಗರ್ಭವತಿಯಾಗುವುದೆ? ಯಾರಿಗಾಗಿ, ಯಾತಕ್ಕಾಗಿ ಸಂತಾನವಿರಬೇಕು? ಮದುವೆಯಾದ ಮೊದಲಿನ ಹನ್ನೊಂದು ವರ್ಷಗಳಲ್ಲಿ ಎಂಟು ಮಕ್ಕಳನ್ನು ನಿರಾತಂಕವಾಗಿ ನೀಡಿದ ಆಕೆಗೆ ಈ ಬೇಡದ ಮಗು—ಕೊನೆಯದು—ತನ್ನ ಪಾಲಿಗೆ ಒಂದು ದೊಡ್ಡ ಕುತ್ತು ಎಂದು ಕಂಡಿತು.

ಆಗಿನ ಅವಳ ಎಗರಾಟದಿಂದ ಟಾಲಸ್ಟಾಯನು 'ನರಕವೆಂದರೆ ಇದೆ' ಎಂದು ದಿನಚರಿಯಲ್ಲಿ ಬರೆಯುವಂತಾಯಿತು. ಆಕೆ ಗರ್ಭಪಾತ ಮಾಡಿಕೊಳ್ಳಲು ಯತ್ನಿಸಿದಳು. ಸೂಲಗಿತ್ತಿಯು ಧೈರ್ಯ ತಂದುಕೊಂಡು ಒಡತಿಯ ಆಜ್ಞೆಯನ್ನು ನಿರಾಕರಿಸಿದರೂ ಸೋಫಿಯಾ ತನ್ನ ನಿರ್ಧಾರದಿಂದ ಹಿಂದೆಗೆಯ ಲಿಚ್ಛಿಸದೆ, ಅನೇಕ ರೀತಿಯಿಂದ ತನ್ನ ದೇಹವನ್ನು ದಂಡಿಸಲು ಪ್ರಯತ್ನಪಟ್ಟಳು. ಪ್ರಯೋಜನವಾಗಲಿಲ್ಲ. ಒಳಗಿನ ಶಿಶುವು ನಿರಾತಂಕವಾಗಿ ಬೆಳೆಯಿತು. ಅವಳೇ ಕೊನೆಯ ಮಗು ಅಲೆಕ್ಸಾಂಡ್ರಿಯಾ. ದೊಡ್ಡವಳಾದ ಮೇಲೆ, ಆಕೆ ತನ್ನ ತಾಯಿಯ ಮೇಲಿನ ಸೇಡು ತೀರಿಸಿಕೊಳ್ಳಲೊ ಎಂಬಂತೆ, ತಂದೆಯನ್ನೇ ಹೆಚ್ಚು ಹಚ್ಚಿಕೊಂಡಿದ್ದಳು.

## ಸರಳ ಸಾದಾ ಜೀವನ

ಹೆಂಡತಿಯ ವಿಚಾರಗಳು ತನ್ನವಕ್ಕೆ ತೀರ ಭಿನ್ನವಾಗಿವೆಯೆಂದು ಟಾಲಸ್ಟಾಯನು ಚೆನ್ನಾಗಿ ಮನಗಂಡಿದ್ದನು. ಅದರಿಂದ ಆಕೆ ತುಂಬಾ ಮಾನಸಿಕ ತೊಂದರೆಯಲ್ಲಿರುವಳೆಂದೂ ಅವನಿಗೆ ಅನಿಸಿತ್ತು. ಆದರೆ ತಾನು ಕಂಡುಕೊಂಡ ಸತ್ಪಥವನ್ನು ಬಿಟ್ಟುಕೊಡುವುದು ಕ್ಷಣಮಾತ್ರವೂ ಸಾಧ್ಯವಿರಲಿಲ್ಲ. ಅವನು ಕ್ರಿಸ್ತನ ಬೋಧನೆಗಳಲ್ಲಿ ಬರುವ ದಯೆ, ಸಹನೆಗಳನ್ನು ಆಚರಣೆಯಲ್ಲಿ ತರಬೇಕೆನ್ನುವವನೇ ಆಗಿದ್ದನು. ಕೊನೆವರೆಗೂ ಹೆಂಡತಿಯ ಮನಸ್ಸನ್ನು ತನ್ನ ವಿಚಾರದ ಹತ್ತಿರಕ್ಕೆ ತಿರುಗಿಸುವ ಪ್ರಯತ್ನ ಮಾಡಬೇಕೆಂದು ನಿರ್ಧರಿಸಿಕೊಂಡಿದ್ದನು. ತನ್ನ ಖಾಸಗೀ ಆಸ್ತಿಯನ್ನು ಬಿಟ್ಟುಕೊಟ್ಟು ಸರಳ, ಸಾದಾ ಜೀವನವನ್ನು ನಡೆಸಲು ನಾಂದಿಯನ್ನು ಹಾಕಬೇಕೆಂದು, ಈ ವಿಷಯದಲ್ಲಿ ಅವಳನ್ನು ಒಪ್ಪಿಸಬೇಕೆಂದು, ಅವನು ಎಷ್ಟೆಲ್ಲ ಪ್ರಯತ್ನಿಸಿದನು! ಅವನು ನಮ್ರನಾದಷ್ಟು ಈ ಬಗೆಯ ಧೂರ್ತತನದಿಂದ ಕಾರ್ಯಸಾಧನೆಯ ಯತ್ನ ನಡೆದಿದೆ ಎಂದು ಸೋಫಿಯಳಿಗೆ ತೋರುತ್ತಿತ್ತು.

ವಿಫಲನಾದ ಟಾಲಸ್ಟಾಯನು ಕೊನೆಗೆ, ಎಲ್ಲ ಆಸ್ತಿಯನ್ನೂ ೧೮೮೧ರ ಕ್ಕಿಂತ ಮುಂಚೆ ಬರೆದ ತನ್ನೆಲ್ಲ ಗ್ರಂಥಗಳ ಹಕ್ಕನ್ನೂ ಹೆಂಡತಿಗೆ ಬಿಟ್ಟುಕೊಟ್ಟನು. ಅದರ ಜೊತೆಗೆ ಅವಳ ಮನಃಪರಿವರ್ತನೆಯ ಆಸೆಯನ್ನೂ ತೊರೆದನು.

ದೈಹಿಕ ಶ್ರಮದ ಕೆಲಸಗಳನ್ನು ಕೈಕೊಳ್ಳುವುದೆಂದರೆ ಟಾಲಸ್ಟಾಯನಿಗೆ ಆಸಕ್ತಿ ಬಹಳ. ಮದುವೆಗೆ ಮುಂಚೆ ಕೂಡ ಅವನು ಆಗಾಗ ಹೊಲಗಳಲ್ಲಿ ದುಡಿಯುತ್ತಿದ್ದನು. ತನ್ನ ದೈನಂ-ದಿನ ಜೀವನಕ್ಕೆ ಬೇಕಾಗುವ ಅಗತ್ಯಗಳನ್ನು ಕಡಿಮೆ ಮಾಡುವ ತನ್ನ ತತ್ವಕ್ಕನುಗುಣವಾಗಿ, ಟಾಲಸ್ಟಾಯನು ತನ್ನ ಕೆಲಸಗಳನ್ನು ತಾನೇ ಮಾಡಿಕೊಳ್ಳುತ್ತಿದ್ದನು. ಮಾಸ್ಕೋದಂಥ ನಗರದಲ್ಲಿ, ಮಕ್ಕಳ ಶಿಕ್ಷಣಕ್ಕಾಗಿ ಮನೆ ಮಾಡಿಕೊಂಡು ಇರುವಾಗ ಟಾಲಸ್ಟಾಯನು ನೀರನ್ನು ತಯಾರಿಸಿಕೊಳ್ಳುತ್ತಿದ್ದನು. ತನ್ನ ಕೋಣೆಯನ್ನು ತಾನೇ ಸ್ವಚ್ಛಮಾಡಿಕೊಳ್ಳುತ್ತಿದ್ದನು.

ಮಾಸ್ಕೋವನ್ನು ಬಿಟ್ಟು ತನ್ನ ಊರಿಗೆ ಮರಳಿದಾಗಲಂತೂ ಅವನಿಗೆ ಸ್ವಾತಂತ್ರ್ಯದ ಪರಮಾವಧಿಯು ಗೋಚರವಾಗುತ್ತಿದ್ದಿತು. ಮಾಸ್ಕೋದಿಂದ ಬರುವಾಗ ತನ್ನ ನೆಚ್ಚಿನ ಮಕ್ಕಳಾದ ಮಾಶಾ ಮತ್ತು ಟಾನಿಯಾ ಇವರನ್ನು ಕರೆತರುತ್ತಿದ್ದನು. ರೈತ ಕುಟುಂಬಗಳಿಗಾಗಿ ಕಟ್ಟಿಗೆಯನ್ನು ಕೂಡಿದು ಪೂರೈಸುವುದು, ಅಶಕ್ತ ಹಾಗೂ ರೋಗಿಗಳಿಗೆ ಕೆಲಸದ ಆಸರೆಯನ್ನು ಕೊಡುವುದು, ಒಂದೇ ಎರಡೇ, ಬಿಡುವಿಲ್ಲದಂತೆ, ದಣಿವಿಲ್ಲದಂತೆ, ಟಾಲಸ್ಟಾಯನೂ ಅವನ ಇಬ್ಬರು ಹೆಣ್ಣು ಮಕ್ಕಳೂ ದುಡಿಯುತ್ತಿದ್ದರು.

'ಯಾಸ್ನಯಾ ಪೋಲ್ಯಾನಾ'ದಲ್ಲಿ ಇವರು ಬಂದಾಗ ಅಡಿಗೆಯವರಿಗೂ ಬಡಿಸುವವರಿಗೂ ಕಾಯಂ ರಜೆ ಇರುತ್ತಿತ್ತು. ಆಹಾರದಲ್ಲಿ ಕೂಡ ಮಿತವ್ಯಯ. ಅದೂ ಶಾಕಾಹಾರ. ಒಂದು ದಿನ ಸೋಫಿಯಳ ಅಕ್ಕ, ಇವರ ಈ ಕಾರಭಾರು ನಡೆದಾಗ ಅಲ್ಲಿಗೆ ಬಂದಳು. ಶಾಕಾಹಾರದ ಇವರ ಅಡಿಗೆ ಅವಳಿಗೆ ಎಳ್ಳಷ್ಟೂ ರುಚಿಸಲಿಲ್ಲ. ಮರುದಿನ ಮೂವರೂ ಸೇರಿ, ಅವಳ ಕುರ್ಚಿಗೆ ಒಂದು ಕೋಳಿಯನ್ನು ಕಟ್ಟಿದರು. ಒಂದು ಹದನಾದ ಚೂರಿಯನ್ನು ಅವಳು ಕುಳಿತಿದ್ದ ಮೇಜಿನ ಮೇಲೆ ಇರಿಸಿದರು. ಅರ್ಥವಾಗದೆ ಆಕೆ ಇದೇನೆಂದಳು. "ಅಲ್ಲ, ನಿಮಗೆ ಮಾಂಸಾಹಾರ ಬೇಕಲ್ಲವೆ? ಈ ಕೋಳಿಯನ್ನು ಕೊಲ್ಲುವ ಎದೆಗಾರರು ಇಲ್ಲಿ ಯಾರೂ ಸಿಗಲಿಲ್ಲ. ಅದಕ್ಕೆಂದು ನಿಮಗಾಗಿ ಈ ಕೆಲಸವನ್ನು ಕಾದಿರಿಸಿದ್ದೇನೆ" ಎಂದನು ಟಾಲಸ್ಟಾಯ!

ಅವನ ವೇಷಭೂಷಣವಂತೂ ತೀರ ಒದಲಾಗಿದ್ದಿತು. ಆಡಿನ ಚರ್ಮದ ಒಂದು ನಿಲುವಂಗಿಯನ್ನು ಹೊಲಿಸಿ, ಅಂಥದೇ ಟೊಪ್ಪಿಗೆ, ಮತ್ತು ಒರಟು ಬೂಟುಗಳನ್ನು ಧರಿಸಿದನೆಂದರೆ ಅವನು ರೈತ ಜನದಂತೆಯೆ ಕಾಣುತ್ತಿದ್ದನು. ಹೊರಗಿನವರಿಗೆ ಅನೇಕ ವೇಳೆ ಅವನ ಗುರುತು ಸಿಕ್ಕದೆ ಹೋಗುತ್ತಿತು. ಆ ಕಾರಣದಿಂದ ಅವನಿಗೆ ಅನಾದರವಾ

ಬಂದ ಮೇಲೆ, ಅವನ ಕ್ಷಮೆ ಬೇಡುತ್ತಿದ್ದರು. ಟಾಲಸ್ಟಾಯನು ಒಮ್ಮೊಮ್ಮೆ ಗೊಬ್ಬರ ಹಾಕುವ ಕೆಲಸ ಮುಗಿಸಿ ಬಂದು, ಅದೇ ವಾಸನೆಯ, ಬೆವರಿನ ಸ್ನಾನದಿಂದ ಕೂಡಿದವನಾಗಿ ಧುತ್ತೆಂದು ಒಳಗೆ ಬಂದರೆ ಸೋಫಿಯಾಳಿಗೆ ಅದನ್ನು ಸಹಿಸುವುದು ಅಸಾಧ್ಯವಾಗುತ್ತಿತ್ತು.

ತನ್ನ ಜೀವನದರ್ಶನವನ್ನು ಲೇಖನ ಪುಸ್ತಕಗಳ ಮೂಲಕ ಪ್ರಚಾರ ಮಾಡಿ ವಿಚಾರವಂತರ ಕಣ್ಣನ್ನು ತೆರೆಯಿಸಿದ ಈ ಕ್ರಾಂತಿಕಾರಿ ಪುರುಷನನ್ನು ನೋಡುವುದಕ್ಕೆ ದಿನವೂ ಅನೇಕರು ಅವನ ಮನೆಗೆ ಬರುತ್ತಿದ್ದರು. ಜೀವನ, ಜಗತ್ತು, ಧರ್ಮಗಳನ್ನು ಕುರಿತು ವಾದವನ್ನು ನಡಸುವವರು ಕೆಲವರಾದರೆ, ತಮ್ಮ ಮಾನಸಿಕ ತೊಳಲಾಟವನ್ನು ತೋಡಿಕೊಂಡು ಮಾರ್ಗದರ್ಶನಕ್ಕಾಗಿ ಬರುವವರೂ ಇದ್ದರು. ತಮ್ಮ ಸಾಂಸಾರಿಕ ತಾಪತ್ರಯಗಳನ್ನು ತೋಡಿಕೊಂಡು, ಧನ ಧಾನ್ಯದ ಸಹಾಯವನ್ನು ಯಾಚಿಸಲು ಬರುವವರೂ ಅನೇಕರಿದ್ದರು. ಸುಮ್ಮನೆ ಟಾಲಸ್ಟಾಯನ ಭೆಟ್ಟಿಗೆಂದು ಬಂದುಹೋಗುವ ನಿರುದ್ಯೋಗಿಗಳೂ ಇದ್ದರು. ಹೀಗಾಗಿ 'ಯಾಸ್ನಯಾ ಪೊಲ್ಯಾನಾ' ಒಂದು ಯಾತ್ರಾಸ್ಥಳವಾದಂತಾಗಿತ್ತು. ಒಮ್ಮೊಮ್ಮೆ ಅಷ್ಟು ದೊಡ್ಡ ಮನೆಯೂ ಅತಿಥಿಗಳಿಂದ ಕಿಕ್ಕಿರಿದು ತುಂಬಿ, ಜಾಗಸಾಲದೆ ಹೋಗುತ್ತಿತ್ತು.

ಇವರ ಆಗಮನದಿಂದ ಅವನ ಪ್ರಕೃತಿಗೆ ವಿಶ್ರಾಂತಿ ದೊರೆಯದೆ ಹೋಗುವುದಲ್ಲಾ ಎಂದು ಅವನ ಹೆಣ್ಣು ಮಕ್ಕಳಿಗೆ ಕಾಳಜಿಯಾದರೆ, ಸೋಫಿಯಾಳಿಗೆ ಇವರೇ ಅವನ ತಲೆ ಕೆಡಿಸುವವರು ಎಂದೆನಿಸುತ್ತಿದ್ದಿತು. ಅವರ ವೇಷ-ಭೂಷಣ, ಅವರ ಒರಟು ನಡೆವಳಿಕೆ, ತಮ್ಮದೇ ಮನೆಯೆಂಬಂತೆ ಅವರು ನಡೆದುಕೊಳ್ಳುವ ರೀತಿ ಅದೆಂತು ಅವಳಿಗೆ ಸರಿಬರಬೇಕು? ಅವರ ಬಗ್ಗೆ ಬಹಿರಂಗವಾಗಿಯೆ ತನ್ನ ಅಸಡ್ಡೆಯನ್ನು ವ್ಯಕ್ತ-ಪಡಿಸುತ್ತಿದ್ದಳು.

ಆದರ ಈ ಆಗಂತುಕರಲ್ಲಿ ದೊಡ್ಡ ಜನರೂ ಇರುತ್ತಿದ್ದರೆಂಬುದನ್ನು ಆಕೆ ಬೇಕೆಂದೇ ಮರೆಯುತ್ತಿದ್ದಳು. ಅವರಲ್ಲಿ ವಿದೇಶಿಯರೂ ಉಚ್ಚ ಅಧಿಕಾರಿಗಳೂ ಸಗದಾರ ಮನೆತನದವರೂ ಸುಪ್ರಸಿದ್ಧ ಲೇಖಕರೂ ಕಲಾವಿದರೂ ಇರುತ್ತಿದ್ದರು. ಖಿಲಕೋವ ಎಂಬ ರಾಜವಂಶೀಯನು ಟಾಲಸ್ಟಾಯನ ಗ್ರಂಥ ಹಾಗೂ ಲೇಖನಗಳನ್ನು ಓದಿಯೇ ಪರಿವರ್ತನ ಹೊಂದಿ ತನ್ನದೆಲ್ಲವನ್ನೂ ತ್ಯಾಗ ಮಾಡಿದ್ದನು. ಟಾಲಸ್ಟಾಯನನ್ನು ಕಾಣಲಿಕ್ಕೆ ಬರುವವರಲ್ಲಿ ಅವನೂ ಒಬ್ಬನಾಗಿದ್ದನು.

## ಚೆರ್ಟಕೊವ್

ಇವನಂತೆಯೆ ಇದ್ದ ಇನ್ನೊಬ್ಬ ವ್ಯಕ್ತಿಯೆಂದರೆ ಚೆರ್ಟಕೊವ್. ೧೮೮೩ರಲ್ಲಿ ಮೊದಲ ಸಲ ಟಾಲಸ್ಟಾಯನಿಗೆ ಇವನ ಭೆಟ್ಟಿಯಾಯಿತು. ೩೦ ವರ್ಷದ, ಧೃಡಕಾಯದ ಈ ಪ್ರಭಾವಶಾಲಿ ಯುವಕನು ಮುಂದೆ ಟಾಲಸ್ಟಾಯನ ಅತ್ಯಂತ ನಿಕಟವರ್ತಿಯಾದನು. ಟಾಲಸ್ಟಾಯನ ತತ್ವಗಳ ಪ್ರಚಾರದಲ್ಲಿ ಜಾಗತಿಕ ಗ್ರಂಥ ಪ್ರಕಟನೆಯ ಕಾರ್ಯದಲ್ಲಿ ಅವನೇ ಬಹುವಾಗಿ ಶ್ರಮಿಸಿದನು. ಚೆರ್ಟಕೊವ್ ಪ್ರಸಂಗ ಬಂದರೆ ಆ ತತ್ವಗಳ ವಿಚಾರದಲ್ಲಿ ಟಾಲಸ್ಟಾಯನಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಬೇಕೆನ್ನುವವನಾಗಿದ್ದನು. ಅವನೂ ತನ್ನ ಸಂಪತ್ತನ್ನು ಬಿಟ್ಟುಕೊಟ್ಟು, ಟಾಲಸ್ಟಾಯನ ಊರಿನ ಹತ್ತಿರದಲ್ಲಿಯೆ ವಾಸಿಸತೊಡಗಿದನು.



ಚರ್ಟಕೋವ್

ಎಲ್ಲರಂತೆ ಸೋಫಿಯಾಳಿಗೂ ಇವನನ್ನು ಮೊದಲಿಗೆ ಕಂಡಾಗ ಆದರಭಾವ ಉಂಟಾಯಿತು.

ಆದರೆ ಟಾಲಸ್ಟಾಯನಿಗೆ ಇವನು ಕ್ರಮೇಣ ಪ್ರೀತ್ಯಾಸ್ಪದ ವ್ಯಕ್ತಿಯಾಗತೊಡಗಿದಾಗ, ಅವಳಿಗೆ ಸಹಿಸಲಾಗಲಿಲ್ಲ. ಗಂಡನ ಮನಸನ್ನು ಕೆಡಿಸುವುದಕ್ಕೂ ತನ್ನ ಬಗ್ಗೆ ಟಾಲಸ್ಟಾಯನಲ್ಲಿ ಇರುವ ಅಳಿದುಳಿದ ಸದ್ಭಾವ ಪ್ರೀತಿಗಳನ್ನು ಮುರುಟಿ ಒಗೆಯುವುದಕ್ಕೂ ಇವನೇ ಕಾರಣ ಎಂಬ ಭಾವನೆ ಅವಳಲ್ಲಿ ಬಲಿಯತೊಡಗಿತು. ಅವನೊಬ್ಬ ಸ್ವಾರ್ಥಿಯೂ ಧೂರ್ತನೂ ಇರುವುದರಿಂದ, ತನ್ನನ್ನೂ ತನ್ನ ಕುಟುಂಬವನ್ನೂ ಅವನಿಂದ ರಕ್ಷಿಸಿಕೊಳ್ಳುವುದಗತ್ಯವೆಂದವಳಿಗೆ ಕಂಡಿತು.

ಚೆರ್ಟಕೊವ್ ಒಂದು ಸಲ ಟಾಲಸ್ಟಾಯನಿಗೆ ಬರೆದ ಪತ್ರದಲ್ಲಿ "ನಾನೂ ನನ್ನ ಪತ್ನಿಯೂ ಪ್ರತಿಯೊಂದು ವಿಷಯದಲ್ಲಿ ಸಮರಸರಾಗಿದ್ದೇವೆ. ನಿಮ್ಮಂಥ ಮಹಾತ್ಮರಿಗೆ ಅನುಕೂಲ ದಾಂಪತ್ಯದ ಸಾಮರಸ್ಯ ಇಲ್ಲದುದು ಒಂದು ದೊಡ್ಡ ಕೊರತೆಯೇ ಸರಿ" ಎಂಬ ಅಭಿಪ್ರಾಯ ಮೂಡಿಸಿದ್ದನು. ಸೋಫಿಯಳ ಆತ್ಮಾಭಿಮಾನಕ್ಕೆ ಇದಕ್ಕಿಂತ ಹೆಚ್ಚಿನ ಪೆಟ್ಟು ಬೇಕಿರಲಿಲ್ಲ.

ಚೆರ್ಟ್‌ಕೋವ್ ಬಂದಂದಿನಿಂದ, ಮತ್ತು ಮನೆಯಲ್ಲಿಯ ಮಕ್ಕಳು ದೊಡ್ಡವಾಗುತ್ತ ನಡೆದಿದ್ದಂತೆ, ಆ ಸಂಸಾರದಲ್ಲಿ ಎರಡು ನಿರ್ದಿಷ್ಟ ಬಣಗಳುಂಟಾದುವು. ಟಾಲಸ್ಟಾಯನ ವಿಚಾರಗಳನ್ನು ಅನುಮೋದಿಸುವವರದೊಂದು, ಸೋಫಿಯಳ ವಿಷಯದಲ್ಲಿ ಸಹಾನುಭೂತಿಯುಳ್ಳವರದಿನ್ನೊಂದು. ಗಂಡಸು ಮಕ್ಕಳು ಸೋಫಿಯಳಿಗೆ ಅನುಕೂಲವಾದವರೇ ಆಗಿದ್ದರು. ಆದರೆ ಬೇರೆ ಬೇರೆ ಉದ್ಯೋಗಗಳಿಗಾಗಿ ಅವರು 'ಯಾಸ್ ಯಾ ಪೊಲ್ಯಾನಾ' ವನ್ನು ಬಿಟ್ಟು ಹೋದ ಮೇಲೆ ಸೋಫಿಯಾ ಒಬ್ಬಳೇ ಆದಳು. ಇತರರೆಲ್ಲರೂ ಒಂದು, ತಾನೊಬ್ಬಳೇ ಬೇರೆ, ಎಂಬ ಮನೆ ಬಲಿತಷ್ಟೂ ಅವಳು ನಯವನ್ನೂ ಸಹನೆಯನ್ನೂ ಮರೆತಳು.

" ಅವರ ದಿನಚರಿಗಳ ಪ್ರತಿಯನ್ನು ಮಾಡುವ ಕೆಲಸ ನನಗೆ ಈ ಹಿಂದೆ ಅದೆಷ್ಟೊಂದು ಪ್ರಿಯವಾದುದಾಗಿತ್ತು! ಈಗ ಮಾಶಾ ಮತ್ತು ಟಾನ್ಯಿಯಾ ಮಾಡುತ್ತಾರೆ. ನನಗೆ ಅವರ ಕೋಣೆಯಲ್ಲಿ ನಿರಾತಂಕವಾಗಿ ಪ್ರವೇಶಿಸುವ ಸ್ವಾತಂತ್ರ್ಯವೂ ಇಲ್ಲ. ಅವರ ಊಟ ಉಡಿಗೆ ಸ್ವಂತದ ಯೋಗಕ್ಷೇಮ ನನಗ ಸೇರಿದ್ದು. ಆದರೆ ನಾನು ಹಾಗೆ ಕೈಹಾಕುವುದು ಇವರಿಗೆಯೇ ಸೇರುವುದಿಲ್ಲ. ಅಸಹ್ಯಪಟ್ಟುಕೊಳ್ಳುತ್ತಾರೆ. ನನ್ನನ್ನು ಎಷ್ಟು ದೂರ ಇಡಲಿಕ್ಕೆ ಸಾಧ್ಯವೊ ಅಷ್ಟನ್ನೂ ಮಾಡುತ್ತಾರೆ. ಏನಾದರೂ ಮಾಡಲಿ? ನನ್ನ ಜೀವವನ್ನೆ ಕೊನೆಗಾಣಿಸಿಬಿಡಲೆ? ಓಡಿ ಹೋಗಿಬಿಡಲೇ ? ''

ಅವಳ ದಿನಚರಿಯಲ್ಲಿಯ ಈ ಮಾತುಗಳು ಸತ್ಯ ಸಂಗತಿಗಳೇ ಆಗಿದ್ದುವು. ಆಕೆ ಮನೆಬಿಟ್ಟು ಹೊರಟರೆ ಗಂಡನಾದಿಯಾಗಿ ಎಲ್ಲರೂ ಹಾಯೆಂದು ಸಮಾಧಾನದ ನೆಮ್ಮದಿಯ ಉಸಿರು ಗರೆಯುತ್ತಿದ್ದರು. ಅವಳು ಹೊರಗಿನ ಕೆಲಸ ಮುಗಿಸಿಕೊಂಡು ಮನೆಗೆ ಬಂದರೆ, ಯಾಕಾದರೂ ಈಕೆ ಬಂದಳು ಎಂಬ ನೋಟ ಇತರರಲ್ಲಿರುತ್ತಿತ್ತು. ಅದರಲ್ಲಿಯೂ ತಾನು ಒಂಬತ್ತು ತಿಂಗಳು ಹೊತ್ತು, ಹೆತ್ತು ಪಾಲನೆ ಮಾಡಿದ ಸ್ವಜಾತಿಯ ಹೆಣ್ಣು ಮಕ್ಕಳೇ ತನಗೆ ತಿರುಗಿಬಿದ್ದರಲ್ಲ ಎಂದು ಅವಳ ಮನಸ್ಸು ಬಹಳ ಗಾಸಿಗೊಂಡಿದ್ದಿತು.

ಸೋಫಿಯಾ ಟಾಲಸ್ಟಾಯನ ಸಮಗ್ರ ಕೃತಿಗಳನ್ನು ಪ್ರಕಟಿಸುತ್ತಿದ್ದಳಷ್ಟೆ. ಈಗ ಅಂಥ ೧೨ ಸಂಪುಟಗಳು ಪ್ರಕಟವಾಗಿದ್ದುವು. ಅಲ್ಲಿಗೆ ಅವನ ಬಹುಮಟ್ಟಿಗಿನ ಬರವಣಿಗೆಯೆಲ್ಲವೂ ಬಂದಂತಾಗಿದ್ದಿತು. ಒಂದು ದಿನ ಸೋಫಿಯಾ ಶಾಂತ ಚಿತ್ತದಿಂದಲೆ ಹೇಳಿದಳು:

"೧೩ನೆಯ ಸಂಪುಟ ಯಾವಾಗ ಹೊರಡುವುದು? ಎಂಬುದಾಗಿ ನನಗೆ ನಿತ್ಯವೂ ಪತ್ರಗಳು ಬರುತ್ತವೆ. ಏನಾದರೂ ಮಾಡಬೇಕಲ್ಲ?"

"ನೀನೇಕೆ ಸುಮ್ಮನೆ ಅದರ ಯೋಚನೆ ಮಾಡುತ್ತೀ. ನಿನ್ನ ಕಾಪಿರೈಟಿನ ಹಕ್ಕು ಅಲ್ಲಿಗೆ ಮುಗಿಯುವುದಲ್ಲ" ಎಂದನು ಟಾಲಸ್ಟಾಯ.

೧೮೮೧ರ ನಂತರದ ಗ್ರಂಥಗಳ ಹಕ್ಕನ್ನು ಸಾರ್ವಜನಿಕವಾಗಿ ಮುಕ್ತ ಮಾಡಬೇಕೆಂಬುದನ್ನು ಟಾಲಸ್ಟಾಯನು ನಿಶ್ಚಯಿಸಿಕೊಂಡಾಗಿದ್ದಿತು. '' ಪ್ರತಿಭೆ ವೈಯಕ್ತಿಕ ಸೊತ್ತು ಅಲ್ಲ.

ಅದನ್ನು ಮಾರಾಟಕ್ಕೆ ಹಚ್ಚಬಾರದು. ಸರ್ವರಿಗೂ ಅದರ ಸಮಾನ ಲಾಭವು ಮುಟ್ಟಬೇಕು'' ಎಂಬುದು ಟಾಲಸ್ಟಾಯನ ಗುರುವಾದ ರಸ್ಕಿನ್ನನ ಸುಪ್ರಸಿದ್ಧ ಹೇಳಿಕೆಯಾಗಿದ್ದಿತು. ಟಾಲಸ್ಟಾಯ್ ಇನ್ನು ಮುಂದಾದರೂ ಅದನ್ನು ಕೃತಿಯಲ್ಲಿ ಇಳಿಸುವ ನಿರ್ಧಾರವನ್ನು ಮಾಡಿದ್ದನು.

ಟಾಲಸ್ಟಾಯನ ಅಲಕ್ಷ್ಯದಿಂದ ಮೊದಲಿನಂತೆ ಉತ್ಪನ್ನ ಬರುತ್ತಿರಲಿಲ್ಲ. ಅವನ ಗ್ರಂಥಗಳ ಶಾಯಿಲ್ಪಿಯಿಂದಲೇ ಕುಟುಂಬಪೋಷಣೆ ಬಹು ಮಟ್ಟಿಗೆ ಸಾಗಿದ್ದಿತು. ಇನ್ನು ಮುಂದೆ ಬರುವ ಅಲ್ಪ ಆದಾಯವನ್ನೂ ಈ ಮೂಲಕ ಕಳೆದುಕೊಳ್ಳುವಂತಾಗುವುದಲ್ಲ ಎಂದು ಆಕೆ ಸಿಡಿಮಿಡಿಗೊಂಡಳು.

" 'ಎಲ್ಲ ಹಕ್ಕುಗಳು ಸಾರ್ವಜನಿಕರ ಸ್ವಾಧೀನ' ಎಂದು ನೀವು ಅಚ್ಚು ಹಾಕಿಸಿದರೆ, ಅದರ ಬುಡದಲ್ಲಿಯೆ ನನ್ನ ಪ್ರಕಟನೆಯನ್ನು ಕೊಡುತ್ತೇನೆ. 'ಟಾಲಸ್ಟಾಯನ ಮಕ್ಕಳನ್ನು ಸಾಯಹೊಡೆದು ಅದರ ಪ್ರಯೋಜನವನ್ನು ಪಡೆದುಕೊಳ್ಳುವಷ್ಟು ಯಾರೂ ನಿರ್ದಯರಾಗಲಾರರು' ಎಂದು."

ಅವಳಿಗೆ ಉತ್ತರವನ್ನು ಕೊಡುವಾಗ, ಟಾಲಸ್ಟಾಯನ ದನಿಯಲ್ಲಿ ಮಿದುತನ ಕಂಡುಬಂದರೂ ಹೃದಯದ ತಳಮಳ ವ್ಯಕ್ತವಾಗುತ್ತಿದ್ದಿತು.

ಅದೇ ಸಂಜೆ, ಸೋಫಿಯಾ "ಕಾಪಿರೈಟನ್ನು ಮುಕ್ತಮಾಡಿರಿ. ನನ್ನದೇನು ಅಭ್ಯಂತರವಿಲ್ಲ" ಎಂದಳು.

ಗಂಡನ ತಳಮಳವನ್ನು ನೋಡಲಾರದೆ ಆಕೆ ಹಾಗೆ ಹೇಳಿದರೂ ಈ ಸಾರ್ವಜನಿಕ ಮುಕ್ತತೆಯಲ್ಲಿ ಅವಳಿಗೆ ಧಕ್ಕೆ ತರುವ ಇನ್ನೊಂದು ಮಾತಿತ್ತು. ತಮ್ಮ ಗಂಡ ಹೆಂಡಿರ ವೈಮನಸ್ಸನ್ನು ಬಹಿರಂಗವಾಗಿಯೆ ಎತ್ತಿತೋರಿಸಿ ಕೊಟ್ಟಂತಾಗುವುದಲ್ಲವೆ ?

ಆಸರೂ ಮತ್ತೊಮ್ಮೆ ಗಂಡನ ಬಳಿ ಹೋಗಿ, ತನ್ನ ಸಮ್ಮತಿಯನ್ನು ಕೊಟ್ಟಳು. ನನ್ನದೆಲ್ಲ ಇನ್ನು ಮುಗಿಸಿಬಿಡುವದೊಳ್ಳೆಯದು ಎಂದು ಕೊಂಡು ರೈಲಿನಡಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಹೊರಟಳು. ದಾರಿಯಲ್ಲಿ ಅವಳ ಭಾವಮೈದುನನು ಭೆಟ್ಟಿಯಾದ್ದರಿಂದ ಮನೆಗೆ ಹಿಂತಿರುಗಿದಳು.

ಜೀವ ಮರಳಿ ಬಂದರೂ ಗಂಡನ ವಿಷಯದ ಮಾರ್ದವ ಭಾವ, ಅವಳ ಹೃದಯ ಪಂಜರದಲ್ಲಿ ಉಳಿಯಲಿಲ್ಲ. ಒಟ್ಟೀ ಅವಳ ಹೃದಯವೆಂಬುದು ಕಲ್ಲಾಯಿತು. ಮನುಷ್ಯತ್ವವೇ ಹೋಟಿಹೋಯಿತು. ಪ್ರಸಂಗ ಬಂದಾಗಲೆಲ್ಲ ಕಾಪಿರೈಟಿನ ಮುಕ್ತತೆಯ ನಿಮಿತ್ತವಾಡಿಕೊಂಡು, ಗಂಡನೊಡನೆ ಜಗಳಾಡುತ್ತಿದ್ದಳು; ಆತ್ಮಹತ್ಯೆ ಮಾಡಿಕೊಳ್ಳುವೆನೆಂದು ಹೆದರಿಸುತ್ತಿದ್ದಳು. ಬೇಸತ್ತ ಟಾಲಸ್ಟಾಯನು ತಾನು ಒದ ಕೆಲವು ಕೃತಿಗಳನ್ನು ಪ್ರಕಟಿಸುವ ಗೋಜಿಗೇ ಹೋಗಲಿಲ್ಲ. ನೈತಿಕವಾಗಿ ಈ ರೀತಿ ಅವನ ಮೇಲೆ ಒತ್ತಾಯ ತಂದು ಹಿಂಸಿಸುವಲ್ಲಿಯೇ ಆಕೆಗೆ ಬಂದಿಷ್ಟು ಮನಶ್ಶಾಂತಿ ದೊರೆಯುತ್ತಿದ್ದಿತು.

ಕೊನೆಗೊಮ್ಮೆ ಟಾಲಸ್ಟಾಯನು ತನ್ನ ಆಸ್ತಿಯನ್ನೆಲ್ಲ ಹಂಚಿಬಿಟ್ಟು ಇದರಿಂದ ಮುಕ್ತನಾಗಬೇಕೆಂದು ನಿರ್ಧರಿಸಿದನು. ಈಗ ಸೋಫಿಯಾ ಹಿರಿಯ ಗಂಡು ಮಕ್ಕಳೊಡನೆಯೂ ಜಗಳಾಡುವಂತಾಯಿತು. ಈ ಸ್ವಾರ್ಥಸಾಧಕರಿಂದ ತನ್ನ ಎಳೆಯ ಅಲ್ಪವಯಿ ಮಕ್ಕಳನ್ನು ರಕ್ಷಿಸುವುದು ಅಗತ್ಯವಿದೆಯೆಂದು ವಾದಿಸತೊಡಗಿದಳು. ಚರ್ಚಿಸಿದಷ್ಟೂ ಈ ಸಮಸ್ಯೆ ಜಟಿಲವಾಗತೊಡಗಿತು. ಕೊನೆಗೆ ಯಾರು ಯಾರು ಏನನ್ನು ಸ್ವೀಕರಿಸಬೇಕೆನ್ನುವ ಬಗ್ಗೆ ಚಿಕ್ಕಮಕ್ಕಳಿಂದ ಚೀಟಿಯನ್ನು ತೆಗೆಯಿಸಲಾಯಿತು.

ಆ ಮೇಲೆಯೂ ಕೆಲಸವು ಸುಸೂತ್ರ ಬಗೆಹರಿಯಲಿಲ್ಲ. ಹಿರಿಯ ಹುಡುಗಿಯರಿಬ್ಬರೂ ತಮಗೆ ಆಸ್ತಿಯಲ್ಲಿ ಪಾಲೇ ಬೇಡವೆಂದು ಹೇಳಿದರು! ತಮ್ಮ ತಾಯಿಯ ಕೃಪಣತನದ ಎದುರು ಇದೆಂತಹ ಹೇಳಿಕೆ! ಆದರೂ ಅವರಿಗಾಗಿ ಸೋಫಿಯಾ ಅವರ ಪಾಲಿನ ಆಸ್ತಿಯನ್ನು ತನ್ನ ಹತ್ತಿರವೇ ಇಟ್ಟುಕೊಂಡಳು.

೧೮೯೫ನೆಯ ವರ್ಷದ ಒಂದು ದಿನ, ಮನೆಯಲ್ಲಿ ಎಲ್ಲರಿಗೂ ಅಚ್ಚುಮೆಚ್ಚಿನವನಾಗಿದ್ದ ಏಳು ವರ್ಷದ ಸುಕುಮಾರ ಮಗು ಇವಾನ್ ಮೆನಿಶ್ಕಾ ತೀರಿಕೊಂಡನು. ಮನೆಯೆಂಬುದು ರೋದನಶಾಲೆಯಾಯಿತು. ಟಾಲಸ್ಟಾಯನ ಹೃದಯಕ್ಕೆ

ಅದು ಬಹುದೊಡ್ಡ ಪೆಟ್ಟನ್ನು ಕೊಟ್ಟಿತು. ಇನ್ನಾರ ಸಾವೂ ಅವನನ್ನು ಇಷ್ಟು ಗಾಸಿಗೊಳಿಸಿರಲಿಲ್ಲ.

ಎಲ್ಲರಿಗಿಂತ ಹೆಚ್ಚು ದುಃಖ ಮಾಡಿದವಳೆಂದರೆ ತಾಯಿ ಸೋಫಿಯಾ. ಅವಳನ್ನು ಸಮಾಧಾನಪಡಿಸುವುದೇ ಟಾಲಸ್ಟಾಯನಿಗೆ ದೊಡ್ಡ ಸಮಸ್ಯೆಯಾಯಿತು. ಸೂತಕದ ದಿನಗಳು ಒಂದೊಂದಾಗಿ ದಾಟಿ ಮುಂದೆ ಹೋದರೂ ದುಃಖದ ಮಬ್ಬು ಅವಳಲ್ಲಿ ಇನ್ನೂ ಕವಿದಿದ್ದಿತು. ಆದರೆ ಆಗ ಅವಳ ಸ್ವಭಾವ, ಮಾತು, ನಡವಳಿಕೆಗಳು ಅದೆಷ್ಟೊಂದು ಸ್ನಿಗ್ಧಗೊಂಡಿದ್ದುವು! ಟಾಲಸ್ಟಾಯನಿಗೆ, ಒಳಗೊಳಗೆಯೆ ಸಮಾಧಾನವೆನಿಸಿತ್ತು. ಸಾವಿನ ಈ ದೊಡ್ಡ ಹೊಡೆತದಿಂದ ತನ್ನ ಸೋಫಿಯಾ ಈ ಇಹಲೋಕದ ಮೋಹವನ್ನು ತುಸು ತೊರೆದಾಳು, ಅಧ್ಯಾತ್ಮದ ಕಡೆಗೆ ಮುಂದೆ ಮನಸ್ಸನ್ನು ಹಾಕಿಯಾಳು, ಎಂದು!

ಆಗಿನ ದಿನಗಳ ದಿನಚರಿಯಲ್ಲಿ ಈ ಒಂದು ಸಂದರ್ಭವಿದೆ: "ಈ ದಿನ ಸೋಫಿಯಾ ಒಬ್ಬ ಪಾದ್ರಿಯ ಒಳಿಗೆ ಹೋಗಿದ್ದಳು. ಆತ ಅವಳಿಗೆ ಸಾಂತ್ವನದ ಮಾತನ್ನು ಆಡುತ್ತ—ಮಕ್ಕಳು ಸತ್ತಾಗ ತಾಯಂದಿರು ಕೂಡಲೇ ದೇವರ ಹತ್ತಿರ ಓಡಿ ಬರುತ್ತಾರೆ. ಆದರೆ ಆ ಮೇಲೆ ಸಾಂಸಾರಿಕ ಮೋಹಗಳಲ್ಲಿ ಮತ್ತೆ ಮಗ್ನರಾಗಿ ದೇವರನ್ನು ಮರೆಯುತ್ತಾರೆ, ಎಂದು ಎಚ್ಚರಿಸಿದ್ದಾನೆ. ಆದರೆ, ಸೋಫಿಯಾಳ ವಿಷಯದಲ್ಲಿ ಹಾಗಾಗುವುದಿಲ್ಲವೆಂದು ನನಗೇಕೊ ಈ ಸಲ ವಿಶ್ವಾಸ ಮೂಡಿದೆ."

ಟಾಲಸ್ಟಾಯನ ದುರ್ದೈವಕ್ಕೆ ಪಾದ್ರಿಯ ಮಾತೇ ನಿಜವಾಯಿತು. ಇಷ್ಟೇ ಅಲ್ಲ. ನಾಲ್ಕು ಜನದ ಕಣ್ಣಲ್ಲಿ ಅದಕ್ಕಿಂತ ಒಂದು ಹೆಜ್ಜೆ ಮುಂದೆ ಹೋದಳು.

## 'ಮುನಿದರೆ ಮಾರಿ'

ಹನ್ನೊಂದು ಮಕ್ಕಳ ತಾಯಿಯಾದ, ೫೨ ವರ್ಷದ ಹೆಣ್ಣುಮಗಳೊಬ್ಬಳು ಪರಪುರುಷನೊಬ್ಬನನ್ನು ಪ್ರೀತಿಸುತ್ತಿದ್ದಾಳೆಂಬುದನ್ನು ಕಲ್ಪಿಸಬಲ್ಲಿರಾ? ಆದರದು ನಿಜ. ವೆನಿಶಾ ತೀರಿಕೊಂಡ ಮೇಲೆ, ಕೊನೆಯ ಮಗಳು ಅಲೆಕ್ಸಾಂಡ್ರಾಳನ್ನು ಕರೆದುಕೊಂಡು ಸೋಫಿಯಾ ಮಾಸ್ಕೋದ ನೃತ್ಯಕೂಟಗಳಿಗೆ ಹೋಗುತ್ತಿದ್ದಳು. ಸೋಫಿಯಾಳಿಗೆ ಸ್ವತಃ ಸಂಗೀತವೆಂದರೆ ಜೀವದ ಜೀವವಾಗಿದ್ದಿತು. ಆಗ ಅವಳಿಗೆ ಟನೇವ್ ಎಂಬ ಪಿಯಾನೊ ವಾದಕನ ಪರಿಚಯವಾಯಿತು. ಅವನು ಬಾರಿಸುವುದನ್ನು ಕೇಳುತ್ತ ತಾಸುಗಟ್ಟಲೆ ಕುಳಿತಿರುತ್ತಿದ್ದಳು.

ಸಂಸಾರದ ತಾಪತ್ರಯಗಳನ್ನೂ ಗಂಡನ ಕ್ರೂರವಾದ ನಿರ್ಲಕ್ಷ್ಯವನ್ನೂ ಮರೆಯುವುದಕ್ಕೆ ಇದೆಂತಹ ಅನುಕೂಲ ಸಾಧನ! ಮುಂದೆ ಅವನೊಂದಿಗೆ ತಿರುಗಾಟ, ಹರಟೆ, ವಿನೋದಗಳಿಗೂ ಆರಂಭವಾಯಿತು.

ಉದ್ಯೋಗವಿಲ್ಲದ ಜನ ಗುಜುಗುಜು ನಗೆಚಾಟಿಕೆ ಮಾಡತೊಡಗಿದರು. 'ಯಾಸ್ನಯಾ ಪೊಲ್ಯಾನಾ' ದವರೆಗೂ ಈ ಸುದ್ದಿ ಹೋಯಿತು. ಟಾಲಸ್ಟಾಯನು ತಪ್ತನಾದನು. ಊರಲ್ಲಿ ಜನ ಮಾತನಾಡಿಕೊಳ್ಳುವುದು ಬೆಳೆದ ಹೆಣ್ಣು ಮಕ್ಕಳಿಗೆ ಅಸಹ್ಯವೆನಿಸಿತು.

ತಾನು ಪ್ರೇಮಿಸುತ್ತಿರುವ ವಿಷಯ ಹೇಗೇ ಇರಲಿ, ಮನೆಯಲ್ಲಿಯ ಇತರರ ಮೇಲೆ ಈ ಪ್ರಸಂಗವು ಮಾಡಿದ ಪ್ರತಿಕ್ರಿಯೆಯು ಬಹಳ ಹಿತವನ್ನುಂಟುಮಾಡಿತಾದ್ದರಿಂದ, ಆಕೆ ಟನೇವನ ಮೈತ್ರಿಯನ್ನು ಇನ್ನಷ್ಟು ಬೆಳೆಸಿದಳು! ಇದು ಸಾಲದೆ ಅವನು ಯಾಸ್ನಯಾ ಪೊಲ್ಯಾನಾದಲ್ಲಿ ವಾಸವಾಗಿರಲೆಂದು ಕೆಲವು ದಿನದ ಮಟ್ಟಿಗೆ ಬರಲಿರುವನೆಂದೂ ಸಾರಿದಳು.

"ಅಯ್ಯೋ! ಈ ಜನ ಎಂತಹ ಹುಚ್ಚರು! ಈ ಇಳಿ ವಯದಲ್ಲಿ ನನಗೆ ಪ್ರೇಮದ ಹುಚ್ಚೇ? ಅಂಥ ಸೌಮ್ಯ ಸುಸಂಸ್ಕೃತ ವ್ಯಕ್ತಿಯ ಒಡನಾಟ, ಸಂಗೀತಗಳಿಂದ ನನ್ನ ಮನಸ್ಸಿಗೆ ಶಾಂತಿ-ಸಂತೋಷಗಳು ಅಪೂರ್ವವಾಗಿ ಲಭ್ಯವಾಗಿರುವುದರಿಂದ ನಾನು ಹೀಗೆ ವರ್ತಿಸುತ್ತಿದ್ದೇನೆ. ಅನ್ನುವವರು ಅಂದುಕೊಳ್ಳಲಿ. ಲಿಯೊವಾನಿಗೆ ಈ ವಿಷಯದಲ್ಲಿ ಅದೇಕೆ ಹೊಟ್ಟೆಕಿಚ್ಚಾಗಬೇಕು?" ಎಂದು ಸೋಫಿಯಾ ತನ್ನ ದಿನಚರಿಯಲ್ಲಿ ಬರೆದಿದ್ದಾಳೆ.

ತನ್ನ ಮನೆಗೆ ಆತನು ವಾಸವಾಗಿರಲು ಬಂದರೆ

ತಾನೇ ಮನೆಬಿಟ್ಟು ಹೋಗುವುದಾಗಿ ಟಾಲಸ್ಟಾಯನು ಸಾರಿದ್ದನು. ಅಂಥವರಲ್ಲಿಯೆ ಟನೇವ್ ಬಂದನು. ತನ್ನ ಆಗಮನವು ಮನೆಯಲ್ಲಿ ಅದೆಂಥ ಭೂಕಂಪವನ್ನುಂಟುಮಾಡಿದೆಯೆಂಬುದನ್ನು ಅರಿತೊಡನೆಯೆ ಸೋಫಿಯಾಳಿಂದ ತಾನೇ ದೂರ ಸರಿದನು.

ಇತ್ತ ವೆನಿಶ್ಕಾನ ಮರಣದಿಂದ ಟಾಲಸ್ಟಾಯನಿಗೆ ಮೊದಲಬಾರಿಗೆ ತನ್ನ ಸಾವಿನ ನೆನಪಾಯಿತು. ಕೂಡಲೇ ಮೃತ್ಯುಪತ್ರದ ಕರಡನ್ನು ತನ್ನ ದಿನಚರಿಯಲ್ಲಿ ಬರೆದನು. ಅದರಲ್ಲಿ ಅವನು ತನ್ನ ಪುಸ್ತಕಗಳ, ತನ್ನ ವಿಚಾರಗಳ ಮಾರಾಟವಾಗುವುದನ್ನು ಕಂಡು ದುಃಖಿತನಾಗಿ, ಮುಂದಾದರೂ ಅವುಗಳ ಮೇಲಿನ ಎಲ್ಲ ಹಕ್ಕನ್ನೂ ತನ್ನ ಕುಟುಂಬವು ಬಿಟ್ಟು ಕೊಡಬೇಕೆಂದು ಕೇಳಿಕೊಂಡಿದ್ದನು. ತನ್ನ ದೇಹವನ್ನು ಸಾದಾ ಜನರ ಶವದಂತೆಯೆ ಮಣ್ಣುಗಾಣಿಸಬೇಕೆಂದೂ ಆಶಯವಿತ್ತಿದ್ದನು.

ಹಿರಿಯ ಮಗಳು ಮಾಶಾ ಅದರ ಮೂರು ಪ್ರತಿಗಳನ್ನು ಗುಟ್ಟಾಗಿ ಮಾಡಿದಳು. ಟಾಲಸ್ಟಾಯನು ಅವುಗಳ ಮೇಲೆ ಸಹಿ ಮಾಡಿದನು. ತನ್ನ ನಡುವಿನ ಮಗನಿಂದ ಸೋಫಿಯಾಳಿಗೆ ಈ ವಿಷಯ ತಿಳಿಯಿತು. ಬಿರುಗಾಳಿಯಂತೆ ಟಾಲಸ್ಟಾಯನ ಕೋಣೆಯೊಳಗೆ ನುಗ್ಗಿದಳು. ಮಗಳು ಮಾಶಾಳನ್ನು ಮನಬಂದಂತೆ ಬೈದಳು. ಆ ಮೃತ್ಯುಪತ್ರದ ಪ್ರತಿಯನ್ನು ಕೊಡಬೇಕು ಎಂದು ಹಟ ಹಿಡಿದಳು. ತಲೆ ಜಜ್ಜಿಕೊಂಡಳು. ಅದನ್ನೆಲ್ಲ ನೋಡುತ್ತ, ಕೇಳುತ್ತ ಟಾಲಸ್ಟಾಯನ ಮುಖದಲ್ಲಿ ಮಾನಸಿಕ ವೇದನೆ ಒತ್ತಾಗಿ ತುಂಬಿಕೊಂಡಿದ್ದಿತು. ಕೊನೆಗೆ ಟಾಲಸ್ಟಾಯನ ಅನಾರೋಗ್ಯವನ್ನು ಗಣಿಸದೆ ತನ್ನ ತಾಯಿಯು ಅವನನ್ನು ಹರಿದು ಮುಕ್ಕುವುದನ್ನು ನಿಲಿಸುವದಿಲ್ಲವಲ್ಲ! ಎಂಬುದಾಗಿ ಯೋಚಿಸಿ ಮಾಶಾ ಅದನ್ನು ಅವಳಿಗೆ ಕೊಟ್ಟುಬಿಟ್ಟಳು.

ಟಾಲಸ್ಟಾಯನ ಅನಾರೋಗ್ಯ! ಹೌದು. ಅವನಿಗೀಗ ಅರವತ್ತು ವರ್ಷ ಸಮೀಪಿಸುತ್ತಿದ್ದಿತು. ಅಜೀರ್ಣ, ವಾಂತಿ, ಹೊಟ್ಟೆ ನೋವುಗಳಿಂದ ಆಗಾಗ ನರಳುತ್ತಲೇ ಇದ್ದನು. ಆಗೆಲ್ಲ ಸೋಫಿಯಾ ಅವನ ಆರೈಕೆಯೆ ತನ್ನ ಏಕಮೇವ ಗುರಿಯೆಂಬಂತೆ ನಿಷ್ಠೆಯಿಂದ ದುಡಿಯುತ್ತಿದ್ದಳು. ಕೊನೆಗೆ ಹವಾ ಬದಲಾವಣೆಗಾಗಿ ಟಾಲಸ್ಟಾಯನನ್ನು ಕ್ರೀಮಿಯಾ ನಾಡಿಗೆ ಕಳಿಸಲಾಯಿತು. ಅಲ್ಲಿ ಏನೆಲ್ಲ ಅನುಕೂಲವಿದ್ದರೂ ಅವನ ಪ್ರಕೃತಿಯಲ್ಲಿ ಸುಧಾರಣೆಯಾಗಲಿಲ್ಲ. ೩-೪ ತಿಂಗಳಲ್ಲಿ ತಿರುಗಿ ಕರೆತಂದುಬಿಟ್ಟರು.

ಅಲ್ಲಿಗೆ ಬಂದೊಡನೆಯೇ ಮತ್ತೊಂದು ಘರ್ಷಣೆ ಆರಂಭವಾಯಿತು. ಟಾಲಸ್ಟಾಯನ ಗಂಡುಮಕ್ಕಳೆಲ್ಲ ದೊಡ್ಡವರಾಗಿ ಸ್ವತಂತ್ರ ವೃತ್ತಿಯಲ್ಲಿದ್ದರು. ಹೆಣ್ಣುಹುಡಿಗೆಯರಲ್ಲಿಬ್ಬಳು ತೀರಿಕೊಂಡಳು. ಇನ್ನೊಬ್ಬಳಾದ ಟಾನಿಯಾ ಮದುವೆಯಾಗಿ ಹೋದಳು. ಟಾಲಸ್ಟಾಯನಿಗಂತೂ ಆಸ್ತಿಯ ವಿಷಯದಲ್ಲಿ ಗಮನವಿರಲಿಲ್ಲ. ಅದರಿಂದ ಉತ್ಪನ್ನವು ಕರಗಿತಲ್ಲದೆ, ಆಗಾಗ ಕಳವುಗಳಾಗತೊಡಗಿದುವು. ಟಾಲಸ್ಟಾಯನು ಕುದುರೆಯನ್ನೇರಿ ತಿರುಗಾಟಕ್ಕೆ ಹೊರಟಾಗ, ದಾರಿಯಲ್ಲಿ ಪೈರಿನ ಕಳ್ಳರನ್ನು ಕಂಡೂ ಕಾಣದವರಂತೆ ಹಿಂತಿರುಗಿ ಬಂದುಬಿಡುತ್ತಿದ್ದನು.

ಸೋಫಿಯಾಳಿಗೆ ಚಿಂತೆ ಹತ್ತಿತು. ಕಾಯುವುದಕ್ಕೆ ಪೋಲೀಸರ ರಕ್ಷಣೆಯನ್ನು ಬೇಡಿದಳು. ವ್ಯಕ್ತಿಸ್ವಾತಂತ್ರ್ಯ, ಸಮಾನತೆಗಳನ್ನು ಬೋಧಿಸುತ್ತಿದ್ದ, ಸರಕಾರವನ್ನೂ ಝಾರಶಾಹಿಯನ್ನೂ ಕಟುಕವಾಗಿ ಟೀಕಿಸುತ್ತಿದ್ದ ಟಾಲಸ್ಟಾಯನಿಗೆ, ಪೋಲೀಸರ ರಕ್ಷಣೆಯನ್ನು ಕೊಡಲು ಅಧಿಕಾರಿಗಳ ಆತುರ ಹೇಳತೀರದು!

ಅವರ ಕಾವಲು ಅವನಿಗೆ ಅತ್ಯಂತ ಸಹಿಸಲಸಾಧ್ಯವಾಗಿತ್ತು. ಒಂದು ಸಲವಂತೂ ಪೋಲೀಸರು ಒಬ್ಬ ರೈತನನ್ನು ಅಪರಾಧದ ಸಂಶಯದಿಂದ ಹಿಡಿದು ಕಟ್ಟಿ, ಬರಡೇಟು ಬಿಗಿದು ಎಳೆದುಕೊಂಡು ಹೋದರು.

ಟಾಲಸ್ಟಾಯನ ಸಹನೆಯ ಕಟ್ಟೊಡೆಯಿತು. "ನನ್ನ ಮುಂದೆಯೆ ಇಂಥ ಅತ್ಯಾಚಾರವೆ? ಅವರನ್ನು ಕೂಡಲೇ ಮರಳಿ ಕಳಿಸಲೇಬೇಕು" ಎಂದನು ಸೋಫಿಯಾ ಹೇಳಿದಳು: "ನೀವಂತೂ ತ್ಯಾಗಮಾಡಿ ಬಿಟ್ಟಿದ್ದೀರಿ! ನಾನೇನು ಮಾಡಲಿ? ಎಲ್ಲವನ್ನೂ ಕಳ್ಳರಿಗೊಪ್ಪಿಸುವುದಕ್ಕೆ ನಿಮ್ಮಿಂದ

ಆಸ್ತಿಯ ಹಕ್ಕನ್ನು ಪಡೆವೆನೆ? ಅಷ್ಟೇ ಏಕೆ? ಆ ದುಷ್ಟರು ಮೊನ್ನೆ ತೋಟಿಗನ ಮೇಲೆ ಗುಂಡು ಹಾರಿಸಿದರು. ನಾಳೆ ನಮಗೂ ಗುಂಡು ಹಾಕುತ್ತಾರೆ'' ಎಂದಳು.

ಮಗಳು ಅಲೆಕ್ಸಾಂಡ್ರಾಳಿಗೆ ತಂದೆಯು, ಅವನ ಉದಾತ್ತ ತತ್ವಗಳ ಈ ಅವಹೇಳನ ಸರಿ ಕಾಣಲಿಲ್ಲ. ಪೋಲಿಸ್ ಕಚೇರಿಗೆ ದುಡುಕಿ, ''ಜನಗಳನ್ನು ನಡಸಿಕೊಳ್ಳುವ ರೀತಿ ಇದಲ್ಲ. ಪೋಲೀಸರು ಅಷ್ಟು ಕ್ರೂರ ರೀತಿಯಿಂದ ರೈತರೊಡನೆ ನಡೆದುಕೊಳ್ಳುವುದೆ?'' ಎಂದು ಎಗರಾಡಿದಳು.

"ಹೋಗಮ್ಮ ಹೋಗು, ಏನು ಹೇಳುವುದನ್ನು ನಿನ್ನ ತಾಯಿಗೇ ಹೇಳು. ಸ್ವಲ್ಪ ತಡೆ. ಹೋಗುವುದಕ್ಕೆ ಮುಂಚೆ, ನಿನ್ನ ತಾಯಿಯಿಂದ ಮೊನ್ನೆ ಬಂದ ಈ ಪತ್ರವನ್ನಷ್ಟು ಓದಿಬಿಡು" ಎಂದು ಅಧಿಕಾರಿ ನುಡಿದನು.

ಆದರೆ ಹೊರಗಿನ ಜಗತ್ತಿಗೆ ಎಷ್ಟರ ಮಟ್ಟಿಗೆ ಇವನ ಆಂತರಿಕ ತೊಳಲಾಟದ ಪರಿಚಯವಾಗಿದ್ದಿತೊ! ಬದಲಾಗಿ ಹೊಸ ಮನ್ವಂತರದ ಪ್ರವಾದಿ, ಅದ್ವಿತೀಯ ಸಾಹಿತಿಯಾದ ಟಾಲಸ್ಟಾಯನಿಗೆ ೮೦ ವರ್ಷ ತುಂಬಿದುವೆಂದು ಸತ್ಕಾರ ಮಾಡುವ ಹವಣಿಕೆ ನಡೆದಿದ್ದಿತು. ಇಂಗ್ಲಂಡ, ಅಮೇರಿಕ, ಭಾರತ ಮತ್ತು ಸಮಗ್ರ ಯುರೋಪ ಖಂಡದ ಮೇಧಾವಿಗಳೂ ಕಲಾವಿದರೂ ಅವನ ಪ್ರಶಂಸಕರಾಗಿದ್ದರು. ಅಂತೆಯೇ ರಶಿಯದ ಸರಕಾರವು ವಿಶೇಷವಾಗಿ ಅವನ ವ್ಯಕ್ತಿ ಸ್ವಾತಂತ್ರ್ಯವನ್ನು ಕಸಿದುಕೊಳ್ಳ ಹೋಗಿರಲಿಲ್ಲ.

ಯಾವುದರಿಂದ ತನ್ನ ಗಂಡನಿಗೆ ಇಷ್ಟೊಂದು ಕೀರ್ತಿ ಲಭಿಸಿದೆ ಎಂಬುದನ್ನು ಸೋಫಿಯಾ ಎಣಿಸಿದಂತೆ ತೋರಲಿಲ್ಲ. ಬದಲಾಗಿ ತನ್ನ ಗಂಡನಿಗೆ ಕೀರ್ತಿಯ ಶನಿ ಹಿಡಿದಿದೆ, ಅವನ ನಿಕಟವರ್ತಿಗಳಿಗೆ ಸ್ವಾರ್ಥಸಾಧನೆಯ ದೃಷ್ಟಿಯಿದೆ ಎಂಬುದಾಗಿ ಭಾವಿಸಿ ಅದರಂತೆ ನಡೆಯುತ್ತಿದ್ದಳು. ಒಮ್ಮೆ ಭಾವನೆಗಳಿಗೆ ಬಲಿಬಿದ್ದಳೆಂದರೆ ಮುಂದೆ ಅವಳು ತನ್ನ ಸ್ವಾಧೀನದಲ್ಲಿ ಉಳಿಯುತ್ತಿರಲಿಲ್ಲ. ತಾನೇನು ಮಾಡುತ್ತಿದ್ದೇನೆ, ಆಡುತ್ತಿದ್ದೇನೆ ಎಂಬುದರ ಪರಿವೆ ಇರುತ್ತಿರಲಿಲ್ಲ. ತನ್ನ ಗಂಡನು ತನಗೆ ಮಾಡಿದ ಅನ್ಯಾಯ ಹಾಗೂ ತನ್ನ ಕರ್ತವ್ಯವೇನೆಂಬುದರ ಬಗ್ಗೆ ಕೆಲವೊಂದು ನಿರ್ದಿಷ್ಟ ವಿಚಾರಗಳನ್ನಿಟ್ಟುಕೊಂಡಿದ್ದಳಾದ್ದರಿಂದ ಅವುಗಳ ಹತ್ತಿರಕ್ಕೆ ಬರುವ ಯಾವುದೇ ಪ್ರಸಂಗವಿದ್ದರೂ ಅದರ ಬಗ್ಗೆ ಕಾದಾಡಲಿಕ್ಕೆ ಸರ್ವಶಕ್ತಿಯನ್ನೂ ಉಪಯೋಗಿಸತೊಡಗಿದಳು.

ಗಂಡನ ಇತ್ತೀಚಿನ ಗ್ರಂಥಗಳ ರಾಯಲ್ಟಿ ಹಣವನ್ನು ತನ್ನಿಂದ ಕಸಿದುಕೊಳ್ಳಲಾಗಿದೆ ಎಂದು ಅವಳ ಖಚಿತ ಅಭಿಪ್ರಾಯವಾಗಿತ್ತು. ಒಂದು ಸಲ ಟಾಲಸ್ಟಾಯನ ಹೊಸ ನಾಟಕದ ಪ್ರಯೋಗವು ನಡೆಯಬೇಕೆಂದಿದ್ದಾಗ ಸೋಫಿಯಾ ಅವರಲ್ಲಿಗೆ ಹೋಗಿ, ರಾಯಲ್ಟಿ ಹಣವನ್ನು ಕೊಡಬೇಕೆಂದು ಹಟ ಹಿಡಿದಳು. ನಿರ್ವಾಹವಿಲ್ಲದೆ ಅವರು ಕೊಡಲು ನಿರ್ಧರಿಸಿ, ಪಾವತಿಯ ಮೇಲೆ ಟಾಲಸ್ಟಾಯನ ಸಹಿಯು ಬೇಕೆಂದರು. ಹೆಂಡತಿಯ ಕರಕರೆಗೆ ಅರ್ಧ ಬೇಸತ್ತು ಟಾಲಸ್ಟಾಯ ಸಹಿ ಮಾಡಿದನು. ಆದರೆ ಕೂಡಲೇ ಅವನ ವಿರುದ್ಧ ಹುಯಿಲೆದ್ದಿತು. ಆಡುವುದೊಂದು, ಮಾಡುವುದೊಂದು—ಎಂಬ ಆರೋಪವನ್ನು ಕೇಳಿ ಟಾಲಸ್ಟಾಯನು ತನ್ನ ದೌರ್ಬಲ್ಯವನ್ನು ಹಳಿದುಕೊಂಡನು.

ಟಾಲಸ್ಟಾಯನು ತನ್ನನ್ನು ಬಿಟ್ಟು ಓಡಿಹೋಗಬೇಕೆನ್ನುವ ವಿಚಾರದಲ್ಲಿದ್ದಾನೆ ಎಂಬುದು ಅವಳ ಇನ್ನೊಂದು ಖಚಿತ ಗ್ರಹಿಕೆಯಾಗಿದ್ದಿತು.

೧೯೦೯ ರಲ್ಲಿ ಸ್ಟಾಕಹೋಮಿನಲ್ಲಿ ಜಾಗತಿಕ ಶಾಂತಿ-ಸಮ್ಮೇಳನಕ್ಕೆ ಬರುವುದಕ್ಕೆ ಟಾಲಸ್ಟಾಯನಿಗೆ ಆಮಂತ್ರಣ ಬಂದಿತು. ಶಾಂತಿ-ಮಾನವತೆಗಳನ್ನು ಬೋಧಿಸುತ್ತಿದ್ದ ಟಾಲಸ್ಟಾಯನಿಗೆ ಅದೊಂದು ಒಳ್ಳೆಯ ಸಂಧಿಯಾಗಿ ಕಂಡಿತು. ಆದರೆ ಒಮ್ಮಿಂದೊಮ್ಮೆಲೆ ಸೋಫಿಯಾ ಅದನ್ನು ವಿರೋಧಿಸಿದಳು. ಜೋರಾಗಿ ಅತ್ತಳು; ಅವನು ಸ್ಟಾಕಹೋಮಿಗೆ ಹೋದ ಮರುಗಳಿಗೆಗೇ ತಾನು ವಿಷ ತೆಗೆದುಕೊಳ್ಳುವುದಾಗಿ ಹೆದರಿಸಿದಳು. ಮೊದಲೇ ಅವಳ ಪ್ರಕೃತಿಯು ಅಸ್ವಸ್ಥವಾಗಿದ್ದಿತು. ನೋವಿನಿಂದ ಸಹಜ ನರಳಿಕೆ ಬರುವುದನ್ನೀಗ ಬೇಕೆಂದೇ ಏರಿಸಿದಳು. ಊಟ ಮುಟ್ಟಲಿಲ್ಲ. ಉಪವಾಸ ಮಾಡುವೆನೆಂದಳು. ಟಾಲಸ್ಟಾಯನು ಅವಳನ್ನು ಸಾಂತ್ವನಗೊಳಿಸಲಿ

ಕ್ಕೆಂದು ಬಂದೊಡನೆಯೇ ಅವಳದು ಒಂದೇ ಬೇಡಿಕೆ.

"ಸ್ಟಾಕಹೋಮಿಗೆ ಹೋಗುವುದಿಲ್ಲವೆಂದು ಮೊದಲು ವಚನಕೊಡಿರಿ. ಆ ಮೇಲೆ ಮುಂದಿನ ಮಾತು."

"ಇಲ್ಲ, ಸೋನಿಯಾ, ನಾನು ಹೋಗಲೇ ಬೇಕಾಗುತ್ತದೆ. ನನ್ನ ಕರ್ತವ್ಯದ ಕರೆಗೆ ನಾನು ಓಗೊಡದೆ ಹೇಗೆ ಸುಮ್ಮನಿರಲಿ?"

"ತಿಳಿಯಿತು! ತಿಳಿಯಿತು! ಹಾಗಿದ್ದರೆ ನನ್ನನ್ನು ಕೊಂದೇ ಬಿಡಿರಿ ನಿಮಗೆ ಹೃದಯ ವಿಲ್ಲ, ದಯೆ ಇಲ್ಲ!"

"ಸಾಕು! ಮೊದಲು ಶಾಂತಳಾಗು. ಆಮೇಲೆ ನೋಡೋಣ."

"ಹಾ! ನೀವು ಹೋಗುವುದಿಲ್ಲ, ಹಾಗಾದರೆ! ಅಲ್ಲವೆ?"

"ಈಗ ನೀನು ಸಂತೈಸಿಕೊ, ಮೊದಲು."

"ಇಲ್ಲ. ನೀವು ಹೋಗುವುದಿಲ್ಲವೆಂದು ವಚನ ಕೊಟ್ಟಿದ್ದೀರಿ! ಮರೆಯಬೇಡಿರಿ!"

"ಸಾಕು ಮಾಡು!" ಎನ್ನುತ ಟಾಲಸ್ಟಾಯನ್ನು ಕೋಣೆ ಬಿಟ್ಟು ಹೊರನಡೆದನು.

ಎರಡು ದಿನಗಳ ನಂತರ ಟಾಲಸ್ಟಾಯನು ಶಾಂತಿ ಪರಿಷತ್ತಿನ ಬಗ್ಗೆ ತಾತ್ವಿಕವಾಗಿ ಚರ್ಚಿಸುತ್ತಿದ್ದಾಗ ಹೇಳಿದನು: "ಶಾಂತಿ! ಶಾಂತಿ ಸಾಧನೆಯ ಬಗ್ಗೆ ಪ್ರತಿಯೊಂದು ದೇಶವೂ ಆತುರ ವಿದ್ದಂತಿದೆ. ಆದರೆ ಪ್ರತಿಯೊಂದು ದೇಶವೂ ಸೈನ್ಯಪಡೆಯನ್ನು ಇಡಬೇಕೆನ್ನುತ್ತದೆ! ನಾನು ಅವರಿಗೆ ಹೇಳಬೇಕೆಂದಿರುವುದಿಷ್ಟೆ—"

ಮಧ್ಯದಲ್ಲಿ ಸೋಫಿಯಾ ತಡೆದಳು, "ಅಲ್ಲ, ನೀವು ಪರಿಷತ್ತಿಗೆ ಹೋಗುವುದಿಲ್ಲವೆಂದಿರಿ. ವಚನ ಕೊಟ್ಟಿದ್ದರಿ!"

"ಸ್ವಲ್ಪ ತಡೆ ಸೋನಿಯಾ, ನನ್ನ ಮಾತನ್ನು ಮುಗಿಸುವೆ."

ಸೋಫಿಯಾ ಕುರ್ಚಿಯಿಂದ ಎದ್ದು ವಾದಕ್ಕೆ ಸುರುವು ಮಾಡಿದಳು. ಟಾಲಸ್ಟಾಯನು ತನ್ನ ಕೋಣೆಗೆ ಹೋದನು. ಅವಳೂ ಅವನನ್ನು ಹಿಂಬಾಲಿಸಿದಳು.

ಶಕ್ಯವಿದ್ದಷ್ಟು ಶಾಂತಸ್ವರದಿಂದ ಟಾಲಸ್ಟಾಯನು ಉತ್ತರ ಕೊಡಲು ಪ್ರಯತ್ನಿಸಿದನು: "ಅಲ್ಲ, ಸೋನಿಯಾ, ನಾನು ಹಾಗೆಲ್ಲಿ ವಚನ ಕೊಟ್ಟಿದ್ದೇನೆ?"

"ಆಂ! ಸುಳ್ಳು ಹೇಳುವಿರಾ? ನನ್ನನ್ನು ಮೋಸ ಮಾಡುವಿರಾ? ನಿಮ್ಮ ಕ್ರೌರ್ಯಕ್ಕೆ ಒಂದು ಮಿತಿಯೇ ಇಲ್ಲ" ಎಂದು ಆಕ್ರೋಶ ಮಾಡಿದಳು.

ಮತ್ತೊಂದು ರಾತ್ರಿ ಈ ಬಗ್ಗೆ ಆಕೆ ಇನ್ನಷ್ಟು ರಂಬಾಟ ಮಾಡಿದ ಮೇಲೆ, ಟಾಲಸ್ಟಾಯನು ತಾನು ಶಾಂತಿಪರಿಷತ್ತಿಗೆ ಹೋಗುವುದಿಲ್ಲವಾಗಿ ವಚನ ಕೊಟ್ಟನು.

## ದಿನಚರಿ

ಟಾಲಸ್ಟಾಯನ ದಿನಚರಿಗಳಲ್ಲಿ ಸಾಂಸಾರಿಕ ವಿಷಯಗಳಲ್ಲದೆ, ಅವನ ತತ್ವಗಳ, ಚಿಂತನೆಗಳ ಉಲ್ಲೇಖಗಳಿರುತ್ತಿದ್ದುವು. ಅವನ ಎಷ್ಟೋ ಹೇಳಿಕೆಗಳ ಉಗಮವು ದಿನಚರಿಯ ಪುಟಗಳಲ್ಲಿರುತ್ತಿದ್ದಿತು. ಅವನ ವಿಚಾರಗಳ ವಿಕಾಸವನ್ನು ತಿಳಿಯುವುದಕ್ಕೆ ದಿನಚರಿಗಳಿಂದ ಎಷ್ಟೋ ಸಹಾಯವಾಗುತ್ತಿತ್ತು. ಹಾಗಾಗಿ ಟಾಲಸ್ಟಾಯನು ತನ್ನ ಆಪ್ತಮಿತ್ರ, ಹಾಗೂ ತನ್ನ ತತ್ವಗಳ ಪ್ರಭಾವಶಾಲಿ ಪ್ರಚಾರಕನಾದ ಚೆರ್ಟಕೋವನಿಗೆ ಅವುಗಳಿಂದ ಮಹತ್ವದ ಭಾಗಗಳ ಪ್ರತಿ ಮಾಡಿಕೊಳ್ಳುವುದಕ್ಕೆ ಅನುಮತಿಯನ್ನು ಕೊಟ್ಟಿದ್ದನು. ಚೆರ್ಟಕೋವನು ಹಲವಾರು ದಿನಚರಿಗಳ ಸಂಪುಟಗಳನ್ನು ತನ್ನ ಮನೆಗೂ ಒಯ್ದಿದ್ದನು.

ಸೋಫಿಯಾಳಿಗೆ ಇದೊಂದು ಹೊಸ ವಿಷಯವು ಸಿಕ್ಕಂತಾಯಿತು. ಕೈ ಹಿಡಿದ ಹೆಂಡತಿಗೂ ಇಲ್ಲದ ಅಧಿಕಾರ ಈ ಹೊರಗಿನವನಿಗೇಕೆ? ಅದೂ ನಮ್ಮ ಸಂಸಾರ ಸುಖವನ್ನೇ ಮಣ್ಣುಗೂಡಿಸಹೊರಟಿರುವ ಆ ಕಪಟಿಗೆ, ನಮ್ಮ ಎಲ್ಲ ಆಂತರ್ಯಗಳನ್ನು ಬಹಿರಂಗಗೊಳಿಸುವುದು ಸರಿಯೆ?

ಟಾಲಸ್ಟಾಯನು ಅವಳನ್ನು ಸಮಾಧಾನಪಡಿಸಲೆತ್ನಿಸುತ್ತಿದ್ದನು. "ಇಲ್ಲ, ಸೋನಿಯಾ, ಕೆಟ್ಟಗಳಿಗೆಯಲ್ಲಿ ನಾನು ಯಾರ ಬಗ್ಗೆ ಬಿರುನುಡಿಗ

ಳನ್ನೂ ಬರೆದಿದ್ದರೆ, ಅದನ್ನು ಯಾವ ಕಾರಣ ದಿಂದಲೂ ಪ್ರಕಟಿಸಬಾರದಾಗಿ ಚೆರ್ಟಕೋವ ನಿಂದ ವಚನ ತೆಗೆದುಕೊಂಡಿದ್ದೇನೆ."

"ಆದರೆ, ನನ್ನನ್ನು ಅವನು ಅತಿಯಾಗಿ ದ್ವೇಷಿ ಸುತ್ತಾನೆ. ನಾಳಿನ ಇತಿಹಾಸಕಾರರಿಗೆ, ಟಾಲ ಸ್ಟಾಯನನ್ನು ಹಾಳುಮಾಡಿದವಳು ಅವನ ಹೆಂಡ ತಿಯೇ ಎಂದು ಸ್ಪಷ್ಟಪಡಿಸುವ ಭಾಗಗಳನ್ನೆಲ್ಲ, ಅವನು ಎತ್ತಿ ತೋರಿಸುವನು! ಇದು ಖಂಡಿತ."

"ಹಾಗೇನಿಲ್ಲ. ನಿನ್ನ ಬಗ್ಗೆ ನಾನು ದಿನಚರಿ ಗಳಲ್ಲಿ ಅನೇಕ ಒಳ್ಳೆಯ ಅಂಶಗಳನ್ನೂ ಬರೆದಿ ದ್ದೇನಲ್ಲ. ಇಷ್ಟೂ ಮೀರಿ ನಿನಗೆ ವಿಶ್ವಾಸವಿರದಿ ದ್ದರೆ, ಈಗ ಬರೆದುಕೊಡುತ್ತೇನೆ. ಅದನ್ನು ನೀನು ಬೇಕಾದ ಹಾಗೆ ಪ್ರಕಟಿಸಬಹುದು."

ಇತ್ತ ಚೆರ್ಟಕೋವನು ತನಗೆ ಬೇಕೆಂದಿದ್ದ ಭಾಗಗಳನ್ನು ಬರೆದುಕೊಂಡು, ದಿನಚರಿಗಳನ್ನು ಹಿಂದಿರುಗಿಸಬಹುದಿತ್ತು. ಆದರೆ ಒಮ್ಮೆ ದಿನಚರಿಗಳು ಈ ಮಾರಿಯ ಕೈಯಲ್ಲಿ ಸಿಕ್ಕರೆ, ಅವನ್ನು ಬೇಕಾದಹಾಗೆ ಮಾರ್ಪಡಿಸಬಹುದು. ನಾಳೆ, ಜಗತ್ತಿನೆದುರು ತಾನು ಒಳ್ಳೆಯವಳು, ಸ್ವಾರ್ಥವನ್ನು ತ್ಯಾಗ ಮಾಡಿದವಳು, ಎಂದು ತೋರಿಸಿಕೊಡಬೇಕಾದರೆ, ಟಾಲಸ್ಟಾಯನು ಕೆಟ್ಟವನೂ ದಾಂಭಿಕನೂ ಎಂದು ಪರ್ಯಾಯ ವಾಗಿ ಸೂಚಿಸಲೇಬೇಕಾಗುವುದು. ಟಾಲಸ್ಟಾ ಯನ ಹೆಸರು, ಪ್ರತಿಷ್ಠೆ, ಔನ್ನತ್ಯಗಳಿಗೆ ಧಕ್ಕೆ ಬಂದಿತೆಂದರೆ, ತನ್ನ ವ್ಯಕ್ತಿತ್ವದ ಅಂತ್ಯವೂ ಆದಂ ತೆಯೇ, ಎಂಬುದು ಅವನ ವಿಚಾರಸರಣಿಯಾಗಿ ದ್ದಿತು.

ಹೀಗೆ ಇಬ್ಬರೂ ಛಲವಾದಿಗಳು, ಸಾವಿನ ಮನೆಯನ್ನು ಸಮೀಪಿಸುತ್ತಿದ್ದ ಹಣ್ಣು ಮುದು ಕನ ಮೇಲೆ ತಮ್ಮ ಹಟವನ್ನೇ ಸಾಧಿಸಹೊರಟ-ರಾದ್ದರಿಂದ, ಟಾಲಸ್ಟಾಯನ ನಿತ್ಯ ಬದುಕು ಮೊದಲಿಗಿಂತ ದುಸ್ಸಹವಾಯಿತು.

"ಅಯ್ಯೋ, ನನ್ನ ದುರ್ವಿಧಿಯೆ! ನನ್ನ ಗಂಡನ ದಿನಚರಿಗಳನ್ನು ನಾನು ಓದಲಾಗದೆ? ಇಷ್ಟು ನಾವು ಜಗಳಾಡಿದರೂ ನಮ್ಮಲ್ಲಿ ಮುಚ್ಚು ಮರೆಯೆಂಬುದೇ ಇರಲಿಲ್ಲ. ....ಸಾವು ಬಂದು ನನ್ನನ್ನೇಕೆ ಕರೆದೊಯ್ಯಬಾರದು?" ಎಂದು ತನ್ನ ದಿನಚರಿಯಲ್ಲಿ ಪುಟಗಳನ್ನು ತುಂಬಿಸಿದಳು.

ಗಂಡನು ಒಪ್ಪುವವರೆಗೂ ಸೋಫಿಯಾ ತನ್ನ ಹುಚ್ಚು ನಡತೆಯನ್ನು ಮುಂದುವರಿಸಿದಳು. ನಡುರಾತ್ರಿಯಲ್ಲಿ ಅವನ ಕೋಣೆಯ ಮುಂದೆಯೆ ಓಡಾಡುತ್ತಿದ್ದಳು. ಹೊರಗಿನ ಕೆಟ್ಟ ಚಳಿಯಲ್ಲಿ ಬಯಲಲ್ಲಿ ನಿಂತು ಎಲ್ಲರಿಗೂ ಕೇಳುವಂತೆ ಹಾಡಿ ಹಾಡಿಕೊಂಡು ಅಳುತ್ತಿದ್ದಳು. ಮಕ್ಕಳು ಹೋಗಿ ಕರೆದರೆ, "ಇಲ್ಲ, ಅವರೇ ಬಂದು ಕರೆದರೆ ಬರು ತ್ತೇನೆ. ಇಲ್ಲವಾದರೆ ಹೀಗೆ ಚಳಿಯಲ್ಲಿ ಮುದ್ದೆ ಯಾಗಿ ಸಾಯುತ್ತೇನೆ" ಎಂದಳು.

ಕ್ರಿಸ್ತನು ಹೇಳಿದಂತೆ, ಅಜ್ಞಾನಿಗಳೂ ಅಶ ಕ್ತರೂ ಆದವರಿಗೆ ದಯೆ, ಸಹಾನುಭೂತಿಗಳನ್ನು ತೋರಿಸಬೇಕು ಎಂಬುದಾಗಿ ಹೆಂಡತಿಯ ವಿಷ ಯದಲ್ಲಿ ಟಾಲಸ್ಟಾಯನು ಇಟ್ಟುಕೊಂಡ ಧೋರ ಣವಾಗಿದ್ದಿತು. ಈ ಪರಿತಾಪದ ಪ್ರಸಂಗದ ಲ್ಲಿಯೂ ಅದೇ ಅವನ ನಡತೆಯಾಗಿತ್ತು.

"ನನ್ನ ದಿನಚರಿಗಳನ್ನು ನಾನು ಯಾರಿಗೂ ಕೊಡುವುದಿಲ್ಲ. ನಾನೇ ಇಟ್ಟುಕೊಳ್ಳುತ್ತೇನೆ. ಹಳೆಯ ಡಯರಿಗಳನ್ನು ಚೆರ್ಟಕೋವನಿಂದ ತರಿಸಿಕೊಳ್ಳುವೆ, ಮತ್ತು ಬ್ಯಾಂಕಿನಲ್ಲಿ ಇಡುವೆ" ಎಂಬುದಾಗಿ ಟಾಲಸ್ಟಾಯನು ಪತ್ರ ಬರೆದು ಅವ ಳಿಗೆ ಕಳಿಸಿಕೊಟ್ಟನು. ಅದರಲ್ಲಿ ತಮ್ಮಿಬ್ಬರ ಸಂಬಂಧವನ್ನೂ ಬಹು ಮಾರ್ಮಿಕವಾಗಿ ವಿವರಿ ಸಿದ್ದಾನೆ:

**"ಭಾವಿ ಚರಿತ್ರಕಾರರು ನನ್ನ ದಿನಚರಿಗ ಳನ್ನು ಓದಿ, ನಿನ್ನ ಬಗ್ಗೆ ತಪ್ಪು ಅಭಿಪ್ರಾಯ ಮಾ ಡಿಕೊಳ್ಳುವರೆಂದು ನಿನಗೆ ಹೆದರಿಕೆ ಇದೆಯ-ಲ್ಲವೆ? ಕೇಳಿಕೊ. ಯೌವನ ಕಾಲದಲ್ಲಿ ನಾನು ನಿನ್ನನ್ನು ಎಷ್ಟೊಂದು ಗಾಢವಾಗಿ ಪ್ರೀತಿಸುತ್ತಿ-ದ್ದೆನೊ, ಈಗೂ ನಿನ್ನನ್ನು ಅಷ್ಟೇ ಆಳವಾಗಿ ಪ್ರೀತಿಸುವೆನೆಂದು ದೇವರ ಹೆಸರನ್ನು ತೆಗೆದು-ಕೊಂಡು ಹೇಳುವೆ. ನನ್ನ ನಿನ್ನ ನಡುವೆ ಸದ್ಯ ಭೇದವಿರುವುದಕ್ಕೆ ಕಾರಣವೆಂದರೆ, ನನ್ನ ವಿಚಾ ರಗಳು ನಿನಗೆ ಹಿಡಿಸಿಲ್ಲ. ನನ್ನ ದಾರಿ ನಿನಗೆ ಸರಿಕಂಡಿಲ್ಲ. ಅದಕ್ಕೆ ನನಗೆ ಎಳ್ಳಷ್ಟೂ ಬೇಸರ**

ವಿಲ್ಲ. ನಿನ್ನ ವಿವೇಕ ನಿನಗೆ ಹೇಗೆ ಹೇಳುವುದೊ ಅದರಂತೆ ನೀನು ನಡೆದುಕೊಳ್ಳುವುದು ಪ್ರಕೃತಿ ನಿಯಮ. ಆದುದರಿಂದ ನಿನಗೆ ಇನ್ನೊಮ್ಮೆ ಹೇಳುವೆ. ನಾನು ದೂರುವುದಿಲ್ಲ.

"ಎರಡನೆಯದಾಗಿ, ಈಚೆಗೆ ನಿನ್ನ ಸ್ವಭಾವವು ಅತ್ಯಂತ ರುಕ್ಷವಾಗತೊಡಗಿದೆ. ಸಣ್ಣ ಮಾತಿಗೂ ನೀನು ಸಿಟ್ಟಿಗೇಳುತ್ತೀ. ತಲೆ ಕಾಯಿಸಿಕೊಳ್ಳುತ್ತೀ. ಇದರಿಂದ ನಿನಗೇ ಹಾನಿ.

"ಮೂರು, ನನ್ನ ನಿನ್ನ ಜೀವನದ ಮಾರ್ಗಗಳೇ ಬೇರೆಯಾಗಿವೆ. ಅದಕ್ಕೆ ದೈವದುರ್ವಿಪಾಕವೇ ಕಾರಣವಲ್ಲದೆ, ನಾನೂ ಅಲ್ಲ, ನೀನೂ ಅಲ್ಲ. ಜೀವನವನ್ನು ನೋಡುವ ನನ್ನ ದೃಷ್ಟಿ ಬೇರೆ. ನಿನ್ನದು ಬೇರೆ. ಇಷ್ಟೇ ಅಲ್ಲ, ತದ್ವಿರುದ್ಧ. ನಮ್ಮಲ್ಲಿ ಪ್ರತಿಯೊಂದು ವಿಷಯದಲ್ಲಿಯೂ ಭಿನ್ನಾಭಿಪ್ರಾಯವಿದೆ. ಹಾಗಿದ್ದರೂ ನಮ್ಮಲ್ಲಿ ಪರಸ್ಪರ ಪ್ರೀತಿಯು ಉಳಿದುಕೊಂಡಿದೆ ಎಂದು ನಾನು ಮತ್ತೆ ಸ್ಪಷ್ಟಪಡಿಸುವೆ. ಅಂತೆಯೆ ಇಂಥ ದಾರುಣಸ್ಥಿತಿಯಲ್ಲಿಯೂ ನಾನು ಗೃಹತ್ಯಾಗವನ್ನು ಮಾಡಿಲ್ಲ.

"ನಾಲ್ಕನೆಯದು: ಚೆರ್ಟಕೋವನ ಆಗಮನ, ನನ್ನ ಅವನ ಮಿತ್ರತ್ವ ನಿನಗೆ ಬೇಸರ ತರಿಸುತ್ತಿದ್ದರೆ, ಇದೋ ವಚನ ಕೊಡುತ್ತೇನೆ, ಇಂದಿನಿಂದ ನಾನು ಅವನನ್ನು ಭೆಟ್ಟಿಯಾಗುವುದಿಲ್ಲ, ಅವನನ್ನು ಇಲ್ಲಿ ಕರೆಸುವುದಿಲ್ಲ."

ಮರುದಿನವೇ ಟಾಲಸ್ಟಾಯನು ಚೆರ್ಟಕೋವನಿಗೆ ಪತ್ರ ಬರೆದು ಹಳೆಯ ದಿನಚರಿಗಳನ್ನು ತರಿಸಿಕೊಂಡನು. ಅವು ಬಂದೊಡನೆ ಅವುಗಳನ್ನು ಬಚ್ಚಿಡಬೇಕೆಂದು ಅಲೆಕ್ಸಾಂಡ್ರಾ ಎಷ್ಟು ಯತ್ನಿಸಿದರೂ ಸೋಫಿಯಾ ಹದ್ದಿನಂತೆ ಎರಗಿ ಅವುಗಳನ್ನು ಕಸಿದುಕೊಂಡು ಓದಿದಳು. ಮರುದಿನ ಅವುಗಳನ್ನು ಕಟ್ಟಿ, ಬ್ಯಾಂಕಿನಲ್ಲಿ ಇಡಲಾಯಿತು.

ಆದರೆ ಟಾಲಸ್ಟಾಯನಿಗೆ, ಮಿತ್ರನನ್ನು ಅಗಲಿ ಇರುವುದು ದುಸ್ಸಹವಾಯಿತು ಚೆರ್ಟಕೋವ್ ಮಾರುತ್ತರ ಬರೆದು, ಈ ವ್ಯವಸ್ಥೆಗೆ ತನ್ನದೇನೂ ಅಭ್ಯಂತರವಿಲ್ಲವೆಂದೂ ಆದರೆ ಹೆಂಡತಿಯನ್ನು ಸಂತಯಿಸುವ ಭರದಲ್ಲಿ, ಅದು ಅತಿಯಾಗಬಾರದು ಎಂದೂ ಎಚ್ಚರಿಸಿದನು.

ಗಂಡನು ಸವಲತ್ತುಗಳನ್ನು ತೋರಿಸಿದಷ್ಟೂ ಹೆಚ್ಚೆಚ್ಚು ಬೇಡಿಕೆಗಳನ್ನು ಮುಂದಿರಿಸುವುದರಲ್ಲಿಯೆ ಅವಳ ಚೇತನಕ್ಕೆ ತೃಪ್ತಿಯುಂಟಾಗುತ್ತಿದ್ದಿತು. ಈಗ ಆಕೆ, ಆ ದಿನಚರಿಗಳನ್ನಿಟ್ಟ ಬ್ಯಾಂಕಿನ ಪಾವತಿಯನ್ನೂ ಮನೆಯಲ್ಲಿನ ಕೀಲಿ ಕೈಯನ್ನೂ ಕೊಡಬೇಕೆಂದು ಕಾಡತೊಡಗಿದಳು.

ದಿನಚರಿಗಳಂತೆಯೇ ಟಾಲಸ್ಟಾಯನ ಲೇಖನ ಪುಸ್ತಕಗಳ ಹಸ್ತಪ್ರತಿಗಳೂ ಅವಳ ಪಾಲಿಗೆ ಅಷ್ಟೇ ಮಹತ್ವದವಾಗಿದ್ದುವು. ಆದರೆ ಅವು ಕೂಡ ಕಪಾಟಿನಲ್ಲಿ ಕೀಲಿಯ ಮರೆಯಲ್ಲಿದ್ದುವು.

ಇದೇ ವೇಳೆಗೆ ಟಾಲಸ್ಟಾಯನ ಮೃತ್ಯುಪತ್ರದ ಸಿದ್ಧತೆ ನಡೆದಿದ್ದಿತು. ಅವನು ತನ್ನೆಲ್ಲ ಕೃತಿಗಳ ಹಕ್ಕನ್ನು ಸಾರ್ವಜನಿಕವಾಗಿ ಮುಕ್ತಮಾಡಬೇಕೆಂದು ಈಗಾಗಲೇ ನಿರ್ಧರಿಸಿ ಅದರಂತೆ ಬರೆದೂ ಬಿಟ್ಟಿದ್ದನು. ಆದರೆ ಅದು ಕಾನೂನಿನ ರೀತ್ಯಾ ನಿಷ್ಕ್ರಿಯವಾಗುವುದೆಂದು ಕಂಡುಬಂದುದರಿಂದ ಬೇರೊಂದನ್ನು ಬರೆಯಿಸಬೇಕಾಗಿದ್ದಿತು.

ಮೃತ್ಯುಪತ್ರದೊಳಗಿನ ವಿಷಯವು ಸೋಫಿಯಳಿಗೆ ತಿಳಿದರೆ ಅನರ್ಥ ಪರಂಪರೆಯಾಗುವುದೆಂದು ತಿಳಿದು, ಅವಳಿಂದ ಇದನ್ನು ಬಚ್ಚಿಟ್ಟಿದ್ದರು. ಮೃತ್ಯುಪತ್ರದ ಕೆಲಸಕ್ಕಾಗಿಯೆ ಟಾಲಸ್ಟಾಯನು ಮಾಸ್ಕೋ ನಗರಕ್ಕೆ ಹೋಗಬೇಕಾಗಿದ್ದಿತು. ಯಥಾರೀತಿ ಸೋಫಿಯಾಳೂ ಸಂಗಡ ಹೊರಟಳು. ಮತ್ತು ಮುಂಚೆಯೆ ಪತ್ರಿಕೆಗಳಲ್ಲಿ ಅವನ ಸಂಚಾರದ ಪ್ರಕಟನೆಯನ್ನು ಕೊಟ್ಟಿದ್ದಳು. ಸಾರ್ವಜನಿಕರಿಗೆಲ್ಲ ತಾನೇ ತನ್ನ ಗಂಡನ ಆಪ್ತ ಕಾರ್ಯದರ್ಶಿನಿ ಎಂಬ ಭಾವನೆ ಉಂಟಾಗಲೆಂಬ ಉದ್ದೇಶ ಅದರಲ್ಲಿದ್ದಿತು.

ತಿರುಗಿ ಬರುವಾಗ, ಟಾಲಸ್ಟಾಯನ ದರ್ಶನಕ್ಕೆ ಜನ ಕಿಕ್ಕಿರಿದು ತುಂಬಿದ್ದಿತು. ಮೊದಲೇ ಪ್ರಕೃತಿಯಿಂದ ಹಣ್ಣಾಗಿದ್ದ ಅವನಿಗೆ ಉಸಿರಾಡಿಸುವುದಕ್ಕೂ ಜನ ಬಿಡಲಿಲ್ಲ. ಗದ್ದಲ ಹಾಗೂ ನೂಕುನುಗ್ಗಲಿನಲ್ಲಿ ಅವನು ಮೂರ್ಛೆ ಹೋದನು.

ನಡುದಾರಿಯಲ್ಲಿ ಅವನಿಗೆ ಎಚ್ಚರ ಉಂಟಾ

ದರೂ ಸ್ಮೃತಿಯು ತಪ್ಪಿಹೋಗಿತ್ತು. ಈ ಹಿಂದೆ ಏನಾಯಿತು, ತಾನು ಎಲ್ಲಿ ಇದ್ದೇನೆ ಎಂಬ ಪರಿವೆ ಅವನಿಗಿರಲಿಲ್ಲ. ಅಂಥದರಲ್ಲಿಯೆ ಅವನನ್ನು ಮನೆಗೆ ಕರತಂದರು.

ಅವನ ಕೋಣೆಯಲ್ಲಿ, ಅಲೆಕ್ಸಾಂಡ್ರಾ ಮತ್ತು ಡಾಕ್ಟರರು ಅವನ ಹಾಸುಗೆಯನ್ನು ಸರಿಪಡಿಸಿ ಮಲಗಿಸುತ್ತಿದ್ದಾಗ ಸೋಫಿಯಾ ಹಾಸಿಗೆಯ ಅಡಿಯಲ್ಲಿ ಹುಡುಕಾಡತೊಡಗಿದಳು.

ನನ್ನೊಬ್ಬನನ್ನೇ ಬಿಟ್ಟುಬಿಡಿರಿ ಎಂದು ಸನ್ನೆಯಿಂದ ಹೇಳುತ್ತಿದ್ದ ಟಾಲಸ್ಟಾಯನು, ಹೆಂಡತಿಯ ಹುಡುಕಾಟವನ್ನು ಕಂಡು, ಏನು ಬೇಕೆಂದು ಕ್ಷೀಣದನಿಯಲ್ಲಿ ಕೇಳಿದನು.

" ಕೀಲಿಕೈ. ಕಪಾಟಿನ ಕೀಲಿಕೈ ಎಲ್ಲಿದೆ ? ನಿಮ್ಮ ದಿನಚರಿ ಹಸ್ತಪ್ರತಿಗಳನ್ನು ಇಟ್ಟಿರುತ್ತೀರೆಲ್ಲಿ ? "

"ಅಪ್ಪಾ, ಕೈ ಮುಗಿಯುತ್ತೇನೆ. ಈಗ ಅವನಿಗೆ ತ್ರಾಸ ಕೊಡಬೇಡ" ಮಗಳು ಹಲುಬಿದಳು.

" ಇಲ್ಲ. ನನಗೆ ಕೀಲಿಕೈ ಕೊಟ್ಟುಬಿಡು. ಖಂಡಿತ ಅವುಗಳನ್ನುಕಳವು ಮಾಡಿಬಿಡುವರು."

"ಯಾರೂ ಒಯ್ಯುವುದಿಲ್ಲ. ನಾನು ಜವಾಬುದಾರಿಯನ್ನು ಹೊರುತ್ತೇನೆ. ಈಗ ಮಾತ್ರ ಅವನನ್ನು ಬಿಟ್ಟು ಬಿಡು."

ಪ್ರಕೃತಿ ಸುಧಾರಣೆಗಾಗಿ, ಟಾಲಸ್ಟಾಯನು ತನ್ನ ಪ್ರೀತಿಯ ನಡುವಿನ ಮಗಳು ಟಾನಿಯಾನ ಕಡೆಗೆ ವಾಸವಾಗಿರಲು ಹೋದನು. ಸೋಫಿಯಾ ಬೆನ್ನಿಗೇ ಬಿದ್ದಳು. ನಾಲ್ಕಾರು ದಿನ ಎಲ್ಲವೂ ಸುಸೂತ್ರವಾಗಿ ಕಳೆಯಿತು. ಆದರೆ ಊರಿಗೆ ಮರಳಿ ಬರುತ್ತಲೂ ಅವಳಿಗೆ ಚೆರ್ಟಕೋವನ ಬಗ್ಗೆ ಅವ್ಯಕ್ತ ಭೀತಿ ಪುನಃ ವ್ಯಕ್ತವಾಗತೊಡಗಿತು. ಅವನ ಮುಖದರ್ಶನ ಮಾಡುವುದಿಲ್ಲ ಎಂಬುದಾಗಿ ಪುನಃ ಗಂಡನಿಂದ ಪ್ರಮಾಣ ಮಾಡಿಸಿದಳು. ಮನೆಯಲ್ಲಿದ್ದ ಅವನ ಸಣ್ಣ ದೊಡ್ಡ ಎಲ್ಲ ಫೋಟೋಗಳನ್ನೂ ಕಿತ್ತೊಗೆದು, ಅಲ್ಲಿ ತನ್ನ ಮತ್ತು ಟಾಲಸ್ಟಾಯನೊಂದಿಗೆ ತಾನು ಕೂಡಿ ತೆಗೆಸಿಕೊಂಡಿದ್ದಂತಹ ಛಾಯಾ ಚಿತ್ರಗಳನ್ನು ಹಾಕಿದಳು.

ಪ್ರತಿದಿನವೂ ಗಂಡನೊಡನೆ ನಡುರಾತ್ರಿಯವರೆಗೆ ವಾದ ಹಾಕುತ್ತಿದ್ದಳು. ನಿದ್ರೆ, ಆಯಾಸ, ಮಾನಸಿಕ ವೇದನೆಗಳಿಂದ ಆತ ಇನ್ನಷ್ಟು ಹಣ್ಣಾದನು. ಆಗಾಗ ಮೂರ್ಛೆ ರೋಗ ಬರುತ್ತಿತ್ತು. ಆಗ ಸೋಫಿಯಳಿಗೂ ಒಂದು ಬಗೆಯ ಬುದ್ಧಿ ಭ್ರಮಣವಾದಂತಾಗಿ, ಕೋಣೆಯಲ್ಲೆಲ್ಲ ಕಾಗದ ಪತ್ರಗಳನ್ನು ಕಿತ್ತಿ ಹಾಕತೊಡಗುತ್ತಿದ್ದಳು. ತನ್ನನ್ನು ಮರೆಯಲ್ಲಿಟ್ಟು ಹೊಸ ಮೃತ್ಯುಪತ್ರವನ್ನು ಸಿದ್ಧಗೊಳಿಸಿದ್ದಾರೆ, ಅದರಲ್ಲಿ ಸ್ಪಷ್ಟವಾಗಿ ಮೋಸವಡಗಿದೆ, ಎಂಬ ಸಂಶಯ ಅವಳನ್ನು ಹಿಡಿದುಕೊಂಡಿತ್ತು.

## ಗೃಹತ್ಯಾಗ

ಎಷ್ಟು ದಿನಗಳಿಂದ ಟಾಲಸ್ಟಾಯನು ಹೆಂಡತಿಯನ್ನೂ ಸಂಸಾರವನ್ನೂ ತೊರೆಯಬೇಕೆಂದು ಅಪೇಕ್ಷಿಸಿದ್ದನು! ತಾನು ಜಗತ್ತಿನ ಮುಂದೆ ಇರಿಸಿದ ಜೀವನ ತತ್ವಗಳಿಗೂ, ತಾನು ನಿತ್ಯ ನಡೆಸುತ್ತಿರುವ ಬದುಕಿಗೂ ಅಜಗಜಾಂತರವಿದ್ದಿತು. ಅದನ್ನು ಸರಿಪಡಿಸಲಾಗುವುದಿಲ್ಲವೆಂದು ಕಂಡು ಬಂದಮೇಲೆ ಗೃಹತ್ಯಾಗವೊಂದೇ ದಾರಿಯುಳಿದಿದ್ದಿತು.

ಆದರೆ ಟಾಲಸ್ಟಾಯನು ಹಾಗೆ ಮಾಡಿರಲಿಲ್ಲ. ಅಖಂಡ ೩೦ ವರ್ಷಗಳ ವರೆಗೆ ಹೆಂಡತಿಯೊಡನೆ ಘರ್ಷಣೆಯುಂಟಾಗಿ, ಮನೆಯೆಂಬುದು ನರಕವಾಸವಾಗಿದ್ದರೂ ಅವನು ಅದನ್ನು ಸಹಿಸಿಕೊಂಡಿದ್ದನು. ತಾನು ಬಿಟ್ಟುಹೋಗುವುದೆಂದರೆ, ತನ್ನ ಅದೇ ತತ್ವಗಳಿಗೆ ವಿರುದ್ಧವಾಗಿ ನಡೆದುಕೊಂಡಂತಾಗುತ್ತಿತ್ತು. ಅವಳನ್ನು ತನ್ನ ಶಾಂತ ಸೌಜನ್ಯದ ನಡೆವಳಿಕೆಯಿಂದ ತಿದ್ದಬೇಕು, ಇಂದಿಲ್ಲ, ನಾಳೆ ಆಕೆ ತನ್ನ ಹಾದಿಗೆ ಬಂದೇ ಬರುವಳು ಎಂಬ ಅಖಂಡ ಆಶಾವಾದವೇ ಇಷ್ಟು ದಿನ ಅವನನ್ನು ಮನೆಯಲ್ಲಿ ಹಿಡಿದಿಟ್ಟಿತ್ತು.

೧೯೧೦ನೆಯ ಇಸವಿಯ ಅಕ್ಟೋಬರ ೨೮ನೆಯ ದಿನಾಂಕದ ನಸುಕಿನಲ್ಲಿ ಚರಮ ಘಟ್ಟ ಒದಗಿ

ಬಂದಿತು. ಹಿಂದಿನ ರಾತ್ರಿ ನಡೆದ ಘಟನೆ ಎಂದಿನಂತೆಯೇ ಇದ್ದಿತಲ್ಲದೆ ಹೆಚ್ಚೇನೂ ಇರಲಿಲ್ಲ.

ಆ ದಿನ ಬೆಳಗಿನ ೩ ಗಂಟೆಗೆ ಕೋಣೆಯಲ್ಲಿ ಏನೊ ಸದ್ದಾಗಿ, ಟಾಲಸ್ಟಾಯನಿಗೆ ಎಚ್ಚರವಾಯಿತು. ಕಣ್ಣು ತೆರೆದು ನೋಡಿದಾಗ, ಕಾಗದದ ಕಟ್ಟುಗಳನ್ನು ಕೆದರುತ್ತಿದ್ದ ಹೆಂಡತಿ ಕಣ್ಣಿಗೆ ಬಿದ್ದಳು. ಅದನ್ನು ಅಲಕ್ಷ್ಯಮಾಡಿ, ಮಲಗಿಕೊಳ್ಳಬೇಕೆಂದು ಮುಸುಕೆಳೆದುಕೊಂಡನು. ನಿದ್ರೆ ಬರಲಿಲ್ಲ. ಅವನು ಎದ್ದು ಕುಳಿತುಕೊಳ್ಳುತ್ತಲೂ ಆಕೆ ಕೋಮಲ ಭಾವನೆಗಳ ಪ್ರತಿಮೂರ್ತಿಯಾಗಿ "ಏನು, ನಿದ್ರೆ ಬರಲಿಲ್ಲವೆ? ಹೀಗೆ ನಿದ್ರೆಗೆಟ್ಟರೆ ಹೇಗೆ! ನಿನ್ನೆ ಸಂಜೆ ನಿಮಗೆ ಸುಳ್ಳೇ ತೊಂದರೆ ಕೊಟ್ಟೆನು. ಇನ್ನು ಮಲಗಿಬಿಡಿರಿ. ದೀಪ ಆರಿಸಲೇ? ನಾನು ಹೋಗಿ ಮಲಗುವೆ" ಎಂದೆಲ್ಲ ಆಡತೊಡಗಿದಳು.

ಅವಳು ಹೋದ ಮರುಗಳಿಗೆಗೇ ಟಾಲಸ್ಟಾಯನು ನಿರ್ಧರಿಸಿದನು. ಇಷ್ಟು ವರ್ಷಗಳ ವರೆಗೆ ಅವನು ಸಹಾನುಭೂತಿ, ಸಹಕಾರಗಳನ್ನು ನೀಡಿದ್ದನು. ಮನುಷ್ಯಸ್ವಭಾವದ ಮಿತಿಯನ್ನು ಮೀರಿ ಸಹನೆಯನ್ನು ತೋರಿಸಿದ್ದನು. ಅವಳ ಬಗ್ಗೆ ಅತ್ಯಂತ ದಯಾಮಯನಾಗಿದ್ದನು. ಅದೆಲ್ಲವೂ ಅವನ ಹೃದಯದ ಕಟ್ಟೊಡೆದು ಹರಿದು ಹೋಗಿಬಿಟ್ಟವು. ಹೆಂಡತಿಯ ಇಷ್ಟುದಿನಗಳ ರಕ್ಕಸತನ, ಬುದ್ಧಿಗೇಡಿತನ, ಸ್ವಾರ್ಥಲೋಲುಪತೆ, ಮಾತ್ಸರ್ಯ ಇವೆಲ್ಲವುಗಳ ನೆನಪು ಮೇಳವಿಸಿ ಬಂದಿತು. ಅವಳಿಂದ ದೂರ ಬಹುದೂರ ಹೋಗುವುದೊಂದೇ ಅವನ ಕಣ್ಣೆದಿರುಗಿರುವ ಸಮಸ್ಯೆಯಾಯಿತು.

ಟಾಲಸ್ಟಾಯನು ಹಾಸಿಗೆಯಿಂದ ಮೆಲ್ಲನೆ ಎದ್ದು ಬಂದು, ತನ್ನ ಡಾಕ್ಟರನನ್ನೂ ಮಗಳು ಅಲೆಕ್ಸಾಂಡ್ರಾಳನ್ನೂ ಎಚ್ಚರಗೊಳಿಸಿದನು. ಅವಶ್ಯವಿರುವ ಸಲಕರಣೆಗಳನ್ನಷ್ಟು ತುಂಬಿಕೊಂಡು, ನಿರ್ಧರಿಸಿದ ಬಂದೇ ತಾಸಿನಲ್ಲಿ ಟಾಲಸ್ಟಾಯನು ಡಾಕ್ಟರನೊಡನೆ ಮನೆಬಿಟ್ಟು ಹೊರಟನು.

ಅವನು ಮನೆಬಿಟ್ಟು ಹೊರಟದ್ದು ಯಾವ ರೀತಿಯಿಂದಲೂ ಆಕಸ್ಮಿಕವಾಗಿರಲಿಲ್ಲ. ಉದ್ವೇಗ ಭರದಲ್ಲಿ ಮಾಡಿದುದಾಗಿರಲಿಲ್ಲ. ಯಾರೂ ಅವನು ತಪ್ಪುಮಾಡಿದ್ದಾನೆಂದು ಭಾವಿಸಲಿಲ್ಲ. ಬದಲಾಗಿ, ಮನೆಬಿಟ್ಟು ಒಮ್ಮೆ ಹೊರಬಂದ ಮೇಲೆ, ಎಲ್ಲಿ ಹೆಂಡತಿಯು ಬೆನ್ನು ಹತ್ತುವಳೋ ಎಂಬ ಭಯ ಅವನಲ್ಲಿ ಮೂಡಿತ್ತು.

ಅವನು ಹೊರಟುಹೋದನೆಂದು ತಿಳಿದ ಮರುಗಳಿಗೆಗೇ, ಸೋಫಿಯಾ ಆಕ್ರೋಶ ಮಾಡಿದಳು. "ಅವನನ್ನು ಅಗಲಿ ನಾನು ಬದುಕಿರುವುದಿಲ್ಲ" ಎಂದು ಸಾರಿ, ಮನೆಯ ಮುಂದಿನ ಹೊಂಡದಲ್ಲಿ ಬಿದ್ದಳು. ಮಗಳು ಅಲೆಕ್ಸಾಂಡ್ರಾ ಅವಳನ್ನು ಮೇಲೆತ್ತಿ ಮನೆಗೆ ತಂದು, ತನ್ನ ಒದ್ದೆಯ ಬಟ್ಟೆಗಳನ್ನು ಬಿಡುವಷ್ಟರಲ್ಲಿ ತಾಯಿ ಮತ್ತೂ ಒಮ್ಮೆ ನೀರಲ್ಲಿ ಹಾರಿಕೊಂಡಿದ್ದಾಳೆ ಎಂಬ ಸುದ್ದಿಯನ್ನು ಕೇಳಿ ಮತ್ತೆ ಅಲ್ಲಿಗೆ ಧಾವಿಸಿದಳು.

ಮರುದಿನ ಅಲೆಕ್ಸಾಂಡ್ರಾ ತನ್ನ ತಂದೆಯನ್ನು ಕೂಡಿಕೊಂಡಳು. ನಾಲ್ಕು ಜನದ ಕಣ್ಣಿಗೆ ಬೀಳುವಂತೆ ಹೊರಬಿದ್ದರೆ ತನ್ನ ಗುರುತು ಹತ್ತಿ ತನ್ನ ಹೆಂಡತಿಯು ಬೆನ್ನಟ್ಟಿ ಬರುವಳೆಂಬ ಕಾರಣದಿಂದ ಟಾಲಸ್ಟಾಯನು ಶಕ್ಯವಿದ್ದ ಮಟ್ಟಿಗೆ ರಾತ್ರಿಯ ಪ್ರಯಾಣವನ್ನು ಕೈಕೊಳ್ಳುತ್ತಿದ್ದನು.

೨-೩ ದಿನಗಳ ಇಂಥ ಅವಿಶ್ರಾಂತ ತಿರುಗಾಟದಿಂದ ಅವನಿಗೆ ಜ್ವರ ಬಂತು. ಒಂದು ಸಣ್ಣ ಸ್ಟೇಶನ್ನಿನ ಪ್ಲ್ಯಾಟಫಾರ್ಮಿನ ಮೇಲೆ ತಿರುಗಾಡುತ್ತ ಟಾಲಸ್ಟಾಯನು ಬೆಚ್ಚಗಿನ ಆಶ್ರಯಕ್ಕಾಗಿ ಕಾಯುತ್ತ ನಿಂತನು. ಸ್ಟೇಶನ್ ಮಾಸ್ತರನು ತನ್ನ ವೇಟಿಂಗ ರೂಮಿನ ಬೀಗದ ಕೈಯನ್ನು ತಂದು, ತನ್ನ ಅಪರಾತ್ರಿಯ ಅತಿಥಿ ಯಾರೆಂದು ತಿಳಿಯುತ್ತಲೇ ಭಯಭಕ್ತಿಯಿಂದ, ನೆರವಾದನು.

ಹೊತ್ತೇರಿದಂತೆ ಟಾಲಸ್ಟಾಯನ ದೇಹಸ್ಥಿತಿಯು ಕೆಡುತ್ತ ಹೋದುದರಿಂದ, ಸಂಗಡಿಗರಿಬ್ಬರಿಗೂ ಕಾಳಜಿಯಾಯಿತು. ತನ್ನ ಅಣ್ಣ ಸರ್ಜಯನಿಗೆ ಡಾಕ್ಟರರನ್ನು ಕರೆತರಲು ಅಲೆಕ್ಸಾಂಡ್ರಾ ತಂತಿ ಕೊಟ್ಟಳು.

ತಡವಿಲ್ಲದೆ ಈ ಸುದ್ದಿ ಪತ್ರಿಕೆಗಳ ಮೂಲಕ ದೇಶದ ತುಂಬೆಲ್ಲ ಹಬ್ಬಿತು. ಜಿಲ್ಲೆಯ ಡಾಕ್ಟ

ರರು ಅಲ್ಲಿಗೆ ಧಾವಿಸಿದರು. ಜನ ಸಮ್ಮರ್ದ ಹೆಚ್ಚಾಗತೊಡಗಿತು. ಸ್ಟೇಶನ ಮಾಸ್ತರನು ತನ್ನ ಪೂಜ್ಯ ಅತಿಥಿಗಾಗಿ ತನ್ನ ಮನೆಯನ್ನು ತೆರವು ಮಾಡಿ ಕೊಟ್ಟನು. ಅಧಿಕಾರಿಗಳು, ಪತ್ರಿಕೋದ್ಯಮಿಗಳಿಂದ ಈ ಚಿಕ್ಕ ಹಳ್ಳಿ ಐತಿಹಾಸಿಕ ಮಹತ್ವವನ್ನು ಪಡೆಯಿತು. ಜಗತ್ತಿನ ಎಲ್ಲ ಪ್ರಮುಖ ರಾಷ್ಟ್ರಗಳ ರಾಜಧಾನಿಗಳಿಗೆ ಟಾಲಸ್ಟಾಯನ ಆರೋಗ್ಯ ಸ್ಥಿತಿಯ ಬಗ್ಗೆ ತಾಸು ತಾಸಿಗೊಮ್ಮೆ ವರದಿಗಳು ಹೋಗತೊಡಗಿದುವು.

ಟಾಲಸ್ಟಾಯನ ಎಲ್ಲ ಸಂಬಂಧಿಕರೂ ಸ್ನೇಹಿತರೂ ನೆರೆದರು. ಆದರೆ ಅವನ ಹೆಂಡತಿ?

ಪತ್ರಿಕೆಗಳ ಮೂಲಕ ತನ್ನ ಗಂಡನಿರುವ ಸ್ಥಳವನ್ನು ತಿಳಿದುಕೊಂಡ ಆಕೆಯೂ ಕೂಡಲೇ ಹೊರಟಳು. ಆದರೆ ನಡುವೆಯೆ ಒಂದು ಚಿಕ್ಕ ಅಪಘಾತವು ಸಂಭವಿಸಿತಾದ್ದರಿಂದ, ಅರ್ಧ ದಿನ ಒಂದು ಸ್ಟೇಶನ್ನಿನ ಯಾರ್ಡಿನಲ್ಲಿ ಕಳೆಯಬೇಕಾಯಿತು. ಇದು ಮುಂದಿನ ಅಪಶಕುನವನ್ನು ಈಗೇ ಸೂಚಿಸುವಂತಿದ್ದಿತೇನೊ. ಅವಳು ಗಂಡನಿರುವ ಸ್ಥಳಕ್ಕೆ ಬಂದರೂ ಡಾಕ್ಟರರೂ ಮಕ್ಕಳೂ ಸೇರಿ, ಟಾಲಸ್ಟಾಯನ ಇಂಥ ಸ್ಥಿತಿಯಲ್ಲಿ ಅವನಿಗೆ ಆಕೆಯ ಮುಖದರ್ಶನ ಮಾಡಿಸುವುದು ಬೇಡವೆಂದು ನಿರ್ಣಯಿಸಿದರು.

ಅವನ ಕರುಳಿನ ಬೇನೆ ಉಲ್ಬಣಾವಸ್ಥೆಗೆ ಮುಟ್ಟಿತು. ಆಗೊಮ್ಮೆ ಈಗೊಮ್ಮೆ ಒಂದೊಂದು ಶಬ್ದವನ್ನು ವಟವಟಿಸುತ್ತಿದ್ದನು. ಇಕ್ಕಿದ ಬಾಗಿಲಿನ ಹೊರಗೆ, ವ್ಹರಾಂಡದಲ್ಲಿ ಸೋಫಿಯಾ ಅತ್ತಿತ್ತ ಅಡ್ಡಾಡುತ್ತಿದ್ದಳು. ಕೇಳುವವರು ಸಿಕ್ಕರೆ ಸಾಕು, ತನ್ನಅಳಲನ್ನು ತೋಡಿಕೊಳ್ಳುತ್ತಿದ್ದಳು. ಬಂದಿದ್ದ ಫೋಟೋಗ್ರಾಫರರಿಗೆ ತನ್ನ 'ಪೋಜ್' ಕೊಟ್ಟು ಫೊಟೊ ತೆಗೆಸಿಕೊಳ್ಳುತ್ತಿದ್ದ ತನ್ನ ತಾಯಿಯನ್ನು ಅಲೆಕ್ಸಾಂಡ್ರಾ ಹೀಗೆಳೆದಾಗ "ನೀವೆಲ್ಲ ನನ್ನನ್ನು ಹೊರಗಿಟ್ಟಾಗ, ಮತ್ತೇನು ಮಾಡುವುದು? ಸಾಯುವ ಗಳಿಗೆಗೂ ಟಾಲಸ್ಟಾಯನ ಬಳಿಗೆ ಅವನ ಹೆಂಡತಿ ಇದ್ದಳೆಂದು ಮಂದಿಗೆ ಗೊತ್ತಾಗಲಿ" ಎಂದಳು.

ನಾಡಿಯ ಬಡಿತ ತೀರ ಕುಂಠಿತವಾದಾಗ ಸೋಫಿಯಳನ್ನು ಒಳಗೆ ಬಿಟ್ಟರು. ಟಾಲಸ್ಟಾಯನು ಕಣ್ಣು ತೆರೆದಿದ್ದರೂ ಸ್ಮೃತಿ ಉಳಿದಿರಲಿಲ್ಲ. ಬಹುಪರಿಯಿಂದ ದುಃಖಿಸುತ್ತಿದ್ದವಳು ಹೆಂಡತಿಯೇ ಎಂದು ಅವನಿಗೆ ಗೊತ್ತಾಗಲಿಲ್ಲ.

## ಕೊನೆಯ ಕತೆ

೧೯೧೦ ರ ನವ್ಹೆಂಬರ ತಿಂಗಳ ೧೦ ನೆಯ ದಿನಾಂಕದ ನಂತರ ಶ್ರೀಮತಿ ಟಾಲಸ್ಟಾಯ್ ೯ ವರ್ಷಗಳ ಕಾಲ ಜೀವಿಸಿದ್ದಳು. ಒಂದು ದಿನವೂ ಆಕೆ ದನಿಯೇರಿಸಿ ಮಾತನಾಡಿದ್ದನ್ನು ಅವಳ ಮಕ್ಕಳು ಕೇಳಿರಲಿಲ್ಲ. ಈ ಅವಧಿಯಲ್ಲಿ ರಶಿಯದ ರಾಜ್ಯಕ್ರಾಂತಿಯಾಗಿ ಅವಳ ಹಕ್ಕಿನ ಆಸ್ತಿಯನ್ನು ಕ್ರಾಂತಿಕಾರರು ಕೊಳ್ಳೆಹೊಡೆದು ವಶಪಡಿಸಿಕೊಂಡಾಗಅವಳಿಗೆ ಏನೂ ಅನಿಸಲಿಲ್ಲ.

ಅವಳ ಸಮಸ್ತ ಚೇತನವೆಲ್ಲ ಉಡುಗಿ ಹೋಗಿ, ಅವಳ ತಲೆಯಲ್ಲಿ ಒಂದೇ ಒಂದು ವಿಚಾರ ಉಳಿದಿದ್ದಿತು. ಅದೆಂದರೆ ತನ್ನ ಗಂಡನ ಸಾವಿಗೆ ತಾನೇ ಕಾರಣಳಾದೆ ಎಂಬುದು. ಸಾಯುವ ಗಳಿಗೆಗೂ ಆಕೆ ಮಕ್ಕಳೆದುರು ಆಡಿದ ಮಾತೂ ಅದೇ.

Edited, printed and published by H. R. Moharay at



Regd. No. B 7487

# KASTUR

January, 1958

A comprehensive Kannada Monthly Digest which circulate
throughout the New Mysore State and commands the highe
number of readers wherever Kannada is spoken in India.
caters to all tastes and is appreciated by all alike.

As. 12
(75 nP.)

## ಈ ಸಂಚಿಕೆಯಲ್ಲಿ

ಓದದೆ ಬಿಡಲಾರದ ಲೇಖಗಳಲ್ಲಿ ಕೆಲವು . . . . . . .

ದ್ರವಿಡ ಕಳಗ ಎಂದರೇನು?
ಗಾಂಧೀಜಿ ಕಣ್ಣೀರು ಮಿಡಿದಾಗ
ನೂರಡಿ ಎತ್ತರದ ತೆರೆಗಳು
ಲಂಡನ್ನಿನಲ್ಲಿ ಭಾರತೀಯರು ಹೇಗಿದ್ದಾರೆ?
ಸುಶಿಕ್ಷಿತನು ರೈತನಾದರೆ—
ಒಂದು ಬೆಕ್ಕು, ಒಂದು ನಾಯಿ ಮತ್ತು
ಒಬ್ಬ ಮನುಷ್ಯ
. . . . . . ಇತ್ಯಾದಿ ಇತ್ಯಾದಿ

ಪುಸ್ತಕ ವಿಭಾಗ

## ಟಾಲ್‌ಸ್ಟಾಯಿಯ ಹೆಂಡತಿ

ಲೋಕಶಿಕ್ಷಣ ಟ್ರಸ್ಟಿನ
ಪ್ರಕಾಶನ